# ಮುನ್ನುಡಿ

ಭಾಷೆಯನ್ನು ಹೊಸ ರೀತಿಯಲ್ಲಿ, ಹೊಸ ದೃಷ್ಟಿಕೋನಗಳಿಂದ ಸುಲಭ ಹಾಗೂ ಹೆಚ್ಚು ವ್ಯವಸ್ಥಿತ ರೀತಿಯಲ್ಲಿ ಅಭ್ಯಸಿಸುವ ಕಾಲವಿದು. ವ್ಯಾಕರಣ ಶಾಸ್ತ್ರವಾಗಿ ಅನಂತರ ಭಾಷಾವಿಜ್ಞಾನವಾಗಿ ಪರಿವರ್ತನೆಗೊಂಡಿರುವುದ ಸಾಂಪ್ರದಾಯಕ ವ್ಯಾಕರಣಾಂಶಗಳನ್ನು ಆಧುನಿಕ ಭಾಷಾವಿಜ್ಞಾನದ ...ಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗುತ್ತಿದೆ. ಸಂಸ್ಕೃತದ ಅಷ್ಟಾ-ಧ್ಯಾಯಿಯ ಕಾಲದಿಂದ ಕನ್ನಡದ ಶಬ್ದಾನುಶಾಸನದ ಕಾಲದವರೆಗೆ ಭಾಷೆಯನ್ನು ...ರ್ದಿಷ್ಟ ಸಾಂಪ್ರದಾಯಕ ಶೈಲಿಯಲ್ಲಿ ವಿವರಿಸುವ ವ್ಯಾಕರಣಗಳ ಒಂದು ...ೊಡ್ಡ ಪರಂಪರೆ ನಮಗಿದೆ. ಹಳೆಯದನ್ನು ಹಿಡಿದುಕೊಂಡೇ ಹೊಸದರೆಡೆಗೆ ಸಾಗಬೇಕು. ಆದರೆ ಹಳೆಯದು ಪರಂಪರೆಯದು ಎಂದು ಅಲ್ಲಿದ್ದ ದೋಷ ಗಳನ್ನು ಕಣ್ಣುಮುಚ್ಚಿ ಸ್ವೀಕರಿಸುವುದು ಸರಿಯಲ್ಲ. ಅದೇ ಕಾಲಕ್ಕೆ ಹಳೆಯ ದೆಲ್ಲವೂ ಹಳಸು ಎಂದು ಹೀಗಳೆಯುವುದೂ ಸರಿಯಲ್ಲ. ನಮ್ಮ ತರುಣ ವಿದ್ಯಾರ್ಥಿ ಬಳಗ ಹಳೆಯ ಹೊಸ ಜ್ಞಾನವನ್ನು ಸರಿಯಾಗಿ ಅರಗಿಸಿಕೊಂಡೇ ಸಾಗಬೇಕಾಗಿದೆ. ಈ ಹಿನ್ನೆಲೆಯಲ್ಲಿ ಅವರಿಗೆ ಕನ್ನಡ ಭಾಷೆಯ ಮೂಲ ಸತ್ತ್ವ ವನ್ನರಿಯಲು ಅನುಕೂಲವಾಗುವಂತಹ ಸಂಕ್ಷೇಪ ವಿವರಣೆಯನ್ನೊಳಗೊಂಡ ಪುಟ್ಟ ಪ್ರಯತ್ನದ ಫಲ ಈ "ಕನ್ನಡ ಭಾಷಾ ಕೈಪಿಡಿ". ನಾನು ಹನ್ನೊಂದು ವರ್ಷಗಳ ಹಿಂದೆ ಬರೆದ 'ಕನ್ನಡ ಭಾಷಾ ವ್ಯಾಸಂಗ' ಗ್ರಂಥವು ನಾಲ್ಕು ಮುದ್ರಣಗಳನ್ನು ಕಂಡುದು ಈ ನಿಟ್ಟಿನಲ್ಲಿ ಇಂಥ ವಿಶಿಷ್ಟ ಕೃತಿಯ ಅಗತ್ಯತೆ ಯನ್ನು ಮನಗಾಣುವಂತಾಯಿತು. ಅಂತೆಯೆ ಆದರಲ್ಲಿಯ ಹಲವು ಉತ್ತಮ ಭಾಗಗಳನ್ನೆಲ್ಲ ಇಲ್ಲಿ ಸಂಕ್ಷೇಪಿಸಿ ಬಳಸಿಕೊಂಡಿದ್ದೇನೆ. ಅದಕ್ಕೆ ಪುಷ್ಟಿ ನೀಡಿ ಕೃತಿ ಬೇಗ ಹೊರಬರಲು ಮುಖ್ಯ ಕಾರಣರಾದವರೆಂದರೆ ನನ್ನ ವಿದ್ಯಾಗುರು ಡಾ. ಎಂ. ಎಂ. ಕಲಬುರ್ಗಿ ಹಾಗೂ ಗುಲಬರ್ಗಾ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಮುಖ್ಯಸ್ಥರಾದ ಡಾ. ಮ. ಗು, ಬಿರಾದಾರ, ಅವರಿಗೆ ನನ್ನ ಅನಂತ ಕೃತಜ್ಞತೆಗಳು. ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ...ನೋಬಲ್ಸ ಮುದ್ರಣಾಲಯದ ಆತ್ಮೀಯ ಶ್ರೀ ರಾಜೇಂದ್ರ ಪಾಟೀಲ ಹಾಗೂ ...ಸಗಾರರಿಗೆ ಪುಸ್ತಕದ ಪ್ರಕಾಶಕರಾದ ಶ್ರೀಮತಿ ಬಸಮ್ಮ ಕೋನೆಕ ಅವರಿಗೂ ...ತಜ್ಞನಾಗಿದ್ದೇನೆ.

...ಲಬರ್ಗಾ

**ಸಂಗಮೇಶ ಸವದತ್ತಿಮಠ**

# ಪ್ರಕಾಶಕರ ಮಾತು

ಡಾ. ಸಂಗಮೇಶ ಸವದತ್ತಿಮಠ ಅವರ 'ಕನ್ನಡ ಭಾಷಾ ಕೈಪಿಡಿ' ನಮ್ಮ ಹನ್ನೊಂದನೆಯ ಪ್ರಕಟನೆ. ಕನ್ನಡ ವ್ಯಾಕರಣ, ಭಾಷಾ ವಿಜ್ಞಾನ ಕ್ಷೇತ್ರದಲ್ಲಿ ಉತ್ತಮ ಗ್ರಂಥಗಳ ಸಂಖ್ಯೆ ತೀರ ಕಡಿಮೆ. ಕನ್ನಡದಲ್ಲಿ ಈ ನಿಟ್ಟಿನಲ್ಲಿ ಬರೆಯುವವರಂತೂ ಇನ್ನೂ ಕಡಿಮೆ. ಡಾ. ಸಂಗಮೇಶ ಸವದತ್ತಿಮಠ ಅವರ ಹೆಸರು ಈ ಕ್ಷೇತ್ರದಲ್ಲಿ ಎದ್ದು ಕಾಣುವಂತಹದು. ಕರ್ನಾಟಕದ ಕೆಲವೇ ಭಾಷಾ ವಿಜ್ಞಾನಿಗಳಲ್ಲಿ ಅವರೊಬ್ಬರು. ಅವರ ದ್ರಾವಿಡ ಭಾಷಾವ್ಯಾಸಂಗ, ಕನ್ನಡ ಭಾಷಾ ವ್ಯಾಸಂಗ ಮುಂತಾದ ಕೃತಿಗಳು ಕರ್ನಾಟಕದ ಒಳಗೂ ಹೊರಗೂ ಅತ್ಯಂತ ಪ್ರಸಿದ್ಧಿ ಪಡೆದ ಕೃತಿಗಳು. ಇದೀಗ ನಮ್ಮ ಪ್ರಕಾಶನದಲ್ಲಿ ಅವರ ಪ್ರಸ್ತುತ ಕೃತಿಯನ್ನು ಪ್ರಕಟಿಸಲು ಅತ್ಯಂತ ಸಂತೋಷವೆನಿಸುತ್ತದೆ. ಈ ಕೃತಿ ಕನ್ನಡ ವ್ಯಾಕರಣ ಹಾಗೂ ಭಾಷಾವಿಜ್ಞಾನಗಳನ್ನು ಅಧ್ಯಯನ ಮಾಡುವ ವಿದ್ಯಾರ್ಥಿಗಳು ಹಾಗೂ ಅಧ್ಯಾಪನ ಮಾಡುವ ಅಧ್ಯಾಪಕರಿಗೆ ಅತ್ಯುತ್ತಮ ಕೈಪಿಡಿಯಾಗುವುದರಲ್ಲಿ ಸಂದೇಹವಿಲ್ಲ.

ಕೃತಿಯನ್ನು ಅಂದವಾಗಿ ಮುದ್ರಿಸಿದ ಗ್ರಿನೋಬಲ್ಸ ಮುದ್ರಣಾಲಯದ ಶ್ರೀ ರಾಜೇಂದ್ರ ಪಾಟೀಲ ಹಾಗೂ ಅವರ ಸಿಬ್ಬಂದಿ ವರ್ಗಕ್ಕೆ, ಇಂಥ ಒಂದು ಉತ್ತಮ ಕೃತಿಯನ್ನು ನಮ್ಮ ಪ್ರಕಾಶನದಲ್ಲಿ ಹೊರತರಲು ಅನುವು ಮಾಡಿಕೊಟ್ಟ ಲೇಖಕರಿಗೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

—ಪ್ರಕಾಶಕರು

# ಪರಿವಿಡಿ





೧

# ಭಾಷೆಯೆಂದರೇನು

1.0 ಭಾಷೆಯೆಂದರೇನು ಎಂಬುದನ್ನು ಸೂತ್ರಬದ್ಧವಾಗಿ ವ್ಯಾಖ್ಯಾನಿಸುವುದು ಸುಲಭವಲ್ಲ. ಆದರೂ ಅದನ್ನು ಸೂತ್ರದಲ್ಲಿ ಹೇಳುವ ಪ್ರಯತ್ನವನ್ನು ಅನೇಕ ಭಾಷಾವಿಜ್ಞಾನಿಗಳು ಮಾಡಿದ್ದಾರೆ. ಕೆಲವು ಮಹತ್ವದ ವ್ಯಾಖ್ಯೆಗಳನ್ನಿಲ್ಲಿ ಗಮನಿಸಬಹುದು. ಎಫ್. ಡಿ. ಸಸೂರ್ ಎಂಬ ವಿಜ್ಞಾನಿ— 'ಮಾನವನು ತನ್ನ ಅನಿಸಿಕೆಗಳನ್ನು ಅಭಿವ್ಯಕ್ತಪಡಿಸುವುದಕ್ಕಾಗಿ ರೂಪಿಸಿಕೊಂಡಿರುವ ಸಂಕೇತಗಳ ವ್ಯವಸ್ಥೆಯೇ ಭಾಷೆ' ಎಂದು ಹೇಳಿದರೆ ಎಡ್ವರ್ಡ ಸಪೀರನು—'ಮನುಷ್ಯನಿಗೆ ಮಾತ್ರ ವಿಶಿಷ್ಟವಾಗಿ ಲಭಿಸಿರುವ ಸಹಜ ಪ್ರವೃತ್ತಿಯಲ್ಲದ ಸಾಂಸ್ಕೃತಿಕ ಕ್ರಿಯೆ', ಎಂದು ಹೇಳಿ ಭಾಷೆ ಇದು ಮುಖ್ಯವಾಗಿ ನಮ್ಮ ಭಾವನೆ, ಅಭಿಪ್ರಾಯ ಹಾಗೂ ಇಚ್ಛೆಗಳನ್ನು ಇತರರಿಗೆ ತಿಳಿಸುವುದಕ್ಕಾಗಿ ಇದ್ದು ಇದರಲ್ಲಿ ಐಚ್ಛಿಕ ಧ್ವನಿಸಂಕೇತಗಳ ಉಚ್ಚಾರ ವ್ಯವಸ್ಥಿತವಾದ ರೀತಿಯಲ್ಲಿ ಇರುತ್ತದೆ, ಎನ್ನುತ್ತಾನೆ. ಐಸ್ಲರ್ ಎಂಬುವವನು 'ಮನಸ್ಸಿರುವ ಯಾವುದೇ ಪ್ರಾಣಿಗಳ ಅನುಭವಗಳ ಅಭಿವ್ಯಕ್ತಿಯೇ ಭಾಷೆ' ಎಂದನು. 'ವ್ಯವಹಾರಕ್ಕಾಗಿ ಸಂಕೇತಗಳಿಂದ ಒಡಗೂಡಿದ ಶಬ್ದ ಸಮುದಾಯವೇ ಭಾಷೆ' ಎಂದು ಭಟ್ಟಾಕಳಂಕ ಹೇಳಿದ್ದಾನೆ. ಹೀಗೆ ಹಲವಾರು ವಿದ್ವಾಂಸರು ಭಾಷೆಯೆಂದರೇನೆಂಬುದನ್ನು ವಿವರಿಸಲು ಹೆಣಗಿದ್ದಾರೆ. ಆದರೆ ಇವುಗಳಲ್ಲಿ ಯಾವುದೂ ಪರಿಪೂರ್ಣವಾದ ವ್ಯಾಖ್ಯೆ ಎನಿಸುವುದಿಲ್ಲ.

1.1 ಬ್ಲಾಕ್ ಮತ್ತು ಟ್ರೇಗರ್ ಎಂಬ ಭಾಷಾ ವಿಜ್ಞಾನಿಗಳು– "ಯಾದೃಚ್ಛಿಕ ಮೌಖಿಕ ಧ್ವನಿಸಂಕೇತಗಳ ವ್ಯವಸ್ಥೆಯಿಂದ ಕೂಡಿ ಸಾಮಾಜಿಕ ಸಮೂಹದ ಸಹಕಾರಕ್ಕೆ ಕಾರಣವಾಗುವುದೇ ಭಾಷೆ" ಎಂಬುದಾಗಿ ಹೇಳಿರುವ ವ್ಯಾಖ್ಯೆ ಬಹುಜನ ವಿದ್ವಾಂಸರ ಮನ್ನಣೆ ಪಡೆದಿದೆ.

1. ಭಾಷೆ ಒಂದು ವ್ಯವಸ್ಥೆ (*System*) 2. ಭಾಷೆಯಲ್ಲಿ ಧ್ವನಿ ಸಂಕೇತಗಳಿರುತ್ತವೆ. (*Vocal Symbols*) 3. ಆ ಸಂಕೇತಗಳು ಯಾದೃಚ್ಛಿಕವಾಗಿರುತ್ತವೆ (*Arbitrary*) 4. ಭಾಷೆ ಸಾಮಾಜಿಕ ಸಹಕಾರ ವನ್ನುಂಟುಮಾಡುತ್ತದೆ (*Social group Co-operates.*) ಎಂಬ ನಾಲ್ಕು ಅಂಶಗಳು ಇಲ್ಲಿವೆ.

## 1.2 ಭಾಷೆ ಒಂದು ವ್ಯವಸ್ಥೆ :

ಭಾಷೆ ಒಂದು ಕಟ್ಟಡವಿದ್ದಂತೆ. ಕಟ್ಟಡ ಕಟ್ಟಲು ಒಂದು ವ್ಯವಸ್ಥಿತ ವಾದ ಕ್ರಮ ಇರುತ್ತದೆ. ಒಂದು ಮನೆಯ ಯೋಜನೆಯಂತೆ ಅದಕ್ಕೆ ನಿರ್ದಿಷ್ಟ ವಾದ ಪ್ರಮಾಣದಲ್ಲಿ ಮಣ್ಣು, ಸಿಮೆಂಟು, ಇಟ್ಟಂಗಿ, ಕಟ್ಟಿಗೆ, ಕಲ್ಲು, ಬಣ್ಣ, ಇತ್ಯಾದಿ ಬೇಕಾಗುತ್ತವೆ. ಅವೆಲ್ಲವನ್ನೂ ವಿಶಿಷ್ಟ ರೀತಿಯಲ್ಲಿ ಬಳಸಿ ಸೌಧ ವನ್ನು ನಿರ್ಮಿಸಲಾಗುತ್ತದೆ. ಹಾಗೆಯೆ ಭಾಷೆಯಲ್ಲೂ ಕೂಡ ಧ್ವನಿ, ಸಂಕೇತ, ಶಬ್ದ, ಅರ್ಥ, ವಾಕ್ಯ ಮುಂತಾದವು ವ್ಯವಸ್ಥಿತವಾದ ರೀತಿಯಲ್ಲಿ ಬಳಕೆ ಗೊಂಡಿರುತ್ತವೆ. ಒಂದೊಂದು ಭಾಷೆಗೂ ತನ್ನದೇ ಆದ ವ್ಯವಸ್ಥೆ, ಕ್ರಮ ಇರುತ್ತದೆ. ಆನುವಂಶಿಕವಾಗಿ ಒಂದೇ ವರ್ಗಕ್ಕೆ ಸೇರುವ ಬೇರೆ ಬೇರೆ ಭಾಷೆ ಗಳಲ್ಲಿ ವ್ಯವಸ್ಥೆ ಮೂಲಭೂತ ಅಂಶಗಳಲ್ಲಿ ಹೋಲುತ್ತಿರುತ್ತದೆ. ಭಿನ್ನ ವರ್ಗಕ್ಕೆ ಸೇರುವ ಭಾಷೆಗಳಲ್ಲಿ ವ್ಯವಸ್ಥೆ ಬೇರೆ ಬೇರೆಯಾಗಿರುತ್ತದೆ. ಉದಾಹರಣೆಗೆ 'ರಾಮನು ರಾವಣನನ್ನು ಕೊಂದನು' ಎಂಬ ರೀತಿ ಕನ್ನಡದಲ್ಲಿದ್ದರೆ ಇದನ್ನೇ ಇಂಗ್ಲಿಶ್‌ನಲ್ಲಿ ***Rama killed Ravana*** (ರಾಮನು ಕೊಂದನು ರಾವಣನನ್ನು) ಎಂದು ಹೇಳಲಾಗುತ್ತದೆ.

ಗೋಪಾಲ ಹಾಲನ್ನು ಕುಡಿಯುತ್ತಾಳೆ– ಎಂದು ಕನ್ನಡದಲ್ಲಿ ಹೇಳಿದರೆ ತಪ್ಪಾಗುತ್ತದೆ. ಏಕೆಂದರೆ ಗೋಪಾಲ ಪುಲ್ಲಿಂಗವಿರುವುದರಿಂದ ಕುಡಿಯುತ್ತಾನೆ ಎಂಬ ರೂಪವೇ ಕೊನೆಯಲ್ಲಿರಬೇಕೆಂಬ ವ್ಯವಸ್ಥೆಯಿದೆ, ಹಾಗೆಯೇ ಶಕುಂತಲೆ ಸೀರೆಯಿಂದ ಉಡುತ್ತಾಳೆ, ಎನ್ನಲೂ ಬಾರದು. ಇಲ್ಲಿ ಲಿಂಗಕ್ಕೆ ಸಂಬಂಧಿಸಿದಂತೆ ಉಡುತ್ತಾಳೆ ರೂಪವು ಸರಿ ಇದ್ದರೂ 'ಸೀರೆಯಿಂದ' ಎಂಬುದು 'ಸೀರೆಯನ್ನು' ಆಗಬೇಕು. ಆದ್ದರಿಂದ ಯಾವ ರೂಪವನ್ನು ಎಲ್ಲಿಡಬೇಕು, ಅವುಗಳಿಗೆ ಯಾವ ಪ್ರತ್ಯಯ ಹಚ್ಚಬೇಕು, ಎಂಬುದೆಲ್ಲ ಸಮಾಜ ಒಪ್ಪಿಕೊಂಡ ವ್ಯವಸ್ಥೆಗೆ

ಅನುಗುಣವಾಗಿಯೇ ನಡೆಯಬೇಕು. ಭಾಷೆಯಲ್ಲಿ ವ್ಯವಸ್ಥೆ ಎಲ್ಲ ಮಟ್ಟದಲ್ಲೂ ಇರುತ್ತದೆ. ಭಾಷೆ ಬದಲಾಗುತ್ತ ಸಾಗಿದರೂ ಸಾಮಾಜಿಕ ಒಪ್ಪಿಗೆಯೊಡನೆ ವ್ಯವಸ್ಥೆಯೂ ಅದಕ್ಕನುಗುಣವಾಗಿ ಹೊಂದಿಕೊಳ್ಳುತ್ತ ಸಾಗುತ್ತದೆ. ಹಲ್ಲಿ-ಗಿಲ್ಲಿ, ಮಾತು-ಗೀತು, ಚಪ್ಪಲಿ–ಗಿಪ್ಪಲಿ, ರೊಟ್ಟಿ–ಗಿಟ್ಟಿ, ಕಟಿಗಿ–ಗಿಟಿಗಿ ಇಂಥ ಹಲವಾರು ಪ್ರತಿಧ್ವನಿ ಶಬ್ದಗಳ *(Echo words)* ಉತ್ತರಾರ್ಧದಲ್ಲಿ 'ಗಿ' ನಿಯಮಿತವಾಗಿ ಬಂದಿರುವುದು ಎದ್ದು ತೋರುತ್ತದೆ. ಭಾಷೆಯಲ್ಲಿ ಒಂದು ಕ್ರಮವಿರುವುದರಿಂದಲೇ ಅದನ್ನು ವಿವರಿಸಲು ಸಾಧ್ಯವಾಗುತ್ತದೆ. ಒಂದು ಕಾಲದ ಭಾಷಾ ವ್ಯವಸ್ಥೆ ಎಲ್ಲ ಕಾಲದಲ್ಲೂ ಒಂದೇ ಬಗೆಯಾಗಿದ್ದು ಸ್ಥಿರವಾಗಿ ಉಳಿಯುತ್ತದೆ ಎಂದು ಹೇಳಲಾಗದು. ಬಹಳ ಕಾಲ ಬದಲಾಗದೇ ಉಳಿಯಲೂ ಬಹುದು. ಇಲ್ಲವೆ ಯಾವ ಕಾಲದಲ್ಲಾದರೂ ಅದು ಬದಲಾವಣೆಗೆ ಒಳಪಡ ಬಹುದು.

## 1.3 ಧ್ವನಿಸಂಕೇತಗಳು :

ಮನುಷ್ಯ ಜೀವನದಲ್ಲಿ ತನ್ನ ವ್ಯವಹಾರಕ್ಕಾಗಿ ಅನೇಕ ಬಗೆಯ ಸಂಕೇತ ಗಳನ್ನು ಬಳಸುತ್ತಾನೆ. ತನ್ನ ಕಣ್ಣಳತೆಯಲ್ಲಿರುವ ಒಬ್ಬ ವ್ಯಕ್ತಿಯನ್ನು ಕರೆಯ ಬೇಕಾದರೆ ಕೈ ಬೀಸಬಹುದು, ಅಲ್ಲವೆ ತಲೆ ಅಲುಗಾಡಿಸಬಹುದು, ಚಪ್ಪಾಳೆ ತಟ್ಟ ಬಹುದು. ಶಿಳ್ಳು ಹಾಕಬಹುದು, ಕಣ್ಣು ಹೊಡೆಯಬಹುದು, ಹೀಗೆಯೇ ಹಸಿರುದೀಪ ಅಥವಾ ಹಸಿರು ನಿಶಾನೆ ತೋರಿಸಿದರೆ ರೈಲು ಹೊರಡುತ್ತದೆ, ಕೆಂಪು ತೋರಿಸಿದರೆ ನಿಲ್ಲುತ್ತದೆ, ನಿಲ್ದಾಣದಲ್ಲಿ ಕೈ *(Signal)* ಕೆಳಕ್ಕೆ ಇಳಿದಿದ್ದರೆ ರೈಲು ಒಳಪ್ರವೇಶಿಸುತ್ತದೆ. ಇಲ್ಲದಿದ್ದರೆ ನಿಲ್ಲುತ್ತದೆ. ಕೆಂಪು ತ್ರಿಕೋನವು ಕುಟುಂಬ ಕಲ್ಯಾಣವನ್ನು ಸೂಚಿಸುತ್ತದೆ, ಕರೆಗಂಟೆಯ ಗುಂಡಿ ಯನ್ನು ಒತ್ತಿದರೆ ಮನೆಬಾಗಿಲು ತೆರೆಯುತ್ತಾರೆ. ಟೇಬಲ್ ಗಂಟೆಯನ್ನು ಬಾರಿಸಿದರೆ ಸೇವಕ ಹಾಜರಾಗುತ್ತಾನೆ. ಕಂಡಕ್ಟರ ಶೀಟಿ ಊದಿ ಬಸ್ಸನ್ನು ನಿಲ್ಲಿ ಸುವ, ಹೊರಡಿಸುವ ನಿಯಂತ್ರಣ ಪಡೆಯುತ್ತಾನೆ. ಇವೆಲ್ಲವುಗಳು ಸಂಕೇತಗಳ ಮೂಲಕ ನಡೆಯುವ ಚಟುವಟಿಕೆಗಳು. ಸಂಕೇತಗಳಲ್ಲಿ ಕಣ್ಣಿಗೆ ಗೋಚರಿಸು ವಂಥವು, ಕಿವಿಗೆ ಕೇಳಿಸುವಂಥವು, ಸ್ಪರ್ಶಕ್ಕೆ ಅನುಭವವೇದ್ಯವಾಗುವಂಥವು ಎಂದು ಮೂರು ಬಗೆ. ರೇಲ್ವೆ ಸಿಗ್ನಲ್, ನಿಶಾನೆ, ಕೆಂಪು ತ್ರಿಕೋನ ಇತ್ಯಾದಿ

ದೃಶ್ಯ ಸಂಕೇತಗಳಾದರೆ ಗಂಟೆ, ಶೀಟಿ ಇತ್ಯಾದಿ ಶ್ರವಣ ಸಂಕೇತಗಳು. ಕುರುಡರು ಸ್ಪರ್ಶಮೂಲಕ ವಸ್ತುಗಳನ್ನು ಗುರುತಿಸುತ್ತಾರೆ. ಅವರ ವಿದ್ಯಾಭ್ಯಾಸಕ್ಕಾಗಿ ಸ್ಪರ್ಶಕ್ಕೆ ಅನುಕೂಲವಾಗುವಂತೆ ಸಂಕೇತಗಳಿರುತ್ತವೆ. ಅವು ಸ್ಪರ್ಶ ಸಂಕೇತಗಳು. ಇಂತಹ ವಿವಿಧ ಬಗೆಯ ಸಂಜ್ಞೆ, ಸಂಕೇತಗಳನ್ನು ಬಳಸಿ ಜಗತ್ತಿನಲ್ಲಿ ಸೀಮಿತವಾದ ಬಗೆಯಲ್ಲಿ ಸಮಾಚಾರ, ಭಾವ, ಸಂದೇಶ ಮುಂತಾದವುಗಳ ವಿನಿಮಯವೂ ನಡೆಯುತ್ತಿದ್ದಂತೆ ತೋರುತ್ತದೆ. ಅಮೇರಿಕೆಯ ಇಂಡಿಯನ್‌ರ ರಗ್ಗಿನಭಾಷೆ (***Blanket Language***) ದರ್ಪಣ ಭಾಷೆ (***Mirror Language***) ನಗಾರಿ ಭಾಷೆ (***Drum Language***) ಆಸ್ಟ್ರೇಲಿಯಾದ ಕೈಭಾಷೆ (***Hand Language***) ಇವು ಒಂದಾನೊಂದು ಕಾಲದಲ್ಲಿ ಕೆಲವು ಜನರ ಗುಂಪುಗಳು ಬಳಸುತ್ತಿದ್ದ ಸಾಂಕೇತಿಕ ಭಾಷೆಗಳು. ತಂತಿಭಾಷೆ (***Telegraphic Language***) ಸಂಖ್ಯಾ ಭಾಷೆ (***Statistical Language***) ಸೈನಿಕಭಾಷೆ. ಇಂತಹವು ಈಗಲೂ ಕೂಡ ಜಗತ್ತಿನಲ್ಲಿ ಬಳಕೆಯಲ್ಲಿವೆ. ಆದರೆ ಇವೆಲ್ಲ ಸೀಮಿತ ವ್ಯಾಪ್ತಿಯುಳ್ಳವು, ನಿರ್ದಿಷ್ಟ ಗುರಿಯುಳ್ಳವು.

ಭಾಷೆಯಲ್ಲಿ ಧ್ವನಿ (ಶ್ರವಣ) ಸಂಕೇತಗಳಿಗೆ ಮಾತ್ರ ಸ್ಥಾನ. ಆದರೆ ಸಿಕ್ಕ ಸಿಕ್ಕ ಧ್ವನಿಗಳಿಗೆ ಭಾಷೆಯಲ್ಲಿ ಸ್ಥಾನವಿಲ್ಲ. ಮನುಷ್ಯ ಮೌಖಿಕವಾಗಿ ಹೊರಡಿಸಬಹುದಾದ ಧ್ವನಿಗಳಿಗೆ ಮಾತ್ರ ಇಲ್ಲಿ ಮಹತ್ವ. ಮನುಷ್ಯ ತನ್ನ ಬಾಯಿಯ ಮೂಲಕ ಅಸಂಖ್ಯಾತ ಬಗೆಯ ಧ್ವನಿಗಳನ್ನು ಹೊರಡಿಸಲು ಶಕ್ತನಾಗಿದ್ದಾನೆ. ಧ್ವನಿಪೆಟ್ಟಿಗೆಯೊಂದನ್ನು ಬಿಟ್ಟು ಇತರ ಯಾವ ಅಂಗವೂ ಧ್ವನಿಯನ್ನು ಹುಟ್ಟಿಸುವದಕ್ಕಾಗಿಯೇ ಇಲ್ಲವಾದರೂ ನಾಲಗೆ, ತುಟಿ, ನಾಸಿಕ, ಗಂಟಲು, ಪುಪ್ಪುಸ, ತಾಲು, ಹಲ್ಲು ಇವೆಲ್ಲವೂ ಧ್ವನಿ ವೈವಿಧ್ಯಕ್ಕೆ ಕಾರಣವಾಗುತ್ತವೆ. ಇವೆಲ್ಲವುಗಳಿಗೆ ಧ್ವನ್ಯಂಗಗಳೆನ್ನುತ್ತಾರೆ. ಧ್ವನ್ಯಂಗಗಳು ಹೊರಡಿಸುವ ಅಗಣಿತ ಧ್ವನಿಗಳೆಲ್ಲವನ್ನೂ ಭಾಷೆ ಬಳಸುವುದಿಲ್ಲ. ಉದಾಹರಣೆಗೆ ಸೀನಿದಾಗ, ಕೆಮ್ಮಿದಾಗ, ಬಿಕ್ಕಿದಾಗ, ಬಾಯಿ ಚಪ್ಪರಿಸಿದಾಗ ಉಂಟಾಗುವ ಧ್ವನಿಗಳನ್ನು ಭಾಷೆಯಲ್ಲಿ ಬಳಸಲಾಗದು. ಉಚ್ಚಾರಕ್ಕೆ ಅನುಕೂಲವಾದವುಗಳನ್ನು ಮಾತ್ರ ಆಯ್ದುಕೊಳ್ಳಲಾಗುತ್ತದೆ. ಹಾಗೆ ಆಯ್ದುಕೊಂಡ ಧ್ವನಿ ಘಟಕಗಳನ್ನು ವ್ಯವ

ಸ್ಥಿತವಾಗಿ ಒಂದರನಂತರ ಒಂದನ್ನು ಹೊರಡಿಸಿ ಉಚ್ಚರಿಸಲಾಗುತ್ತದೆ. ಒಂದು ಎರಡು, ಮೂರು, ನಾಲ್ಕು, ಐದು ಹೀಗೆ ತನಗನುಕೂಲವಾದಂತೆ ಧ್ವನಿಘಟಕಗಳನ್ನು ಹೊಂದಿಸಿ ಸಂಕೇತಗಳನ್ನು ನಿರ್ಮಿಸಲಾಗುತ್ತದೆ. 'ಗುಡಿ' ಎಂಬ ಶಬ್ದದಲ್ಲಿ ಗ್, ಉ, ಡ್, ಇ ಎಂಬ ನಾಲ್ಕು ಧ್ವನಿಗಳು ಇವೆ. ಹಾಗೂ ಗ್‌ದ ಮುಂದೆ ಉ, ಅದರ ಮುಂದೆ ಡ್, ಅನುಕ್ರಮವಾಗಿ ಒಂದರ ನಂತರ ಒಂದು ಉಚ್ಚರಿಸಲ್ಪಡುತ್ತವೆ. ಮಂದಿರಕ್ಕೆ 'ಗುಡಿ' ಎಂಬ ಧ್ವನಿಮೊತ್ತದ ಸಂಕೇತ ನಿಗದಿಪಡಿಸಲಾಗಿದೆ. ಈ ಸಂಕೇತವನ್ನು ಕನ್ನಡ ಭಾಷೆಯನ್ನಾಡುವವರೆಲ್ಲರೂ ಒಪ್ಪಿಕೊಂಡಿರುತ್ತಾರೆ. ಒಂದೊಂದು ವಸ್ತು, ಪ್ರಾಣಿ, ಭಾವಕ್ಕೂ ಒಂದೊಂದು ಇಲ್ಲವೆ ಹಲವಾರು ಇಂತಹ ಧ್ವನಿ ಸಂಕೇತಗಳನ್ನು ಬಳಸಬಹುದು. ಉದಾಹರಣೆಗೆ ಪುಸ್ತಕ, ಗ್ರಂಥ, ಹೊತ್ತಗೆ. ಒಂದೇ ಧ್ವನಿಗಳ ಮೊತ್ತ ಹಲವು ಅರ್ಥಗಳಿಗೆ ಸಂಕೇತವಾಗಿರಲೂಬಹುದು. ಉದಾ:— ಆಡು ಎಂಬ ಶಬ್ದವು ಪ್ರಾಣಿಯನ್ನು ಸೂಚಿಸುವಂತೆ ಆಟ ಆಡುವ ಕ್ರಿಯಾರ್ಥಸೂಚಕಪದವೂ ಆಗುತ್ತದೆ. ಹೀಗೆ ಧ್ವನಿಸಂಕೇತಗಳು ಒಂದರಿಂದ ಹಲವು ಆಗಿ ಸಂಕೀರ್ಣಗೊಳ್ಳುತ್ತ ಬಳಕೆಯಾಗುತ್ತ ಹೋಗುತ್ತವೆ.

## 1.4 ಯಾದೃಚ್ಛಿಕತೆ :

ಧ್ವನಿಸಂಕೇತಗಳು ಭಾಷೆಯಲ್ಲಿ ಯಾದೃಚ್ಛಿಕವಾಗಿ ಬಳಕೆಗೊಳ್ಳುತ್ತವೆಂಬುದು ಮುಖ್ಯವಾದುದು. ಸಾಮಾನ್ಯವಾಗಿ ಪ್ರತಿಯೊಂದು ವಸ್ತು, ಪ್ರಾಣಿ ಅಥವಾ ಭಾವಕ್ಕೆ ನಿಗದಿಪಡಿಸಿ ಸಾರ್ವತ್ರಿಕವಾಗಿ ಒಪ್ಪಿಗೆ ಪಡೆದ ಧ್ವನಿಸಂಕೇತಗಳು ಒಂದೊಂದು ಭಾಷೆಯಲ್ಲಿ ಬಳಕೆಗೊಳ್ಳುತ್ತವೆ. ಇಂತಹ ವಸ್ತು, ಪ್ರಾಣಿ, ಭಾವಕ್ಕೆ ಇಂತಹುದೇ ಧ್ವನಿಸಂಕೇತಗಳನ್ನು ನೀಡಬೇಕೆಂಬ ನಿರ್ದಿಷ್ಟವಾದ ನಿಯಮವೇನೂ ಇಲ್ಲ,

ಒಂದು ಧ್ವನಿಸಂಕೇತದ ಮೊತ್ತಕ್ಕೆ ಒಂದೇ ಅರ್ಥವಿರಬೇಕೆಂಬ ನಿಯಮವೂ ಇಲ್ಲ, ಅದು ಒಂದಕ್ಕಿಂತ ಹೆಚ್ಚು ಅರ್ಥಗಳನ್ನೂ ಹೊಂದಿರಬಹುದು. 'ಸರಿ' ಎಂಬ ಕನ್ನಡ ಶಬ್ದ ಸಮ, ಒಂದು ಬಗೆಯ ಅಂಟು, ಚಲಿಸು, ಆಗಲಿ ಎಂಬ ಹಲವು ಅರ್ಥಗಳನ್ನು ಹೊಂದಿದೆ. ಹೀಗೆಯೇ ಹಲವು ಶಬ್ದಗಳು ಒಂದೇ ಅರ್ಥವನ್ನು ಹೊಂದಿರಬಹುದಾಗಿದೆ. ಮಂಗ, ಕಪಿ, ಕೋತಿ, ಮರ್ಕಟ,

ಮುಸ್ಸಾ, ಸೊಲಗ, ಬಾಲ್ಯಾ ಇವೆಲ್ಲವೂ ಕನ್ನಡದಲ್ಲಿ ಮಂಗವನ್ನು ಸೂಚಿಸುತ್ತವೆ. ಹೀಗೆ ಒಂದೇ ಅರ್ಥಕ್ಕೆ ಹಲವು ಧ್ವನಿಸಂಕೇತಮೊತ್ತಗಳನ್ನು, ಒಂದೇ ಧ್ವನಿ ಸಂಕೇತಮೊತ್ತಕ್ಕೆ ಹಲವು ಅರ್ಥಗಳನ್ನು ಹೊರಡಿಸುವ ಅದರಂತೆ ಬಳಸುವ ಈ ಯಾದೃಚ್ಛಿಕತೆ ಅಥವಾ ಸ್ಥೂಲ ಅರ್ಥದಲ್ಲಿ ಮನಸೇಚ್ಛೆ ಭಾಷೆಯ ಒಂದು ಪ್ರಮುಖ ಲಕ್ಷಣವಾಗಿದೆ.

## 1.5 ಸಾಮಾಜಿಕ ಸಹಕಾರ :

ಭಾಷೆಯ ಮೂಲ ಉದ್ದೇಶವೆಂದರೆ ಜನರಲ್ಲಿ ಪರಸ್ಪರ ವ್ಯವಹಾರವನ್ನು ಸರಳಗೊಳಿಸುವುದು. ಭಾಷೆ ಅದನ್ನು ಬಳಸುವವರ ಮನಸ್ಸಿನ ಭಾವನೆಗಳನ್ನು ವಿನಿಮಯಗೊಳಿಸುತ್ತದೆ. ಅವರಲ್ಲಿ ಸಹಕಾರವನ್ನು ಹೊಂದಾಣಿಕೆಯನ್ನು ಒಕ್ಕಟ್ಟನ್ನು ಹೆಚ್ಚಿಸುತ್ತದೆ. ಕೇವಲ ಭಾಷಾ ಕೌಶಲದಿಂದಲೇ ಮಾನವರು ಅನೇಕ ಕಾರ್ಯ ಸಾಧನೆಗಳನ್ನು ಮಾಡಿಕೊಳ್ಳುತ್ತಾರೆ. ಮಾನವನ ಸಂಸ್ಕೃತಿ ನಾಗರಿಕತೆ ಮುನ್ನಡೆಯಲು ಭಾಷೆ ಸಹಕರಿಸುತ್ತದೆ. ವ್ಯಕ್ತಿ–ವ್ಯಕ್ತಿಗಳಲ್ಲಿ ಸಾಮಾಜಿಕ ಸಹಕಾರವನ್ನು ಉಂಟು ಮಾಡುವಲ್ಲಿ ಭಾಷೆ ಅತ್ಯಂತ ಮಹತ್ವದ ಪಾತ್ರವಹಿಸುತ್ತದೆ. ಸಮಾಜದ ತೊಟ್ಟಿಲಲ್ಲಿ ಬೆಳೆಯುತ್ತ ಸಾಮಾಜಿಕ ಸಹಕಾರವನ್ನುಂಟು ಮಾಡುವುದೇ ಭಾಷೆಯ ಮುಖ್ಯ ಕಾರ್ಯ.

ಮಾನವನು ತನ್ನ ಭಾವನೆ, ವಿಚಾರ ಅನಿಸಿಕೆಗಳನ್ನು ಇತರರಿಗೆ ಅಭಿವ್ಯಕ್ತಪಡಿಸಲು ಇರುವ ಅತ್ಯಂತ ಸಮರ್ಥ ಸಂಪರ್ಕಮಾಧ್ಯಮವಾಗಿರುವ ಭಾಷೆ ಮಾನವ–ಮಾನವರಲ್ಲಿ ಸಂಪರ್ಕವನ್ನುಂಟು ಮಾಡಿ ಅವರಲ್ಲಿ ಪರಸ್ಪರ ಸಹಕಾರಕ್ಕೆ ಅನುವು ಮಾಡಿಕೊಡುತ್ತದೆ. ಭಾಷೆಯನ್ನು ಬೆಳೆಸುವುದರಿಂದ ಮನುಷ್ಯನು ತನ್ನ ಸೂಕ್ಷ್ಮ ಭಾವನೆಗಳನ್ನೂ ಕೂಡ ಇತರರಿಗೆ ಹೇಳಬಹುದು. ಭಾಷೆಗೆ ಲಿಪಿಯೊಂದನ್ನು ರೂಪಿಸಿಕೊಂಡರಂತೂ ತಲೆತಲಾಂತರವಾಗಿ ತಮ್ಮ ಅನುಭವಗಳನ್ನು ಸಾಗಿಸಬಹುದು, ಪ್ರಾಚೀನ ತಲೆಮಾರಿನವರ ಸಂಸ್ಕೃತಿ–ನಾಗರಿಕತೆಗಳನ್ನು ಗ್ರಂಥಸ್ಥ ಭಾಷೆಯ ಮೂಲಕ ಅರಿಯಬಹುದು. ನಾಡವರ ಇತಿಹಾಸವನ್ನು ಬರವಣಿಗೆಯ ಭಾಷೆಯ ಮೂಲಕ ಕಾಯ್ದಿಡಬಹುದು. ಜನಾಂಗದವರ ಬಟುವಟಿಕೆಗಳನ್ನು ಭಾಷೆಯ ಮೂಲಕ ದಾಖಲೆಯಾಗಿ ಉಳಿಸಬಹ.ದು. ಈ ರೀತಿ ಭಾಷೆ ಸಾಮಾಜಿಕ ಕ್ರಿಯೆಯಾಗಿ, ಸಾಮಾಜಿಕ ಸಹಕಾರವನ್ನು, ಪರಸ್ಪರ

ವ್ಯವಹಾರವನ್ನು ಬೆಳೆಯಿಸುವ ಪ್ರಮುಖ ಮಾಧ್ಯಮವಾಗಿ ಮುಂದುವರಿಯುತ್ತದೆ.

ಭಾಷೆ ಸಮಾಜದ ಎಲ್ಲ ವ್ಯಕ್ತಿಗಳ ಸೊತ್ತು. ಅದು ಕೆಲವರ ಸೊತ್ತಾಗಿ, ತೊತ್ತಾಗಿ ಬದುಕಲಾರದು. ಭಾಷೆಗೆ ಜನಪದದಲ್ಲಿ ಜೀವಂತವಾಗಿರುವವರೆಗೂ ಬೆಲೆ ಇದೆ. ಜನತೆಯ ನಾಲಗೆಯಿಂದ ದೂರವಾದಾಗ ಅದು ಮಾತೃಭಾಷೆಯಾಗುತ್ತದೆ. ಅದಕ್ಕೆ ಮುಂದೆ ಭವಿಷ್ಯವೆಂಬುದಿಲ್ಲ. ಜನಸಮೂಹದ ಸಹಕಾರದಿಂದ ಮಾನವನು ಇಂತಹ ಅದ್ಭುತ ಮಾಧ್ಯಮವನ್ನು ರೂಪಿಸಿಕೊಂಡಿರುವುದರಿಂದಲೇ ಪ್ರಾಣಿಗಳಿಗಿಂತ ಬಹಳ ಉನ್ನತಮಟ್ಟದಲ್ಲಿ ಭಿನ್ನ ಸ್ವರೂಪವಾಗಿ ನಿಂತಿದ್ದಾನೆ. ವಿಶ್ವವನ್ನೇ ಆಳುವ ಶಕ್ತಿ ಪಡೆದಿದ್ದಾನೆ. ಇಂದಿನ ಎಲ್ಲ ಬಗೆಯ ಅಭಿವೃದ್ಧಿಗೂ ಜೀವವಾಹಿನಿಯಾಗಿ ಭಾಷೆ ನಿಂತಿದೆ. ಒಂದೊಂದು ಜನಸಮೂಹಕ್ಕೂ ಭಾಷೆ ಬೇರೆ ಬೇರೆಯಾಗಿದ್ದಿರಬಹುದು. ಮಾನವ ಮಾನವನೇ ಆಗಿದ್ದರಿಂದ ಅವನ ಭಾವನೆಗಳು ಯಾವ ಭಾಷೆಯಲ್ಲಿ ಅಭಿವ್ಯಕ್ತಗೊಂಡರೂ ಅವುಗಳಲ್ಲಿ ಮಹತ್ವದವುಗಳು ಮನುಷ್ಯನಿಗೆ ಪ್ರಯೋಜನಕಾರಿಯೇ ಆಗಿವೆ. ಹೆಚ್ಚು ಹೆಚ್ಚು ಭಾಷೆಗಳನ್ನು ಕಲಿತಷ್ಟೂ ಆಯಾ ಭಾಷೆಗಳಲ್ಲಿ ಮೂಡಿಬಂದ ವಿಚಾರಗಳಿಂದ ಮಾನವನ ಜ್ಞಾನದ ಪರಿಧಿ ಹೆಚ್ಚುತ್ತಲೇ ಹೋಗುವುದು.

1.6 ಭಾಷೆ ಮಾನವನಿಗೆ ದೊರೆತ ಸಿದ್ಧ ವಸ್ತುವಲ್ಲ ಹಾಗೆಯೆ ಅದು ದೈವದತ್ತವೂ ಅಲ್ಲ. ಮನುಷ್ಯ ತನಗಾಗಿ ಪ್ರಯತ್ನಪೂರ್ವಕವಾಗಿ ತನಗೆ ತಿಳಿದಂತೆ ಪರಿಸರಕ್ಕೆ ಅನುಕೂಲವಾಗುವಂತೆ ರೂಢಿಸಿಕೊಂಡ ವ್ಯವಸ್ಥೆ. ಅದನ್ನು ಮಾನವ ತನ್ನ ಸಂಸ್ಕೃತಿಯ ಮಹತ್ವದ ಅಂಗವನ್ನಾಗಿಸಿಕೊಂಡಿದ್ದಾನೆ. ಮನುಷ್ಯನನ್ನು ಕುರಿತು ಏನನ್ನು ತಿಳಿಯಬೇಕಾದರೂ ಅವನ ಭಾಷೆಯನ್ನು ಮೊದಲು ತಿಳಿ ಎಂಬುದು ಜಗತ್ಪ್ರಸಿದ್ಧ ಭಾಷಾವಿಜ್ಞಾನಿ ಲಿಯೋನಾರ್ಡ್ ಭ್ಲೂಮ್‌ಫೀಲ್ಡನ ಗಟ್ಟಿಯಾದ ಅಭಿಪ್ರಾಯ.

## 1.7. ವ್ಯಕ್ತಿಭಾಷೆ :

ಭಾಷೆಯ ಮೂಲ ಸಾಮಗ್ರಿಯೆಂದರೆ ಮನುಷ್ಯನು ಮೌಖಿಕವಾಗಿ ಹೊರಡಿಸುವ ಧ್ವನಿಮೊತ್ತ. ಅವನು ಆಡುವ ನುಡಿಯಲ್ಲಿ ಜೀವಂತಿಕೆ ಇದೆ. ಅದು ಶಕ್ತಿಯುತವಾದುದು. ಯಾದೃಚ್ಛಿಕತೆ ಮನುಷ್ಯನ ಭಾಷೆಯ ವಿಶಿಷ್ಟ ಲಕ್ಷಣ

ಗಳಲ್ಲಿ ಒಂದು, ಅಂತೆಯೆ ವ್ಯಕ್ತಿ ಅಥವಾ ವ್ಯಕ್ತಿಗಳ ಸಮೂಹ ಒಂದೇ ಭಾಷೆಯನ್ನು ಬಳಸುವಲ್ಲಿಯೂ ಹಲ ಕೆಲವು ವ್ಯತ್ಯಾಸಗಳನ್ನು ಹೊಂದಿರಬಹುದು. ಹಾಗೆ ವ್ಯತ್ಯಾಸಗಳಿದ್ದಾಗ್ಯೂ ಆ ಭಾಷೆಯನ್ನಾಡುವವರು ಪರಸ್ಪರ ಅರ್ಥ ಮಾಡಿಕೊಳ್ಳಬಲ್ಲ ವಿಶಿಷ್ಟ ಪ್ರಾವಿಣ್ಯ ಲಕ್ಷಣವೂ ಭಾಷೆಗಿದೆ. ಒಟ್ಟಂದದಲ್ಲಿ ಮನುಷ್ಯನ ಭಾಷೆ ಅವನ ಪ್ರದೇಶ-ಪರಿಸರ, ಸಮಾಜ, ಸಂಸ್ಕೃತಿ ಅನ್ಯಭಾಷಾ ಪ್ರಭಾವ ಮುಂತಾದ ಅಂಶಗಳಿಗೆ ಅನುಗುಣವಾಗಿ ಇರುತ್ತದೆ. ಭೌಗೋಲಿಕ ಸಾಮಾಜಿಕ, ರಾಜಕೀಯ ಸ್ಥಿತ್ಯಂತರಗಳೂ ಭಾಷಾವ್ಯತ್ಯಾಸಗಳಿಗೆ ಕಾರಣವಾಗಬಹುದು. ಒಬ್ಬನೇ ವ್ಯಕ್ತಿ ವಿವಿಧ ಸಂದರ್ಭಗಳಲ್ಲಿ ಒಂದೇ ಭಾಷೆಯನ್ನು ವ್ಯತ್ಯಾಸಗಳೊಂದಿಗೆ ಬಳಸಬಹುದು. ಉದಾಹರಣೆಗೆ ಮನೆಯಲ್ಲಿ ಕುಟುಂಬದವರೊಡನೆ, ಗೆಳೆಯರೊಡನೆ, ಕ್ಲಾಸ್ ರೂಂನಲ್ಲಿ ವೇದಿಕೆಯ ಮೇಲೆ ನಿಂತು ಭಾಷಣ ಮಾಡುವ ಸಮಯದಲ್ಲಿ ಹೀಗೆ ಬೇರೆ ಬೇರೆ ಸಂದರ್ಭಗಳಲ್ಲಿ ಒಬ್ಬ ವ್ಯಕ್ತಿ ಬಳಸುವ ಅವನ ಒಟ್ಟು ಭಾಷೆಯನ್ನು "ವ್ಯಕ್ತಿ ಭಾಷೆ" ಎನ್ನಬಹುದು. ಇಂಥ ಹಲವಾರು ವ್ಯಕ್ತಿಗಳು ತಮ್ಮವೇ ಆದ ಕೆಲವು ಸಾಮಾನ್ಯ ವಿಶಿಷ್ಟತೆಗಳೊಂದಿಗೆ ಆಡುವ ನುಡಿಯನ್ನು ಆ ಭಾಷೆಯ ಒಂದು 'ಪ್ರಭೇದ' ಎಂದು ಗುರುತಿಸಬಹುದು. ವ್ಯಾಪಕವಾಗಿ ಅಂಥ ಇನ್ನೂ ಕೆಲವು ಪ್ರಭೇದಗಳನ್ನು ಒಳಗೊಂಡು ಸಾಮಾಜಿಕ, ಇಲ್ಲವೆ ಪ್ರಾದೇಶಿಕವಾಗಿ ಎದ್ದು ಕಾಣುವ ಸಾಮಾನ್ಯ ವಿಶಿಷ್ಟ ಭಾಷಾ ಅಂಶಗಳನ್ನು ಹೊಂದಿ ಪರಸ್ಪರ ಅರ್ಥ ಗ್ರಾಹ್ಯತೆಗೆ ಬಾಧೆ ಬರದಂತೆ ಬಳಕೆಗೊಳ್ಳುವ ಪ್ರಭೇದ ಭಾಷೆಗಳ ಗುಂಪನ್ನು 'ಉಪಭಾಷೆ' ಎಂದು ಹೆಸರಿಸಬಹುದು.

## 1.8. ಉಪಭಾಷೆ ;

ಒಬ್ಬ ವ್ಯಕ್ತಿಯ ಭಾಷೆಯೇ ಎಲ್ಲಾ ಸಂದರ್ಭಗಳಲ್ಲಿ ಒಂದೇ ತೆರನಾಗಿರುವುದಿಲ್ಲವೆಂದಮೇಲೆ ಒಂದು ವಿಶಾಲ ಪ್ರದೇಶದ ಜನರು ಆಡುವ ಭಾಷೆಯಲ್ಲಿಯೂ ಅನೇಕ ಭಿನ್ನತೆಗಳಿರುವುದು ಸಹಜವಾಗಿದೆ. ಉದಾಹರಣೆಗೆ ಉತ್ತರ ಕರ್ನಾಟಕದ ವಿಶಾಲ ಪ್ರದೇಶದಲ್ಲಿ ಧಾರವಾಡ ಪ್ರದೇಶದ ಕನ್ನಡ ಹಾಗೂ ಕಲಬುರ್ಗಿ ಪ್ರದೇಶದ ಕನ್ನಡ ಭಾಷೆಗಳಲ್ಲಿ ಅನೇಕ ವಿಶಿಷ್ಟ ಅಂಶಗಳಿವೆ.

ಇದರಿಂದಾಗಿ ಕಲಬುರ್ಗಿ ಕನ್ನಡ, ಧಾರವಾಡ ಕನ್ನಡ ಎಂಬ ಎರಡು ಪ್ರಾದೇಶಿಕ ಉಪಭಾಷೆಗಳುಂಟಾಗಿವೆ. ಹಾಗೆಯೆ ಮಂಗಳೂರು ಕನ್ನಡ, ಮೈಸೂರು ಕನ್ನಡ ಎಂಬೆರಡು ಪ್ರಾದೇಶಿಕ ಉಪ ಭಾಷೆಗಳು ದಕ್ಷಿಣ ಕರ್ನಾಟಕದಲ್ಲಿ ಉಂಟಾಗಿವೆ. ಸಾಮಾಜಿಕ ಅಂಶಗಳಿಂದಾಧಾರಿತ ಉಪಭಾಷೆಗಳನ್ನೂ ಗುರುತಿಸುತ್ತಾರೆ. ಉದಾಹರಣೆಗೆ ವೀರಶೈವ ಕನ್ನಡ, ಗೌಡಕನ್ನಡ, ಹಾಲಕ್ಕಿ ಕನ್ನಡ, ದೀವರ ಕನ್ನಡ, ಬ್ರಾಹ್ಮಣ ಕನ್ನಡ, ಬ್ರಾಹ್ಮಣೇತರ ಕನ್ನಡ, ಹವ್ಯಕ, ಬಡಗ ಇತ್ಯಾದಿ. ಪ್ರಾದೇಶಿಕ, ಉಪಭಾಷೆಗಳಲ್ಲಿ ಇರುವ ವ್ಯತ್ಯಾಸಗಳಲ್ಲಿ ಕೆಲವನ್ನು ಉದಾಹರಿಸ ಬೇಕೆಂದರೆ ಮೈಸೂರು ಮಂಗಳೂರು ಕನ್ನಡಭಾಷೆಯಲ್ಲಿ ಬಳಕೆಯಲ್ಲಿರುವ 'ಎ' ಕಾರಾಂತ ಪದಗಳು ಧಾರವಾಡ ಕಲಬುರ್ಗಿ ಕನ್ನಡದಲ್ಲಿ 'ಇ' ಕಾರಾಂತ ವಾಗುತ್ತವೆ ಆನೆ, ಮನೆ, ಶಾಲೆ, ಕೆರೆ ಇತ್ಯಾದಿ ಆನಿ, ಮನಿ ಸಾಲಿ, ಕೆರಿ ಎಂದಾ ಎಂದಾಗುತ್ತವೆ, ಉತ್ತರ ಕರ್ನಾಟಕದಲ್ಲಿ ಬಳಕೆಯಲ್ಲಿರುವ ಆ್ಯ, ಒ. ಎಂಬ ವಿಶಿಷ್ಟ ಸ್ವರಗಳು ದಕ್ಷಿಣ ಕರ್ನಾಟಕದಲ್ಲಿ ಏ, ಓ, ಗಳಾಗಿ ಬಳಕೆಯಾಗುತ್ತವೆ.

ಪ್ರಾದೇಶಿಕವಾಗಿ ಈ ರೀತಿ ಇನ್ನೂ ಶಬ್ದ, ವಾಕ್ಯ. ಅರ್ಥ ಅನೇಕ ಘಟ್ಟ ಗಳಲ್ಲಿ ವ್ಯತ್ಯಾಸಗಳಿರುತ್ತವೆ. ಆದರೆ ಈ ರೀತಿ ವ್ಯತ್ಯಾಸಗಳುಳ್ಳ ನಿರ್ದಿಷ್ಟ ಪ್ರಾದೇಶಿಕ ಗಡಿಯನ್ನು ನಿಖರವಾಗಿ ಗುರುತಿಸುವುದು ಸುಲಭವಲ್ಲ. ಮನುಷ್ಯ ಸಮಾಜದ ವಿವಿಧ ಪಂಗಡಗಳಲ್ಲಿ ಭಾಷೆ ಭಿನ್ನ ಭಿನ್ನವಾಗಿ ಬಳಕೆಗೊಳ್ಳುತ್ತದೆ. ಇದಕ್ಕೆ ಸಂಸ್ಕೃತಿ, ವರ್ಗ, ಜಾತಿ, ವೃತ್ತಿ ಅಂತಸ್ತು, ಶಿಕ್ಷಣ, ಲಿಂಗ, ವಯಸ್ಸು ಇತ್ಯಾದಿ ಅನೇಕ ಅಂಶಗಳು ಕಾರಣವಾಗಿರಬಹುದು. ಕನ್ನಡದಲ್ಲಿ ಬ್ರಾಹ್ಮಣ, ಬ್ರಾಹ್ಮಣೇತರ ಕನ್ನಡ ಎಂದು ಸಾಮಾಜಿಕ ಉಪಭಾಷೆಗಳನ್ನು ಗುರುತಿಸಿದ್ದಾರೆ. ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿರುವ ಹಾಲಕ್ಕಿ, ಹವ್ಯಕ, ಬಡಗ, ದೀವರ ಇತ್ಯಾದಿ ಪಂಗಡಗಳ ಜನರು ಮಾತನಾಡುವ ಕನ್ನಡವನ್ನು ಬೇರೆ ಬೇರೆ ಉಪ ಭಾಷೆಗಳಾಗಿ ಗುರುತಿಸಲಾಗಿದೆ.

## 1.9 ಭಾಷಾ ಬೆಳವಣಿಗೆ :

ಭಾಷೆ ನಿಂತ ನೀರಲ್ಲ. ಹರಿವ ತೊರೆ, ನಿತ್ಯ ಬಳಕೆಯಾಗುತ್ತ ಪರಿಸರಕ್ಕೆ ತಕ್ಕಂತೆ ಬದಲಾಗುತ್ತ ಸಾಗುವುದೇ ಅದರ ಲಕ್ಷಣ. ಭಾಷೆಯಲ್ಲಿ ನಡೆದ ಬದ ಲಾವಣೆಗಳಿಂದಲೇ ಅದು ಬೆಳೆಯುತ್ತದೆ. ಕಾಲ, ಪರಿಸರ ಮತ್ತು ಬಳಕೆ ಭಾಷಾ

ಬೆಳವಣಿಗೆಯ ಮುಖ್ಯ ಕಾರಣಗಳು. ಕಾಲ ಬದಲಾದಂತೆ ಭಾಷೆಯೂ ಬದಲಾಗುತ್ತದೆ. ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡ ಹೀಗೆ ಕನ್ನಡ ಭಾಷೆಯೂ ಕಾಲಕ್ಕೆ ತಕ್ಕಂತೆ ಬದಲಾಗಿದೆ. ಭಾಷೆಯ ಬದಲಾವಣೆಗೆ ಯಾವಾಗಲೂ ಕಾರಣಗಳಿರಲೇಬೇಕೆಂಬುದೇನೂ ಇಲ್ಲ. ಭಾಷೆಯನ್ನು ಬಳಸುವ ಜನ ತಮಗೆ ತಿಳಿದಂತೆ ಯಾವಾಗಬೇಕಾದರೂ ಹೇಗೆ ಬೇಕಾದರೂ ಅದನ್ನು ಬದಲಾಯಿಸಬಹುದು. ಉದಾಹರಣೆಗೆ ಹಳಗನ್ನಡದಲ್ಲಿ ಅಪ್ಪ ಎಂದರೆ ತಾಯಿ, ಅಮ್ಮ ಎಂದರೆ ತಂದೆ ಎಂಬರ್ಥವಿತ್ತು. ಆದರೆ ಹೊಸಗನ್ನಡದಲ್ಲಿ ಅಪ್ಪ ಎಂದರೆ ತಂದೆ, ಅಮ್ಮ ಎಂದರೆ ತಾಯಿ ಎಂಬ ಅರ್ಥ ಬಳಕೆಯಲ್ಲಿದೆ. ಹೀಗೆ ಅರ್ಥ ಬದಲಾಗಲು ಕಾರಣವೂ ಇಲ್ಲ. ಹಳಗನ್ನಡದ ಅನೇಕ ಶಬ್ದಗಳಲ್ಲಿರುವ 'ಪ್' ಕಾರ ನಡುಗನ್ನಡದ ಕಾಲದ ಅನಂತರ 'ಹ್' ಕಾರವಾಗಿ ಬದಲಾಯಿತು. (ಉದಾ : ಪತ್ತು > ಹತ್ತು, ಪಿರಿ > ಹಿರಿ, ಪುಲಿ > ಹುಲಿ) ಹೀಗೆಯೇ ಎಷ್ಟೋ ಶಬ್ದಗಳು ಬಳಕೆಯಿಂದ ನಿಂತು ಹೋಗಬಹುದು, ಹೊಸ ಶಬ್ದಗಳು ಬಳಕೆಗೆ ಬರಬಹುದು. ಅನೇಕ ವ್ಯಾಕರಣಾಂಶಗಳಲ್ಲಿಯೂ ಬದಲಾವಣೆ ಆಗಬಹುದು. ಕಾಲದ ಅಂತರ ಹೆಚ್ಚಿದಷ್ಟೂ ಬದಲಾವಣೆಗಳು ಹೆಚ್ಚುತ್ತವೆ. ಆದರೆ ಎಲ್ಲ ಭಾಷೆಗಳಲ್ಲೂ ಈ ಬದಲಾವಣೆಯ ಗತಿ ಒಂದೇ ತೆರನಾಗಿರುವುದಿಲ್ಲ. ಭಾಷೆಯ ಬದಲಾವಣೆಯನ್ನು ಯಾವ ವೈಯಾಕರಣನೂ ತಡೆಯಲಾರ. ವರ್ಣ, ಶಬ್ದ, ವಾಕ್ಯ, ಅರ್ಥ ಹೀಗೆ ಯಾವ ವಿಭಾಗದಲ್ಲೂ ಬದಲಾವಣೆಗಳು ಕಾಣಿಸಿಕೊಳ್ಳಬಹುದು.

# ೨

# ಕನ್ನಡ ಭಾಷೆ : ಹುಟ್ಟು-ಬೆಳವಣಿಗೆ

## 2.1 ಕನ್ನಡ ಭಾಷೆಯು–ಪ್ರಾಚೀನತೆ :

ಕನ್ನಡವು ದ್ರಾವಿಡ ಭಾಷಾವರ್ಗದ ಒಂದು ಅತ್ಯಂತ ಪ್ರಮುಖ ಭಾಷೆ. ಕ್ರಿ. ಶ. ಪೂ. ಸು. ೨೫೦೦ ವರ್ಷಗಳ ಹಿಂದೆ ಬಳಕೆಯಲ್ಲಿರಬಹುದಾದ ಮೂಲ ದ್ರಾವಿಡ ಭಾಷೆಯಿಂದ ಕಾಲಾನುಕ್ರಮದಲ್ಲಿ ಬೇರೆ ಬೇರೆ ದ್ರಾವಿಡ ಭಾಷೆಗಳು ಹುಟ್ಟಿಕೊಂಡವು. ಅವುಗಳನ್ನು ಉತ್ತರದ್ರಾವಿಡ, ಮಧ್ಯದ್ರಾವಿಡ, ದಕ್ಷಿಣ-ಮಧ್ಯದ್ರಾವಿಡ ಹಾಗೂ ದಕ್ಷಿಣದ್ರಾವಿಡ ಎಂದು ಮುಖ್ಯವಾಗಿ ನಾಲ್ಕು ಗುಂಪುಗಳಲ್ಲಿ ವರ್ಗೀಕರಿಸುತ್ತಾರೆ. ಕನ್ನಡವು ದಕ್ಷಿಣ ದ್ರಾವಿಡ ಭಾಷಾಗುಂಪಿನ ಮಹತ್ವದ ಭಾಷೆ. ಭಾರತದಲ್ಲಿ ಪ್ರಾಚೀನತೆಯ ದೃಷ್ಟಿಯಿಂದ ಆರ್ಯ ಭಾಷಾವರ್ಗದ ಸಂಸ್ಕೃತಕ್ಕೆ ಪ್ರಥಮಸ್ಥಾನವಿದೆ. ಎರಡನೆಯಸ್ಥಾನ ದ್ರಾವಿಡ ಭಾಷಾವರ್ಗದ ತಮಿಳಿಗೆ ದೊರೆಯುತ್ತದೆ. ಮೂರನೆಯ ಸ್ಥಾನ ಕನ್ನಡ ಭಾಷೆಗೆ ಇದೆ. ಮೂಲ ದಕ್ಷಿಣದ್ರಾವಿಡ ಭಾಷಾ ಶಾಖೆಯಿಂದ ಕನ್ನಡ ಭಾಷೆ ಕ್ರಿ.ಶ.ಪೂ. ೫ ರಿಂದ ೪ ನೆಯ ಶತಮಾನದ ವೇಳೆಗೆ ಸ್ವತಂತ್ರವಾಯಿತೆಂದು ದ್ರಾವಿಡಭಾಷಾ ವಿಜ್ಞಾನಿಗಳ ಅಭಿಪ್ರಾಯ, ಆನಂತರ ಮಹಾಭಾರತದ ಭೀಷ್ಮಪರ್ವ; ಸಂಸ್ಕೃತದ ಮೃಚ್ಛಕಟಿಕ ನಾಟಕ; ಮಾರ್ಕಂಡೇಯ ಪುರಾಣ, ಪದ್ಮ ಪುರಾಣ ತಮಿಳಿನ ಶಿಲಪ್ಪದಿಗಾರಂ ಇತ್ಯಾದಿಗಳಲ್ಲಿರುವ ಕನ್ನಡ, ಕರ್ನಾಟಕದ ಉಲ್ಲೇಖಗಳಿಂದ ಕನ್ನಡವು ಕ್ರಿ. ಶ. ಪೂರ್ವದ ಕಾಲದಲ್ಲಿಯೇ ಪ್ರಸಿದ್ಧಿ ಪಡೆದಿತ್ತೆಂದು ತಿಳಿದು ಬರುತ್ತದೆ. ಗ್ರೀಕ ಭಾಷೆಯಲ್ಲಿರುವ ಕ್ರಿ.ಶ. ಎರಡನೆಯ ಶತಮಾನದ ಓಕ್ಸಿರಿಂಕೆಸ್ ಪೇಪಿರಸ್‌ನ ಗ್ರೀಕ್ ಪ್ರಹಸನದಲ್ಲಿರುವ ಕನ್ನಡ ಪದಗಳು ಆ ವೇಳೆಗೆ ಕನ್ನಡದ ಅಸ್ತಿತ್ವವನ್ನು ಖಚಿತಪಡಿಸುತ್ತವೆಂದು ವಿದ್ವಾಂಸರ ಅಭಿಪ್ರಾಯ. ಒಟ್ಟಿನಲ್ಲಿ ಕ್ರಿ. ಶ. ಪೂ. ೪–೩ನೆಯ ಶತಮಾನದ ವೇಳೆಗೆ ಕನ್ನಡ ಭಾಷೆ ತನ್ನ ಸ್ವತಂತ್ರ

ಅಸ್ತಿತ್ವವನ್ನು ಹೊಂದಿತ್ತು. ಕ್ರಿ, ಶ. ಆರಂಭದ ವೇಳೆಗೆ ಅದು ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿತ್ತು. ಕ್ರಿ. ಶ. ೪-೫ ನೆಯ ಶತಮಾನದ ವೇಳೆಗೆ ಸ್ವತಂತ್ರ ಲಿಪಿಯನ್ನು ರೂಢಿಸಿಕೊಂಡು ಭಾಷೆಯನ್ನು ಬರಹ ರೂಪದಲ್ಲಿಳಿಸ ತೊಡಗಿತ್ತು. ಕ್ರಿ.ಶ. ೪೫೦ ರ ಕನ್ನಡದ ಉಪಲಬ್ಧ ಮೊಟ್ಟಮೊದಲ "ಹಲ್ಮಿಡಿ" ಶಾಸನ ಇದಕ್ಕೆ ಪುಷ್ಟಿಯನ್ನೊದಗಿಸುತ್ತದೆ. ಹಲ್ಮಿಡಿ ಶಾಸನವನ್ನು ನೋಡಿದರೆ ಅದರಲ್ಲಿನ ಭಾಷೆ ಸಂಸ್ಕೃತ ಭೂಯಿಷ್ಠವಾಗಿರುವುದು ಸ್ಪಷ್ಟವಾಗುತ್ತದೆ. ಮೂಲ ದಕ್ಷಿಣದ್ರಾವಿಡಭಾಷೆಯಿಂದ ಕನ್ನಡವು ಸ್ವತಂತ್ರವಾಗಿ ಮೂಡಿ ಬಂದಿದ್ದರೂ ಸಂಸ್ಕೃತ ಭಾಷೆಯ ತೊಟ್ಟಿಲಲ್ಲೆ ಬೆಳೆಯತೊಡಗಿರುವಂತೆ ತೋರುತ್ತದೆ,

## 2.2 ಭಾರತದ ಭಾಷೆಗಳು :

ಭಾರತದಲ್ಲಿ ಹಾಗೂ ಭಾರತದ ಹೊರಗಡೆ ಏಶಿಯಾ ಖಂಡದಲ್ಲಿ ಅನೇಕ ದೇಶಗಳಲ್ಲಿ ದ್ರಾವಿಡ ಭಾಷೆಗಳನ್ನು ಮಾತನಾಡುವ ಸಾಕಷ್ಟು ಸಂಖ್ಯೆಯ ಜನರಿದ್ದಾರೆ. ದ್ರಾವಿಡ ಭಾಷಾ ವರ್ಗವನ್ನು ಜಗತ್ತಿನ ಇತರ ಭಾಷಾ ವರ್ಗಗಳೊಡನೆ ತುಲನಾತ್ಮಕವಾಗಿ ನೋಡಿದರೆ ದ್ರಾವಿಡ ಭಾಷಾ ವರ್ಗ ಒಂದು ಪ್ರತ್ಯೇಕ ಭಾಷಾ ವರ್ಗವಾಗಿ ನಿಲ್ಲುತ್ತದೆಂದು ವಿದ್ವಾಂಸರು ನಿರ್ಣಯಿಸಿದ್ದಾರೆ. ದ್ರಾವಿಡ ಭಾಷೆಗಳು ಸಂಸ್ಕೃತದಿಂದ ಹುಟ್ಟಿಕೊಂಡಿವೆಯೆಂದು ಕೆಲವರು ತಪ್ಪಾಗಿ ಹೇಳುತ್ತಾರೆ. ಸಂಸ್ಕೃತ ಭಾಷೆ ಮೂಲತಃ ಆರ್ಯ ವರ್ಗದ ಭಾಷೆ. ಇಂದಿನ ದ್ರಾವಿಡೇತರ ಭಾರತೀಯ ಭಾಷೆಗಳ ಮೂಲ ತಾಯಿ ಭಾಷೆಯೆಂದರೆ ಸಂಸ್ಕೃತ. ಸಂಸ್ಕೃತ ಭಾಷೆಯನ್ನು ಆರ್ಯರು ಸಾಕಷ್ಟು ಸಮೃದ್ಧವನ್ನಾಗಿಸಿದರು. ಜಗತ್ತಿನ ಅತ್ಯಂತ ಪ್ರಾಚೀನ ಭಾಷೆಗಳಲ್ಲಿ ಸಂಸ್ಕೃತಕ್ಕೆ ಶ್ರೇಷ್ಠ ಸ್ಥಾನವಿದೆ. ಭಾರತೀಯ ಸಂಸ್ಕೃತಿಯ ಬಹುಪಾಲು ದಾಖಲೆಗಳೆಲ್ಲವೂ ಸಂಸ್ಕೃತದಲ್ಲಿವೆ. ಇದಕ್ಕೆ ಸುಮಾರು 3200 ವರ್ಷಗಳಿಗಿಂತ ಹೆಚ್ಚು ಕಾಲದ ಸುದೀರ್ಘ ಸಾಹಿತ್ಯಿಕ ಇತಿಹಾಸವಿದೆ. ಹಿಂದಿ, ಬಂಗಾಲಿ, ಗುಜರಾಥಿ, ಆಸಾಮಿ, ಓರಿಯಾ, ಮರಾಠಿ, ಸಿಂಧಿ, ಪಂಜಾಬಿ, ಕಾಶ್ಮೀರಿ, ನೇಪಾಳಿ ಮುಂತಾದ ಭಾಷೆಗಳು ಸಂಸ್ಕೃತದಿಂದಲೇ ಹುಟ್ಟಿದವುಗಳು. ಶ್ರೀಲಂಕಾ ದೇಶದ ಸಿಂಹಳಿ ಭಾಷೆಯೂ ಈ ವರ್ಗಕ್ಕೆ ಸೇರುತ್ತದೆ. ಇಂದು ಇವೆಲ್ಲ ಭಾಷೆಗಳು ಸ್ವತಂತ್ರವಾಗಿ, ಕೆಲವಂತೂ ಸಾಕಷ್ಟು ಸಮೃದ್ಧವಾಗಿ ಬೆಳೆದಿವೆ.

ಸಂಸ್ಕೃತಾದಿ ಆರ್ಯ ಭಾಷಾ ಗುಂಪಿಗೆ ಇಂಡೋ ಆರ್ಯನ್ ಭಾಷಾ ಗುಂಪು ಎಂದು ಹೆಸರಿಸಿದ್ದಾರೆ. ಆರ್ಯರು ಇರಾಣ ಮೂಲಕ ಭಾರತವನ್ನು ಪ್ರವೇಶಿಸಿದರು. ಇರಾನ್‌ಭಾಷಾ ಗುಂಪಿಗೂ ಆರ್ಯ ಭಾಷಾ ಗುಂಪಿಗೂ ಸಾಕಷ್ಟು ಹೋಲಿಕೆಗಳಿವೆ. ಭಾರತದಲ್ಲಿ ದ್ರಾವಿಡ ಹಾಗೂ ಆರ್ಯ ಭಾಷಾ ಗುಂಪುಗಳಿಂದ ಹುಟ್ಟಿ ಬೆಳೆದ ಭಾಷೆಗಳ ಸಂಖ್ಯೆಯೇ ಹೆಚ್ಚು. ಆರ್ಯರು ಹಾಗೂ ದ್ರಾವಿಡರು ಭಾರತೀಯ ಸಂಸ್ಕೃತಿ ನಾಗರಿಕತೆಗಳಿಗೆ ಕೊಟ್ಟ ಕೊಡುಗೆ ಅನುಪಮವಾದುದು. ಭಾರತಕ್ಕೆ ದ್ರಾವಿಡ ಹಾಗೂ ಆರ್ಯರ ಅನಂತರ ವಲಸೆ ಬಂದ ಕೊನೆ ಕೊನೆಯ ಜನಾಂಗವೆಂದರೆ– ಮಂಗೋಲಿಯನ್ ಜನಾಂಗ. ಈ ಜನ ಈಗಲೂ ನೇಪಾಳ, ಬಂಗಾಲ, ಆಸಾಮ, ಬಿಹಾರ ರಾಜ್ಯಗಳಲ್ಲಿದ್ದಾರೆ. ಗಾರೋ, ಬೋಡೋ, ನಾಗಾ, ಬರ್ಮಾ ಮುಂತಾದ ಭಾಷೆಗಳು ಈ ಮಂಗೋಲಿಯನ್‌ರು ಭಾರತದಲ್ಲಿ ಬಳಸುತ್ತಿರುವ ಭಾಷೆಗಳಾಗಿವೆ. ಟಿಬೇಟ, ಚೀನ ಮತ್ತು ಮಾಯನ್ಮಾರ್ (ಬ್ರಹ್ಮದೇಶ) ದೇಶಗಳಲ್ಲಿ ಇವರ ಭಾಷೆಗಳು ವಿಪುಲವಾಗಿವೆ.

ಹೀಗೆ ಭಾರತದಲ್ಲಿ ಕ್ರಿ. ಶ. ಪೂರ್ವ ಸುಮಾರು ೩೨೦೦ ರಿಂದ ಕ್ರಿ. ಶ. ಸು. ೧೦೦೦ ವರ್ಷಗಳ ವರೆಗೆ ಅನೇಕ ಭಾಷೆಗಳು ಹುಟ್ಟಿಕೊಂಡು ಬೆಳೆದವು. ಹಲವು ಭಾಷೆಗಳು ಲಿಪಿಯನ್ನು ರೂಢಿಸಿಕೊಂಡು ಸಾಹಿತ್ಯವನ್ನು ದಾಖಲಿಸಿದವು. ಇನ್ನು ಹಲವಾರು ಭಾಷೆಗಳು ಕೇವಲ ಮೌಖಿಕವಾಗಿ ಮಾತ್ರ ಉಳಿದುಕೊಂಡವು. ಇನ್ನು ಕೆಲವು ಬಳಕೆಯಿಂದ ನಿಂತುಹೋದವು. ಉದಾಹರಣೆಗೆ ಪ್ರಾಕೃತ, ಅರ್ಧಮಾಗಧಿ, ಪಾಲಿ, ಇತ್ಯಾದಿ ಪ್ರಪಂಚದ ಅತ್ಯಂತ ಪ್ರಾಚೀನ ಸಮೃದ್ಧ ಭಾಷೆಯೆನಿಸಿದ ಸಂಸ್ಕೃತವು ಕೂಡ ಬಳಕೆಯಿಂದ ದೂರವಾಯಿತು. ಆದರೆ ಇತ್ತೀಚೆಗೆ ಅದನ್ನು ಜೀವಂತವಾಗಿರಿಸುವ ಪ್ರಯತ್ನ ನಡೆದಿವೆ. ಜನರ ನಾಲಗೆಯಿಂದ ದೂರವಾದ ಭಾಷೆಯನ್ನು ಮೃತಭಾಷೆ ಎನ್ನುತ್ತಾರೆ.

2.3 ಜಗತ್ತಿನಲ್ಲಿ ೫೦೦೦ ಕ್ಕೂ ಹೆಚ್ಚು ಭಾಷೆಗಳು ಇವೆಯೆಂದು ಹೇಳಲಾಗುತ್ತದೆ. ಭಾಷೆಗಳು ಮಾನವರ ಗುಂಪಿನ ಅನುಕೂಲತೆಗನುಗುಣವಾಗಿ ಹುಟ್ಟು-ಸಾವಿನ ಚಕ್ರಕ್ಕೆ ಸಿಲುಕಿವೆ; ಹಿಂದೆ ಬಳಕೆಯಲ್ಲಿರಬಹುದಾದ ಎಷ್ಟೋ ಭಾಷೆಗಳ ಹೆಸರೂ ಕೂಡ ಗೊತ್ತಿಲ್ಲದಂತೆ ನಶಿಸಿ ಹೋಗಿವೆ. ಹೊಸ ಹೊಸ ಭಾಷೆಗಳೂ ಕಾಲಾನುಕ್ರಮದಲ್ಲಿ ಹುಟ್ಟುತ್ತವೆ. ಭಾರತವೂ ಬಹು ಪ್ರಾಚೀನ ಕಾಲ

ದಿಂದಲೇ ಹಲವು ಭಾಷೆಗಳ ಆಗರವಾಗಿದೆ. ಜಗತ್ತಿನ ಅತ್ಯಂತ ಪ್ರಾಚೀನ ಮಾನವ ಜನಾಂಗದ ಅವಶೇಷಗಳು ಭಾರತದಲ್ಲಿ ದೊರೆಯುತ್ತವೆ. ಭಾರತದಲ್ಲಿ ವಿವಿಧ ಆದಿವಾಸಿ ಜನಾಂಗದವರು ವಾಸಿಸಿದ್ದರು. ಕೆಲವು ಜನಾಂಗಗಳು ಹೊರಗಿನಿಂದ ಭಾರತವನ್ನು ಪ್ರವೇಶಿಸಿದವು. ಆ ಜನಾಂಗಗಳಲ್ಲಿ ವಿವಿಧ ಭಾಷೆಗಳು ಬಳಕೆಯಲ್ಲಿ ಇದ್ದವು. ಆಸ್ಟ್ರಿಕ್ ಜನಾಂಗದವರು ಮುಂಡಾ ಇಲ್ಲವೆ ಕೋಲ್ ವರ್ಗದ ಭಾಷೆಗಳನ್ನು ರೂಢಿಸಿಕೊಂಡಿದ್ದರು. ಸಂತಾಲಿ, ಮುಂಡಾರಿ, ಹೊ, ಖಿರಹಲ್, ಶಬರ, ನಿಕೋಬಾರಿ, ಭೂಮಿಜ್‌ಖಾಸಿ, ಕೊರ್ಕು ಮುಂತಾದ ಭಾಷೆಗಳು ಈ ವರ್ಗದಲ್ಲಿ ಒಳಗೊಳ್ಳುತ್ತವೆ. ಕ್ರಿಸ್ತಶಕ ಪೂರ್ವ ಸುಮಾರು ಮೂರುಸಾವಿರ ವರ್ಷಗಳಷ್ಟು ಹಿಂದೆ ಈಶಾನ್ಯ ಇರಾಣದ ಗುಡ್ಡಗಾಡು ಪ್ರದೇಶದ ಕಡೆಯಿಂದ ದ್ರಾವಿಡರು ಭಾರತವನ್ನು ಪ್ರವೇಶಿಸಿ ಸಿಂಧೂನದಿ ತೀರ ಪ್ರದೇಶದಲ್ಲಿ ನೆಲೆಸಿದರೆಂದು ವಿದ್ವಾಂಸರ ಅಭಿಪ್ರಾಯ. ಅವರು ಮೂಲ ದ್ರಾವಿಡ ಭಾಷೆಯನ್ನು ಬಳಸುತ್ತಿದ್ದರೆಂದು ತಿಳಿದುಬರುತ್ತದೆ. ಕಾಲ ಗತಿಸಿದಂತೆ ದ್ರಾವಿಡರು ಭಾರತದಲ್ಲಿ, ಅದರಲ್ಲೂ ವಿಶೇಷವಾಗಿ ದಕ್ಷಿಣ ಭಾರತದಲ್ಲಿ ನೆಲೆಸಿದರು, ಭಾರತದಾದ್ಯಂತ ಅವರು ಪಸರಿಸಿದಂತೆ ಮೂಲ ದ್ರಾವಿಡದಿಂದ ಹಲವಾರು ವಿಭಿನ್ನ ದ್ರಾವಿಡಭಾಷೆಗಳು ಹುಟ್ಟಿಕೊಂಡವು. ಈ ವರೆಗೆ ಸುಮಾರು ಎಪ್ಪತ್ತೂರು ದ್ರಾವಿಡ ಭಾಷೆಗಳನ್ನು ಗುರುತಿಸಲಾಗಿದೆ. ಜಗತ್ತಿನಲ್ಲಿ ಸುಮಾರು ಹದಿನೈದುಕೋಟಿಗೂ ಹೆಚ್ಚು ಜನರು ದ್ರಾವಿಡ ಭಾಷೆಗಳನ್ನು ಬಳಸುತ್ತಾರೆ. ೨೦ ಕ್ಕೂ ಹೆಚ್ಚಿರುವ ದ್ರಾವಿಡಭಾಷೆಗಳಲ್ಲಿ ತಮಿಳು, ಮಲೆಯಾಳಂ, ಕನ್ನಡ ಹಾಗೂ ತೆಲುಗು ಭಾಷೆಗಳು ಮಾತ್ರ ಸ್ವತಂತ್ರ ಲಿಪಿಯನ್ನು, ಸಮೃದ್ಧ ಸಾಹಿತ್ಯವನ್ನು ಪಡೆದಿವೆ. ತುಳು, ಕೊಡವ ಭಾಷೆಗಳಲ್ಲಿ ಕನ್ನಡ ಲಿಪಿಯನ್ನೇ ಬಳಸಲಾಗುತ್ತದೆ. ಅವುಗಳಲ್ಲೂ ವಿಪುಲ ಸಾಹಿತ್ಯ ರಚನೆಯಾಗಿದೆ. ಇನ್ನುಳಿದ ಭಾಷೆಗಳು ಕೇವಲ ಮೌಖಿಕವಾಗಿ ಮಾತ್ರ ಬಳಕೆಗೊಳ್ಳುತ್ತಿವೆ.

## 2.4 ಕನ್ನಡ ಭಾಷೆಯ ಅವಸ್ಥೆಗಳು :

ಕನ್ನಡದ ಮೊಟ್ಟಮೊದಲನೆಯ ಉಪಲಬ್ಧ ಶಾಸನ ಹಲ್ಮಿಡಿ ಶಾಸನವಾದರೆ ಮೊಟ್ಟಮೊದಲ ಉಪಲಬ್ಧ ಗ್ರಂಥ 'ಕವಿರಾಜ ಮಾರ್ಗ'. ಇದು ಮಾನ್ಯಖೇಟ (ಇಂದಿನ ಗುಲಬರ್ಗಾ ಜಿಲ್ಲೆಯ ಮಳಖೇಡ) ದಲ್ಲಿದ್ದ ರಾಷ್ಟ್ರಕೂಟ ಚಕ್ರವರ್ತಿ

ನೃಪತುಂಗನ (814-880) ಆಸ್ಥಾನ ಕವಿ ಶ್ರೀವಿಜಯ ರಚಿಸಿದ್ದು. ಅದರಲ್ಲಿ- ಕಾವೇರಿಯಿಂದಮಾಗೋದಾವರಿವರಮಿರ್ದನಾಡದಾ ಕನ್ನಡದೊಳ್, ಎಂದು ಹೇಳಿರುವುದನ್ನು ಗಮನಿಸಿದರೆ ಕನ್ನಡ ಪ್ರದೇಶ 9 ನೆಯ ಶತಮಾನದ ವೇಳೆಗೆ ಕಾವೇರಿಯಿಂದ ಗೋದಾವರಿ ನದಿಯವರೆಗೆ ವಿಸ್ತಾರವಾಗಿ ಪಸರಿಸಿತ್ತು ಎಂದು ಸ್ಪಷ್ಟವಾಗಿ ತಿಳಿದುಬರುತ್ತದೆ. ಅನಂತರದ ಒಂದು ಶತಮಾನದ ಅವಧಿಯಲ್ಲಿ ಕನ್ನಡದಲ್ಲಿ ಸಮೃದ್ಧ ಸಾಹಿತ್ಯ ರಚನೆಯಾಗಿ ಹತ್ತನೆಯ ಶತಮಾನ ಕನ್ನಡದ ಸುವರ್ಣಯುಗ ಎನಿಸಿತು. ಕವಿರಾಜ ಮಾರ್ಗದಲ್ಲಿಯೇ 'ಪಟಿಗನ್ನಡ' ಎಂಬುದಾಗಿ ಕನ್ನಡದ ಹಳೆಯ ಅವಸ್ಥೆಯೊಂದನ್ನು ಸೂಚಿಸಲಾಗಿದೆ. ಶುದ್ಧ (ತಿರುಳು) ಕನ್ನಡ ಬಳಕೆಯಲ್ಲಿದ್ದ ಪ್ರದೇಶದ ಕೆಲವು ಸ್ಥಳಗಳನ್ನು ಶ್ರೀವಿಜಯ ಗುರುತಿಸುತ್ತಾನೆ. ಅವುಗಳು ಪುಲಿಗೆರೆ (ಇಂದಿನ ಲಕ್ಷ್ಮೇಶ್ವರ), ಕೊಪಣ (ಇಂದಿನ ಕೊಪ್ಪಳ), ಒಕ್ಕುಂದ (ಇಂದಿನ ಒಕ್ಕುಂದ) ಮುಖ್ಯವಾದವುಗಳು. 12ನೆಯ ಶತಮಾನದಲ್ಲಿ ಧರ್ಮಾಮೃತದ ಕರ್ತೃ ನಯಸೇನ 'ಪೊಸಗನ್ನಡ' ಎಂಬ ಶಬ್ದ ಪ್ರಯೋಗ ಮಾಡುತ್ತಾನೆ. 13 ನೆಯ ಶತಮಾನದ ವೈಯಾಕರಣ ಕೇಶಿರಾಜ 'ಅಚ್ಚಗನ್ನಡ' ಎಂಬ ಶಬ್ದ ಪ್ರಯೋಗವನ್ನು ಮಾಡಿದ್ದಾನೆ. ಶ್ರೀವಿಜಯ ನಯಸೇನ, ಕೇಶಿರಾಜರು ಗ್ರಂಥಸ್ಥ ಕನ್ನಡವನ್ನು ದೃಷ್ಟಿಯಲ್ಲಿಟ್ಟುಕೊಂಡೇ ಪ್ರಾಯಃ ಕನ್ನಡದ ಅವಸ್ಥೆಗಳನ್ನು ಗುರುತಿಸಿದ್ದಾರೆ. ಕೇಶಿರಾಜನು ವೈಯಾಕರಣನಾಗಿದ್ದರಿಂದ ಮತ್ತು ಸೂಕ್ಷ್ಮ ನಿರೀಕ್ಷಣಾ ಬುದ್ಧಿಯುವನಾಗಿದ್ದರಿಂದ ಅಲ್ಲಲ್ಲಿ ಕೆಲವೆಡೆ ತನ್ನ ಕಾಲದಲ್ಲಿ ಪ್ರಚಲಿತವಿದ್ದ ಕನ್ನಡದ ಆಡು ನುಡಿಯನ್ನು ಪರಿಗಣಿಸಿ ಕೆಲಮಾತು ಹೇಳಿದ್ದಾನೆ. ಗ್ರಂಥಸ್ಥ ಭಾಷೆಗೂ ಆಡುನುಡಿಗೂ ಸಾಕಷ್ಟು ವ್ಯತ್ಯಾಸ ಕನ್ನಡದಲ್ಲಿದೆ. ಆಧುನಿಕರು ಭಾಷೆಯ ಜೀವಂತಿಕೆ ಆಡು ನುಡಿಯಲ್ಲಿಯೇ ಸ್ಪಷ್ಟವಾಗಿರುವುದರಿಂದ ಅದನ್ನೇ ಆಧರಿಸಿ ವ್ಯಾಕರಣ ರಚಿಸುವುದು ಸೂಕ್ತ ಎಂದು ಅಭಿಪ್ರಾಯಪಡುತ್ತಾರೆ.

ಕನ್ನಡದಲ್ಲಿ ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ ಹಾಗೂ ಹೊಸಗನ್ನಡ ಎಂಬ ನಾಲ್ಕು ಅವಸ್ಥಾಭೇದಗಳನ್ನು ವಿದ್ವಾಂಸರು ಗುರುತಿಸುತ್ತಾರೆ.

೧. ಕವಿರಾಜಮಾರ್ಗದ ಪೂರ್ವ ಕಾಲದ ಕನ್ನಡ– **"ಪ್ರಾಚೀನ ಕನ್ನಡ"**
(ಇದನ್ನು ಪೂರ್ವದ ಹಳಗನ್ನಡವೆಂದೂ ಕರೆದಿದ್ದಾರೆ)
೨, ೧೦–೧೧ ನೆಯ ಶತಮಾನದ ಕನ್ನಡ– **"ಹಳಗನ್ನಡ"**
೩. ೧೨ ರಿಂದ ೧೭ ನೆಯ ಶತಮಾನದ ವರೆಗಿನ ಕನ್ನಡ– **"ನಡುಗನ್ನಡ"**
೪. ೧೭ ನೇ ಶತಮಾನದ ಈಚೆಗಿನ ಕನ್ನಡ– **"ಹೊಸಗನ್ನಡ"**

ಈ ಮೇಲಿನ ನಾಲ್ಕು ಅವಸ್ಥಾಂತರಗಳ ಕಾಲವನ್ನು ಅತ್ಯಂತ ನಿಖರವಾಗಿ ಗುರುತಿಸಲು ಸಾಧ್ಯವಿಲ್ಲವಾದರೂ ಈ ಅವಸ್ಥೆಗಳ ವಿಶಿಷ್ಟ ಲಕ್ಷಣಗಳನ್ನು ಗುರುತಿಸಲಾಗಿದೆ. ಮಹತ್ವದ ಕೆಲವು ವೈಶಿಷ್ಟ್ಯಗಳು ಹೀಗಿವೆ :

## 2.4.1 ಪ್ರಾಚೀನ ಕನ್ನಡ (*Anciant Kannada*)

೧. ಆಖ್ಯಾತ ಪ್ರತ್ಯಯ ಸ್ವರದ ದೀರ್ಘ ಪ್ರಯೋಗ :
ವಂ**ದಾನ್**, ಮುಡಿಪ್ಪಿ**ದಾರ್**, ಏಱಿ**ದಾರ್**, ಕೊಟ್ಟಾರ್,
ಅಱಿ**ದೋರ್**

೨. ಸಪ್ತಮೀ ವಿಭಕ್ತಿ ಪ್ರತ್ಯಯ 'ಉಳ್' ಪ್ರಯೋಗ :
ನಾ**ಡುಳ್**, ಸಂಕಟ**ದುಳ್**

೩. ಷಷ್ಠೀ ವಿಭಕ್ತಿ ಪ್ರತ್ಯಯ ದೀರ್ಘ ಪ್ರಯೋಗ:
ಪಶುಪತಿ**ಯಾ**. ಮಂಗಳೀಸ**ನಾ**. ಏಟಿನೆ**ಯಾ**, ನರಕ**ದಾ**, ನಮಿಲೂ**ರಾ**
ಗುರುವಡಿ**ಗಳಾ**

೪. ದ್ವಿತೀಯಾ ವಿಭಕ್ತಿ ಪ್ರತ್ಯಯ ದೀರ್ಘ ಪ್ರಯೋಗ:
ಸ್ವರ್ಗಾಗ್ರ**ಮಾನ್**, ಇ**ದಾನ್**, ದೇಗುಲ**ಮಾನ್**, ಮಹಾಜನ**ಮಾನ್**

೫, ನಿಷೇಧಾರ್ಥದಲ್ಲಿ ಸ್ವರ ದೀರ್ಘ ಪ್ರಯೋಗ :
ಆ ವಿತ್ತಿದಲ್ಲಿ ವೆಳೆ**ಯಾದೆ** ಕೊಡುಗೆ
ಸಿದ್ಧಸಮಯನ್ ತ**ಪ್ಪಾ**ದೆ ನೋಂತು, ಇ**ಲ್ಲಾ**ದೆಕಾದು

೬, ಲಿಪಿಯಲ್ಲಿ ಬಿಂದುವಿನ ಸ್ಥಾನದಲ್ಲಿ 'ನ್' ಕಾರ ಪ್ರಯೋಗ :
ಸುತನ್ಗೆ, ಒನ್ದು. ಪಿನ್ದು, ಸೇನ್ದ್ರಕ

೭. ಪೂರ್ಣಕ್ರಿಯಾಪದದಲ್ಲಿ ಲಿಂಗ-ವಚನ-ಕಾಲ ವಿವಕ್ಷೆಯಿಲ್ಲದ ರೂಪಗಳ ಪ್ರಯೋಗ ಬಾಹುಳ್ಯ :
ಇರ್ಕ್ಕುಂ. ಅಕ್ಕುಂ, ಬಗೆಗುಂ, ಉಲಿಗುಂ, ಬರ್ಕ್ಕುಂ.

೮, ಉತ್ತಮಪುರುಷ ಬಹುವಚನ ಸರ್ವನಾಮಗಳಲ್ಲಿ ಸಮಾವೇಶಿಕ (*Inclusive*) ಅಸಮಾವೇಶಿಕ (*Exclusive*) ಎಂದು ಎರಡು ಬಗೆಯ ಪ್ರಯೋಗ :
ಆಂ, ಎಮ್ಮ, ಎಮಗೆ (ಅಸಮಾವೇಶಿಕ)
ನಾಂ, ನಮ್ಮ, ನಮಗೆ (ಸಮಾವೇಶಿಕ)

೯. 'ಬ' ಕಾರದ ಸ್ಥಾನದಲ್ಲಿ 'ವ'ಕಾರ ಪ್ರಯೋಗ :
ವಿಟ್ಟಾರ್, ವಿಟ್ಟುದು, ವಿತ್ತಿದಲ್ಲಿ ವೆಳೆಯಾದೆ, ವೆಟ್ಟದುೞ್

೧೦. 'ಇ'ಕಾರದ ಸ್ಥಾನದಲ್ಲಿ 'ಎ'ಕಾರ ಪ್ರಯೋಗ :
ಕಾದೆಱಿದು, ಎಱಿದು,

೧೧, ವ್ಯಂಜನದ್ವಿತ್ವ ಬಾಹುಳ್ಯ :
ನಿರ್ವ್ವಿನೀತರಾ, ಸಾಸಿರ್ವ್ವರ್, ಪಾರ್ವ್ವರುಂ
ಧರ್ಮ್ಮ, ಸರ್ವ್ವ, ಸ್ವರ್ಗ್ಗ

೧೨. ಉತ್ತಮಪುರುಷ ವಿಧ್ಯರ್ಥದಲ್ಲಿ 'ಗ' ಇಲ್ಲವೆ 'ಕ' ಪ್ರತ್ಯಯದ ಪ್ರಯೋಗ ;
ಪುಟ್ಟಲ್ಕ, ರಕ್ಷಿಕ, ಕೊಳ್ಗ, ಕೆಡುಗ

೧೩. ಱ, ೞ ಗಳನ್ನು ತಪ್ಪಿಲ್ಲದೆ ಪ್ರಯೋಗಿಸಲಾಗಿದೆ,

೧೪. 'ಪ್' ಕಾರ 'ಹ್'ಕಾರವಾಗದೆ ಉಳಿದುಕೊಂಡು ಬಂದಿದೆ (ಆದರೆ ೬ನೆಯ ಶತಮಾನದ ಆರಂಭದ ವೇಳೆಗೆ ಪ್ > ಹ್ ಬದಲಾವಣೆ ಆರಂಭವಾಗಿದೆ)

## 2.4.2 ಹಳಗನ್ನಡ (*Old Kannada*)

೧. 'ಪ್' ಕಾರದ ಸ್ಥಾನದಲ್ಲಿ ಹ್ ಕಾರ ಪ್ರಯೋಗ (ಸ್ವರಗಳ ಮಧ್ಯದಲ್ಲಿ)
ಅಪ್ಪನ್ > ಅಹನ್, ಅಪ್ಪುದು > ಅಹುದು

೨. 'ವ್' ಕಾರದ ಸ್ಥಾನದಲ್ಲಿ 'ಬ' ಕಾರ ಪ್ರಯೋಗ
ವಂದುದು > ಬಂದುದು

೩. ಆಖ್ಯಾತ ರೂಪಗಳಲ್ಲಿ ಸ್ವರ ಬದಲಾವಣೆಗಳಾಗಿವೆ
(ಅ) ಒ>ಅ (ಬ) ಆ>ಅ
ಆೞಿದೊನ್>ಆೞಿದನ್ ಮುಡಿಪ್ಪಿದಾರ್>ಮುಡಿಪ್ಪಿದರ್

೪. ಸಂಯುಕ್ತಾಕ್ಷರಗಳಲ್ಲಿನ ದ್ವಿತ್ವ ಹ್ರಸ್ವವಾಗುವುದು
ಊರ್ಗ್ಗೆ>ಊರ್ಗೆ

### 2.4.3 ನಡುಗನ್ನಡ (*Medieval Kannada*)

೧. 'ೞ' ಕಾರದ ಸ್ಥಾನದಲ್ಲಿ 'ಳ್' ಕಾರ ಪ್ರಯೋಗ
ಬಾೞ್>ಬಾಳು ಇೞಿ>ಇಳಿ

೨. ಸಬಿಂದುಕ ಶಬ್ದಗಳು ಅಬಿಂದುಕಗಳಾಗುವುದು
ಬೆಡಂಗು>ಬೆಡಗು, ಊರಿಂಗೆ>ಊರಿಗೆ, ಕೆಲಂಬರ್>ಕೆಲಬರ್

೩. ಸರ್ವನಾಮಗಳಲ್ಲಿನ 'ಮ್' ಕಾರ 'ವ್' ಕಾರವಾಗುವುದು
ನಾಮ್>ನಾವು, ತಾಮ್>ತಾವು, ನೀಮ್>ನೀವು

೪. ವ್ಯಂಜನಾಂತಗಳು ಸ್ವರಾಂತಗಳಾಗುವುದು
ಕಣ್>ಕಣ್ಣು, ತಿನ್>ತಿನ್ನು, ಊರ್>ಊರು

೫. ಸಂಸ್ಕೃತ ಪದಗಳ ಬದಲಾಗಿ ತದ್ಭವ, ಅಪಭ್ರಂಶ ಪದಗಳ ಪ್ರಯೋಗ ಹೆಚ್ಚು
ಸ್ಮಶಾನ>ಮಸಣ, ಭಕ್ತಿ>ಭಕುತಿ, ಆಕಾಶ>ಆಗಸ, ಸ್ಥಾನ>ತಾಣ.

೬. 'ಪ್' ಕಾರದ ಸ್ಥಾನದಲ್ಲಿ 'ಹ್' ಕಾರ ಬಳಕೆ
ಪುಲಿ>ಹುಲಿ, ಪಂದಿ>ಹಂದಿ, ಪಲಗೆ>ಹಲಗೆ, ಪಾರ್ವ>ಹಾರುವ.

೭. 'ಲ್' ಕಾರ ಸ್ಥಾನದಲ್ಲಿ 'ಳ್' ಕಾರ ಬಳಕೆ
ಬೆರಲ್>ಬೆರಳ್, ಕೊರಲ್>ಕೊರಳ್.

### 2.4.4. ಹೊಸಗನ್ನಡ (*Modern Kannada*) :

೧. 'ೞ' ಹಾಗೂ ಱ ಬಳಕೆ ಸಂಪೂರ್ಣ ನಿಂತುಹೋದುದು.

೨. ಇಂಗ್ಲಿಷ್, ಫಾರಸಿ, ಪ್ರೋರ್ತುಗೀಜ್, ಉರ್ದು, ಮರಾಠಿ ಮುಂತಾದ ಭಾಷೆಗಳ ಪ್ರಭಾವಕ್ಕೆ ಒಳಗಾದುದು.

೩. ನಿಷೇಧ ಪ್ರತ್ಯಯದ ಸ್ಥಾನದಲ್ಲಿ 'ಇಲ್ಲ' ಎಂಬ ನಿಷೇಧ ರೂಪದ ಬಳಕೆ
ನೋಡೆ/ನೋಡೆನು > ನೋಡುವುದಿಲ್ಲ.
ಮಾಡ/ಮಾಡಳ್ > ಮಾಡುವುದಿಲ್ಲ.

೪. ದೀರ್ಘಸ್ವರದ ಮುಂದೆ ವ್ಯಂಜನ ದಿತ್ತ್ವದ ಬಳಕೆ ನಿಂತುಹೋಗಿದ್ದು
ಊರ್ಗೆ > ಊರಿಗೆ

೫. ಪ್ರಾದೇಶಿಕ ಮತ್ತು ಸಾಮಾಜಿಕ ಉಪಭಾಷೆಗಳ ಸಂಖ್ಯೆ ಹೆಚ್ಚಾದದ್ದು.

೬. ವರ್ಣಮಾಲೆಯಲ್ಲಿ ವರ್ಣಗಳ ಸಂಖ್ಯೆ, ಸರ್ವನಾಮ, ಆಖ್ಯಾತ ಪ್ರತ್ಯಯಗಳು ಮುಂತಾದ ಅನೇಕ ವ್ಯಾಕರಣಾಂಶಗಳಲ್ಲಿ ರೂಪವ್ಯತ್ಯಾಸ.

ಕನ್ನಡವು ದ್ರಾವಿಡ ಭಾಷಾವರ್ಗದ ಪ್ರಮುಖ ಭಾಷೆಯಾದರೂ ಮೂಲದ್ರಾವಿಡಭಾಷೆಯಿಂದ ಭಿನ್ನವಾದ ಅನೇಕ ಅಂಶಗಳನ್ನು ಸ್ವತಂತ್ರವಾಗಿ ಬೆಳೆಸಿಕೊಂಡಿದೆ. ಉದಾಹರಣೆಗೆ ಮೂಲ ದ್ರಾವಿಡದಲ್ಲಿಲ್ಲದ 'ಹ್' ವರ್ಣವನ್ನು ಸ್ವತಂತ್ರವಾಗಿ ಬೆಳೆಸಿಕೊಂಡು ಬಂದುದು. ಸಮಾವೇಶಿಕ ಅಸಮಾವೇಶಿಕ ಸರ್ವನಾಮಗಳನ್ನು 'ಱ' 'ೞ' ಗಳನ್ನು ಕೈಬಿಟ್ಟುದು, ಲಿಂಗ ವ್ಯವಸ್ಥೆಯಲ್ಲಿ ಮೂಲಕ್ಕಿಂತ ಭಿನ್ನವಾದ ವ್ಯವಸ್ಥೆಯನ್ನು ಬೆಳೆಸಿಕೊಂಡದ್ದು ಇತ್ಯಾದಿ.

ಹೀಗೆ ಕನ್ನಡ ಭಾಷೆ ಹಲವಾರು ಹಂತಗಳನ್ನು ದಾಟಿ ಬೆಳೆಯುತ್ತ ಸಾಗಿ ಬಂದಿದೆ. ಕಾಲಕಾಲಕ್ಕೆ ಬೆಳೆಯುತ್ತ ಸಾಗಿಬಂದ ಕನ್ನಡಭಾಷೆಯನ್ನು ವ್ಯಾಕರಣ ಹಾಗೂ ಭಾಷಾ ವಿಜ್ಞಾನಗಳ ತತ್ತ್ವಗಳ ಚೌಕಟ್ಟಿನಲ್ಲಿ ವ್ಯವಸ್ಥಿತವಾಗಿ ವಿವರಿಸುವ ಕಾರ್ಯವನ್ನೂ ಕೆಲವು ವೈಯಾಕರಣರು ಮಾಡಿದ್ದಾರೆ. ಇದರಿಂದ ಕನ್ನಡ ವ್ಯಾಕರಣ ಪರಂಪರೆ ಬೆಳೆದು ಬಂತು. ಆದರೆ ಹಳಗನ್ನಡ ವ್ಯಾಕರಣ ಪರಂಪರೆ ಸಂಸ್ಕೃತ ವ್ಯಾಕರಣ ಪರಂಪರೆಯ ಮಾದರಿಯನ್ನೇ ಅಳವಡಿಸಿಕೊಂಡು ಬಂದಿದೆ. ಇದರಿಂದ ಈ ಪರಂಪರೆ ಸ್ವತಂತ್ರ ಲಕ್ಷಣಗಳನ್ನು ಅಷ್ಟಾಗಿ ತೋರಲಿಲ್ಲ. ಅಷ್ಟೇ ಅಲ್ಲ ಕನ್ನಡದಲ್ಲಿ ಹಳಗನ್ನಡ ಭಾಷೆಯನ್ನು ಕುರಿತ ವ್ಯಾಕರಣಗಳ ಸಂಖ್ಯೆಯೇ ತೀರ ಕಡಿಮೆ.

೩

# ಕನ್ನಡ ವ್ಯಾಕರಣಗಳು

ಕನ್ನಡ ವ್ಯಾಕರಣಗಳು ಬೆಳೆದುಬಂದ ಬಗೆಯನ್ನು ಸಂಕ್ಷಿಪ್ತವಾಗಿ ಇಲ್ಲಿ ನೋಡೋಣ—

## 3.1 ಪ್ರಾಚೀನ ಕನ್ನಡ ವ್ಯಾಕರಣಗಳು :

**3.1.1 ಕವಿರಾಜಮಾರ್ಗ :** ಕನ್ನಡ ವ್ಯಾಕರಣದ ಇತಿಹಾಸ ಪ್ರಾರಂಭವಾಗುವುದು ಕನ್ನಡದ ಉಪಲಬ್ಧ ಪ್ರಥಮ ಕೃತಿ ಕವಿರಾಜಮಾರ್ಗದಿಂದ. ಆದರೆ ಶ್ರೀವಿಜಯ (೮೧೪-೮೭೭) ನಿಗೂ ಮುಂಚೆಯೆ ಕನ್ನಡ ವ್ಯಾಕರಣ ಸಂಪ್ರದಾಯ ಬೆಳೆದುಬಂದಿರಬಹುದೆಂಬ ಸೂಚನೆಗಳು ಕವಿರಾಜಮಾರ್ಗದಲ್ಲೆ ದೊರೆಯುತ್ತವೆ. ಕವಿರಾಜಮಾರ್ಗ ಮೂಲತಃ ಅಲಂಕಾರಶಾಸ್ತ್ರಕ್ಕೆ ಮೀಸಲಾದ ಕೃತಿಯಾದರೂ ಅದರ ಮೊದಲ ಪರಿಚ್ಛೇದದಲ್ಲಿಯೆ ಕಾವ್ಯವು ವ್ಯಾಕರಣ ದೋಷರಹಿತವಾಗಲು ಬೇಕಾಗುವ ಕೆಲವು ವ್ಯಾಕರಣ ವಿಷಯಗಳನ್ನು ವಿವರವಾಗಿ ಸೂಚಿತವಾಗಿವೆ. ನಾಗವರ್ಮ ಕೇಶಿರಾಜ ಭಟ್ಟಾಕಳಂಕರು ಇವುಗಳ ಬಹಳಷ್ಟು ವಿಷಯಗಳನ್ನು ತಪ್ಪದೇ ತಮ್ಮ ವ್ಯಾಕರಣಗಳಲ್ಲಿ ನಮೂದಿಸಿದ್ದಾರೆ. ಪಟಿಗನ್ನಡವನ್ನು ಪೊಲೆಗೆಡಿಸಿ ನುಡಿಯುತ್ತಿದ್ದರೆಂದು ಹೇಳುವಲ್ಲಿ ಶ್ರೀವಿಜಯನು ಕನ್ನಡದ ಅವಸ್ಥಾಂತರಗಳನ್ನು ಗಮನವಿಟ್ಟು ನೋಡಿದ್ದಾನೆ. ತಿರುಳುಗನ್ನಡ ಪ್ರದೇಶದ ಮೇರೆಗಳನ್ನು ಹೇಳುವಲ್ಲಿ ಕನ್ನಡದ ಪ್ರಾದೇಶಿಕತೆಯನ್ನು ಸೂಚಿಸಿದ್ದಾನೆ. ದಕ್ಷಿಣೋತ್ತರಮಾರ್ಗಗಳನ್ನು ಹೇಳುವಲ್ಲಿ ಭಾಷಾಶೈಲಿಯನ್ನು ಗಮನಿಸಿದ್ದಾನೆ. ಶ್ರೀವಿಜಯನು ಹೇಳಿರುವ ಕಾರಕ ವಿಷಯ, ವಚನ ವಿಚಾರ ಕ್ರಿಯಾವಿಶೇಷಣ ಪ್ರಯೋಗ, ವಿಶೇಷಣ ವಿಶೇಷ್ಯ ಪದಗಳು ಸಮಾಸ ಅರಿಸಮಾಸ (ಈ ಪದವನ್ನು ಶ್ರೀವಿಜಯ ಬಳಸಿಲ್ಲ), ಸಮಸಂಸ್ಕೃತ ಮುಂತಾದ ಅನೇಕ ವ್ಯಾಕರಣ ವಿಷಯಗಳನ್ನು ಕುರಿತು ವಿವರಿಸುವಲ್ಲಿ ಅವನೊಬ್ಬ ವೈಯಾಕರಣನಾಗಿ ನಮಗೆ ತೋರುತ್ತಾನೆ.

### 3.1.2 ಅನುಪಲಬ್ಧ ವ್ಯಾಕರಣಗಳು :

ಕವಿರಾಜಮಾರ್ಗದ ಅನಂತರ ಸುಮಾರು ಇನ್ನೂರು ವರ್ಷಗಳ ಸುದೀರ್ಘ ಅವಧಿಯಲ್ಲಿ ಕನ್ನಡ ವ್ಯಾಕರಣಕ್ಕೆ ಸಂಬಂಧಿಸಿದಂತೆ ಯಾವ ಕೃತಿಗಳೂ ಸೃಷ್ಟಿಯಾಗದೆ ಇರಲಾರವು. ಆದರೆ ದುರ್ದೈವದಿಂದ ಅಂಥ ಯಾವ ಕೃತಿ ಈವರೆಗೆ ಸಿಕ್ಕಿಲ್ಲ. ಧರ್ಮಾಮೃತದ ನಯಸೇನನಲ್ಲದೆ ವ್ಯಾಕರಣದ ನಯಸೇನನೊಬ್ಬ ಇರಬೇಕೆಂದು ಊಹಿಸಲಾಗಿದೆ. ಶಂಖವರ್ಮ, ಗುಣವರ್ಮ, ಒಂದನೆಯ ನಾಗವರ್ಮ, 'ಶಬ್ದಾವತಾರ' ಕೃತಿಯನ್ನು ರಚಿಸಿದ ದುರ್ವಿನೀತ (೬ ನೇ ಶತಮಾನ) ಇವರ ಕೃತಿಗಳು ದೊರೆಯುವವರೆಗೆ ಇವರ ವ್ಯಾಕರಣತ್ವ ಊಹೆಯ ಕೂಸು ಮಾತ್ರ. ಕವಿ ರನ್ನ ವೈಯಾಕರಣ ಎಂಬುದಿನ್ನೂ ಖಚಿತವಾಗಬೇಕಾಗಿದೆ.

### 3.1.3 ಉಪಲಬ್ಧ ವ್ಯಾಕರಣಗಳು :

ಉಪಲಬ್ಧವಾಗಿರುವ ಪ್ರಾಚೀನ ಕನ್ನಡ ವ್ಯಾಕರಣಗಳು ಒಟ್ಟು ಮೂರುವರೆ.

೧. ಎರಡನೆಯ ನಾಗವರ್ಮನ (ಕ್ರಿ. ಶ. ೧೦೪೨) ಕರ್ನಾಟಕ ಭಾಷಾ ಭೂಷಣ.

೨. ಅವನದೇ ಆದ (?) ಕಾವ್ಯಾವಲೋಕನದಲ್ಲಿಯ 'ಶಬ್ದಸ್ಮೃತಿ' ಭಾಗ.

೩. ಕೇಶಿರಾಜನ (ಕ್ರಿ. ಶ. ೧೨೬೦) ಶಬ್ದಮಣಿದರ್ಪಣ.

೪. ಭಟ್ಟಾಕಳಂಕನ (ಕ್ರಿ. ಶ. ೧೫೪೬-೧೬೧೫) ಶಬ್ದಾನುಶಾಸನ.

ಕನ್ನಡಭಾಷೆ ಪ್ರಬುದ್ಧಗೊಂಡು ಸುಮಾರು ೧೪೦೦ ವರ್ಷಗಳ ಸುದೀರ್ಘ ಅವಧಿಯಲ್ಲಿ ಕೇವಲ ಬೆರಳಣಿಕೆಯಲ್ಲಿರುವ ಈ ವ್ಯಾಕರಣಗಳಲ್ಲಿ ಮೊದಲನೆಯದು ಹಾಗೂ ಕೊನೆಯದು ಸಂಸ್ಕೃತದಲ್ಲಿ ಬರೆಯಲ್ಪಟ್ಟ ಕನ್ನಡ ವ್ಯಾಕರಣಗಳಾದರೆ 'ಶಬ್ದಸ್ಮೃತಿ' ಮತ್ತೊಂದು ಕೃತಿಯ ಭಾಗ ಮಾತ್ರವಾಗಿ ಬಂದಿರುವುದರಿಂದ ಅದಕ್ಕೆ ಗ್ರಂಥವ್ಯಾಪ್ತಿ ಇಲ್ಲ. ಹೀಗಾಗಿ ಕನ್ನಡದಲ್ಲಿ ಸಮಗ್ರ ವ್ಯಾಕರಣ ಗ್ರಂಥ ಒಂದೇ ಒಂದು ಅದುವೆ ಕೇಶಿರಾಜನ ಶಬ್ದಮಣಿದರ್ಪಣ. ನಾಗವರ್ಮ ಭಟ್ಟಾಕಳಂಕರು ತಮ್ಮ ಕೃತಿಗಳನ್ನು ಸಂಸ್ಕೃತದಲ್ಲಿ ಬರೆದಿರುವುದಕ್ಕೆ ಅವರಿಗೆ

ನಿರ್ದಿಷ್ಟ ಕಾರಣಗಳಿರಬೇಕು. 'ಶಬ್ದಸ್ಮೃತಿ' ಕನ್ನಡದಲ್ಲಿದ್ದುದರಿಂದ ತಕ್ಕ ಮಟ್ಟಿಗೆ ಸಂಸ್ಕೃತದಿಂದ ಭಿನ್ನ ರೀತಿಯಲ್ಲಿ ವ್ಯಾಕರಣಾಂಶಗಳನ್ನು ನಿರೂಪಿಸಲು ನಾಗವರ್ಮನಿಗೆ ಸಾಧ್ಯವಾಯಿತು.

ಕರ್ನಾಟಕ ಲಕ್ಷಣ ಶಬ್ದಶಾಸ್ತ್ರವೆಂದು ತಾನೇ ಕರೆದ ಕೇಶಿರಾಜನ ಶಬ್ದಮಣಿ ದರ್ಪಣ ಕನ್ನಡ ವ್ಯಾಕರಣ ಕ್ಷೇತ್ರಕ್ಕೆ ಅಮೂಲ್ಯ ಕೊಡುಗೆ. ಶಬ್ದಮಣಿ ದರ್ಪಣವು ಬಹುಜನಪ್ರಿಯ ವ್ಯಾಕರಣವಾದ್ದರಿಂದ ಅದರ ಬಹುಸಂಖ್ಯೆಯ ಹಸ್ತ ಪ್ರತಿಗಳು ಲಭಿಸಿವೆ. ದ್ರಾವಿಡ ಭಾಷೆಗಳಲ್ಲಿ ನಿರ್ಮಾಣವಾದ ಪ್ರಾಚೀನ ವ್ಯಾಕರಣಗಳಲ್ಲಿ ಶಬ್ದಮಣಿದರ್ಪಣ ವಿಶೇಷ ಮನ್ನಣೆ ಪಡೆದಿದೆ. ಸಂಸ್ಕೃತದ ಚೌಕಟ್ಟಿನಲ್ಲಿ ಕನ್ನಡ ವ್ಯಾಕರಣವನ್ನು ರಚಿಸಿದ್ದರೂ, ತನ್ನ ಕಾಲದವರೆಗಿನ ಕನ್ನಡದ ಬೆಳವಣಿಗೆಗಳೆಡೆಗೆ ಅವನು ಎಚ್ಚರಿಕೆಯಿಂದ ಗಮನ ನೀಡಿದುದು ಒಂದು ವಿಶೇಷ. ಹಾಗೆಯೆ ತನ್ನ ವ್ಯಾಕರಣಕ್ಕೆ ಕಾವ್ಯಲೇಪನವನ್ನು ನೀಡಿ ಅದನ್ನು ಶುಷ್ಕವಾಗದಂತೆ ನೋಡಿಕೊಂಡಿದ್ದಾನೆ. ತನ್ನ ಹಿಂದಿನ ೪೦೦ ವರ್ಷಗಳ ಅವಧಿಯ ಕನ್ನಡವನ್ನು ವರ್ಣನಾತ್ಮಕ ಶೈಲಿಯಲ್ಲಿ ಸಂಸ್ಕೃತ ಮಾದರಿಯನ್ನು ಇಟ್ಟುಕೊಂಡು ವಿವರಿಸಿರುವುದರಿಂದ ಕೆಲವು ಆಭಾಸಗಳೂ ಉಂಟಾಗಿವೆ.

ಗಮಕ ಸಮಾಸದಿಂ ಜಟಿಕುಳಕ್ಷಳದಿಂ ಶ್ರುತಿಸಹ್ಯಸಂಧಿಯಿಂ
ಸಮುಚಿತಮಾಗಿ ಬರ್ಪ ಸತಿಸಪ್ತಮಿಯಿಂ ಸಮಸಂಸ್ಕೃತೋಕ್ತಿಯಿಂ
ವಮಹಪಭೇದದಿಂ ವಿರಹಿತಾವ್ಯಯ ಸಂಸ್ಕೃತಲಿಂಗದಿಂ ಪದೋ
ತ್ತಮ ಶಿಥಿಲತ್ವದಿಂ ಯತಿವಿಲಂಘನದಿಂದರಿದಲ್ತೆ ಕನ್ನಡಂ

ಎಂದು ಕನ್ನಡದ ವೈಶಿಷ್ಟ್ಯಗಳನ್ನು ಮೊಟ್ಟಮೊದಲಬಾರಿ ಪಟ್ಟಿಮಾಡಿದ್ದಾನೆ.

ಭಟ್ಟಾಕಳಂಕನ (೧೬೦೪) ಶಬ್ದಾನುಶಾಸನ ಸಂಸ್ಕೃತದಲ್ಲಿದ್ದರೂ ಕನ್ನಡ ವ್ಯಾಕರಣ ವಿಷಯಗಳನ್ನು ಸಮಗ್ರವಾಗಿ ಒಳಗೊಂಡ ಬೃಹತ್ ವ್ಯಾಕರಣ ಕೃತಿ. ಕೇವಲ ಗಾತ್ರದ ದೃಷ್ಟಿಯಿಂದಲ್ಲ. ಸತ್ವ, ಕ್ರಮಬದ್ಧತೆ ಹಾಗೂ ಶಾಸ್ತ್ರದೃಷ್ಟಿಗಳಲ್ಲಿಯೂ ಇದು ಉತ್ತಮ ಕೃತಿ. ಅಂತೆಯೆ ಇದನ್ನು ಕನ್ನಡದ ಅಷ್ಟಾಧ್ಯಾಯಿ ಎಂದೂ ಹೇಳಲಾಗುತ್ತದೆ. ಎಂ. ವಿ. ಸೀತಾರಾಮಯ್ಯ ಅವರು ಕೇಶಿರಾಜನನ್ನು ಕನ್ನಡದ ಪಾಣಿನಿ ಎಂದು ಕರೆದರೆ ಭಟ್ಟಾಕಳಂಕನನ್ನು ಅಭಿನವ

ಪಾಣಿನಿ ಎಂದಿದ್ದಾರೆ. ಭಟ್ಟಾಕಳಂಕನು ಸಂಸ್ಕೃತ ಮಾದರಿಯನ್ನು ಕಟ್ಟುನಿಟ್ಟಾಗಿ ಅನುಸರಿಸಲು ಹೆಣಗಿ ಟೀಕೆಗೆ ಗುರಿಯಾಗಿದ್ದಾನೆ. ಕನ್ನಡ ಕಾವ್ಯಗಳಿಂದ ಉದಾಹರಣೆಗಳನ್ನು ಭಟ್ಟಾಕಳಂಕ ಅಷ್ಟಾಗಿ ಎತ್ತಿಕೊಟ್ಟಿಲ್ಲ. ಗಣಪಾಠಗಳನ್ನು ಎಚ್ಚರಿಕೆಯಿಂದ ಸಿದ್ಧಪಡಿಸಿಕೊಟ್ಟಿದ್ದಾನೆ.

### 3.1.4 ಶಬ್ದಸ್ಮೃತಿ :

ಎರಡನೆಯ ನಾಗವರ್ಮನ (೧೦೪೨) ಕಾವ್ಯಾವಲೋಕನವೆಂಬ ಗ್ರಂಥದ ಮೊದಲನೆಯ ಭಾಗ ಕನ್ನಡ ವ್ಯಾಕರಣವನ್ನು ಒಳಗೊಂಡ'ಶಬ್ದಸ್ಮೃತಿ.'ಕಾವ್ಯಾವಲೋಕನ ಕಾವ್ಯಮೀಮಾಂಸೆಗೆ ಮೀಸಲಾಗಿರುವ ಕೃತಿ. ಕವಿರಾಜಮಾರ್ಗದ ಅನಂತರ ಸುಮಾರು ಮುನ್ನೂರು ವರ್ಷಗಳ ಮೇಲೆ ಕನ್ನಡದಲ್ಲಿ ಮತ್ತೆ ವ್ಯಾಕರಣ ವಿವರಣೆ ಬಂದುದು ಕಾವ್ಯಾವಲೋಕನದಲ್ಲಿಯೆ. ಕಾವ್ಯಾವಲೋಕನದಲ್ಲಿ ೧. ಶಬ್ದಸ್ಮೃತಿ ೨. ಕಾವ್ಯಮಲವ್ಯಾವೃತ್ತಿ ೩. ಗುಣವಿವೇಕ ೪. ರೀತಿಕ್ರಮರಸನಿರೂಪಣ ೫, ಕವಿಸಮಯ ಎಂಬ ಐದು ಅಧಿಕರಣಗಳಿವೆ. ಇವುಗಳಲ್ಲಿ ಮೊದಲನೆಯದು ಕನ್ನಡ ವ್ಯಾಕರಣಕ್ಕೆ ಸಂಬಂಧಿಸಿದರೆ ಉಳಿದವು ಕಾವ್ಯಮೀಮಾಂಸೆಗೆ ಸಂಬಂಧಿಸಿವೆ. 'ಶಬ್ದ ಸ್ಮೃತಿ'ಯನ್ನು (ಶಬ್ದ ಸಂಸ್ಮರಣವನ್ನೂ) ಜನರು ತಿಳಿಯುವಂತೆ ಮಾಡಿ ಬರೆದುದರಿಂದ ವಿದ್ವಜ್ಜನರ ಸಭೆಯಲ್ಲಿ ನಾಗವರ್ಮನಿಗೆ ಅಗ್ರಪೂಜೆ ಲಭಿಸಿತಂತೆ ! ಮಹಾಮಹಿಮಾನುಭಾವದಿಂದ 'ಅಭಿನವ ಶರ್ವವರ್ಮ' ಎಂಬ ಬಿರುದು ನೀಡಿ ನಾಗವರ್ಮನನ್ನು ಗೌರವಿಸಲಾಯಿತೆಂದು ತಾನೇ ಶಬ್ದಸ್ಮೃತಿಯ ಕೊನೆಯ ನುಡಿಯಲ್ಲಿ ಹೇಳಿಕೊಂಡಿದ್ದಾನೆ. ೯೭ ಸೂತ್ರಗಳಲ್ಲಿ ಸಂಕ್ಷಿಪ್ತವಾಗಿ ಕನ್ನಡ ವ್ಯಾಕರಣ ವಿವೇಚನೆ ಅಲ್ಲದೆ ೩೨೪ ಉದಾಹರಣೆಗಳ ನುಡಿಗಳಿಂದ ಇದು ಒಳಗೊಂಡಿದೆ. ಈ ದೃಷ್ಟಿಯಲ್ಲಿ ಶಬ್ದಸ್ಮೃತಿ ಒಂದು ಸ್ವತಂತ್ರ ವ್ಯಾಕರಣವೇ ಆಗಬಹುದು.

ನಾಗವರ್ಮನೇ ಕನ್ನಡದ ಆದಿವ್ಯಾಕರಣಕಾರ, ಕನ್ನಡ ವ್ಯಾಕರಣವನ್ನು ಸಂಸ್ಕೃತದಲ್ಲೂ (ಕರ್ನಾಟಕ ಭಾಷಾಭೂಷಣ) ರಚಿಸಿದುದು ಇವನ ಇನ್ನೊಂದು ವೈಶಿಷ್ಟ್ಯ. ಕನ್ನಡ ಭಾಷೆಯ ಬಗೆಗೆ ರಚಿತವಾದ ಮೊಟ್ಟಮೊದಲ ವ್ಯಾಕರಣ ಸಂಸ್ಕೃತದಲ್ಲಿ ಮೂಡಿ ಬಂದುದೊಂದು ವಿಶೇಷವೇ. ನಾಗವರ್ಮನ ಅನಂತರ

ಬಂದ ವೈಯಾಕರಣರು ಒಂದಿಲ್ಲೊಂದು ಬಗೆಯಲ್ಲಿ ಇವನ ಪ್ರಭಾವಕ್ಕೆ ಒಳಗಾಗಿದ್ದಾರೆ. ಛಂದೋವಿಚಿತಿ, ಕರ್ನಾಟಕ ಭಾಷಾಭೂಷಣ, ವಸ್ತುಕೋಶ, ಕಾವ್ಯಾವಲೋಕನ ಇಂಥ ಕೃತಿಗಳನ್ನು ಅವಲೋಕಿಸಿದರೆ ನಾಗವರ್ಮ ಒಳ್ಳೆಯ ಶಾಸ್ತ್ರಜ್ಞನಾಗಿದ್ದನೆಂಬುದು ತಿಳಿಯುತ್ತದೆ. ಶಬ್ದಸ್ಮೃತಿ ಎಂದರೆ ಶಬ್ದಗಳ ಸಂಸ್ಮರಣವನ್ನು ಜನಕ್ಕೆ ಉಂಟು ಮಾಡಿಕೊಳ್ಳುವುದರ ಮೂಲಕ ಅವರಿಗೆ ಜ್ಞಾನ ನೀಡುವುದಾಗಿದೆ ಎಂದು ನಾಗವರ್ಮನ ಅಭಿಪ್ರಾಯ.

### 3.1.5 ಕರ್ನಾಟಕ ಭಾಷಾಭೂಷಣ :

ಕರ್ನಾಟಕ ಭಾಷಾಭೂಷಣ ನಾಗವರ್ಮನ ಮೂರನೆಯ ಕೃತಿ. ಸಂಸ್ಕೃತದಲ್ಲಿ ಕನ್ನಡ ಭಾಷೆಯ ವ್ಯಾಕರಣವನ್ನು ಸಾದ್ಯಂತವಾಗಿ ವಿವರಿಸುತ್ತದೆ. ಶಬ್ದಸ್ಮೃತಿಯನ್ನು ರಚಿಸಿದ್ದ ಕವಿಗೆ ಇದನ್ನು ಬರೆಯುವುದು ಕಷ್ಟವೇನಾಗಲಿಲ್ಲ. ಕನ್ನಡ ವ್ಯಾಕರಣವನ್ನು ಸಂಸ್ಕೃತದಲ್ಲಿ ಬರೆಯುವುದರ ಔಚಿತ್ಯವೇನೋ ತಿಳಿಯದು. ಆದರೆ ನಾಗವರ್ಮನು ತನ್ನ ಪಾಂಡಿತ್ಯವನ್ನು ಸಂಸ್ಕೃತದಲ್ಲೂ ಈ ಮೂಲಕ ತೋರಿಸಿದನೆನ್ನಬಹುದು. ಕನ್ನಡದಲ್ಲೇ ಈ ವ್ಯಾಕರಣವನ್ನು ಅವನು ಬರೆದಿದ್ದರೆ ಕನ್ನಡ ವ್ಯಾಕರಣ ಕ್ಷೇತ್ರಕ್ಕೆ ಒಂದು ಒಳ್ಳೆಯ ಕಾಣಿಕೆ ಲಭಿಸಿದಂತೆ ಆಗುತ್ತಿತ್ತು. ವಿಭಕ್ತಿ ಕಾರಕ ವಿಧಾನಗಳ ಬಹು ಸಂಖ್ಯೆಯ ಸೂತ್ರಗಳಲ್ಲಿ ಬಹಳಷ್ಟನ್ನು ಪಾಣಿನಿಯ ಅಷ್ಟಾಧ್ಯಾಯಿಯಿಂದ ಇದ್ದಕ್ಕಿದ್ದಂತೆ ಎತ್ತಿಕೊಂಡಿದ್ದಾನೆ.

ಕರ್ನಾಟಕ ಭಾಷಾಭೂಷಣದಲ್ಲೂ ಪ್ರಕರಣ ವಿಭಜನೆ ಸ್ವಲ್ಪ ಹೆಚ್ಚು-ಕಡಮೆ ಶಬ್ದಸ್ಮೃತಿಯಲ್ಲಿಯಂತೆಯೆ ಇದೆ. ಶಬ್ದಸ್ಮೃತಿಯ ವಿಸ್ತೃತ ರೂಪವಿದು ಎನಿಸಿದರೂ ವ್ಯಾಕರಣದ ಮುಖ್ಯಾಂಶಗಳನ್ನೆಲ್ಲ ಬಹಳ ಮಟ್ಟಿಗೆ ಕರ್ನಾಟಕ ಭಾಷಾಭೂಷಣ ಒಳಗೊಂಡಿದೆ. ಸಂಸ್ಕೃತದಲ್ಲಿದ್ದುದರಿಂದ ಪಂಡಿತರಿಗೆ ಮಾತ್ರ ಇದು ಮೀಸಲಾದಂತಾಗಿ ಜನಸಾಮಾನ್ಯರಿಗೆ ತಲುಪಲೇ ಇಲ್ಲ, ಆದ್ದರಿಂದ ಶಬ್ದಮಣಿದರ್ಪಣದಂತೆ ಜನಾದರಣೆಯನ್ನು ಪಡೆಯದೇ ಹೋಯಿತು.

### 3.1.6 ಶಬ್ದಮಣಿದರ್ಪಣ :

'ಕರ್ನಾಟಕ ಲಕ್ಷಣ ಶಬ್ದಶಾಸ್ತ್ರ'ವೆಂದು ತಾನೇ ಕರೆದ ಕೇಶಿರಾಜನ ಶಬ್ದಮಣಿದರ್ಪಣ ಕನ್ನಡ ವ್ಯಾಕರಣ ಕ್ಷೇತ್ರಕ್ಕೆ ಅಮೂಲ್ಯ ಕೊಡುಗೆಯಾಗಿದೆ.

ಪರಂಪರಾಗತ ಪ್ರಾಚೀನ ಕನ್ನಡ ವ್ಯಾಕರಣಗಳಲ್ಲಿ ಏಕಮೇವಾದ್ವಿತೀಯವಾಗಿ ಮೆರೆದ ಈ ಕೃತಿಯನ್ನು ಮೆಚ್ಚದ ಪಂಡಿತರೇ ಇಲ್ಲ. ನಾಗವರ್ಮನ ಶಬ್ದಸ್ಮೃತಿ, ಕರ್ನಾಟಕ ಭಾಷಾಭೂಷಣಗಳಲ್ಲಿ ವಿವರಿಸಿದ್ದನ್ನೇ ಕನ್ನಡದಲ್ಲಿ ಭಟ್ಟಿ ಇಳಿಸಿದ್ದಾನೆಂದು ಕೆಲವರು ಹೇಳುವರಾದರೂ ಕೇಶಿರಾಜನು ತನ್ನ ಹಿಂದಿನ ಕಾಲದ ಎಲ್ಲ ವ್ಯಾಕರಣ ಗ್ರಂಥಗಳನ್ನು ಹಿನ್ನೆಲೆಯಲ್ಲಿಟ್ಟುಕೊಂಡು ತನ್ನ ಸ್ವಂತಿಕೆಯನ್ನೂ, ಸ್ವತಂತ್ರ ವಿಚಾರಶೀಲತೆಯನ್ನೂ, ಕನ್ನಡ ಭಾಷೆಯ ರಚನೆಯ ಸೂಕ್ಷ್ಮ ಆಳ ಮತ್ತು ಅಗಲಗಳನ್ನು ಅರಿತು ಕುಶಾಗ್ರಮತಿಯನ್ನು ಮೆರೆದಿದ್ದಾನೆ.

ಸೂತ್ರಗಳಲ್ಲಿ ಸಂಧಿ, ನಾಮ, ಸಮಾಸ, ತದ್ಧಿತ, ಆಖ್ಯಾತ, ಧಾತು, ಅಪಭ್ರಂಶ, ಅವ್ಯಯ ಎಂಬ ಎಂಟು ಪ್ರಮುಖ ಪ್ರಕರಣಗಳಲ್ಲಿ ಸಮಗ್ರ ಕನ್ನಡ ಭಾಷೆಯ ಎಳೆ ಎಳೆಗಳನ್ನು ಹಿಂಜಿಟ್ಟಿದ್ದಾನೆ. ಆರಂಭದಲ್ಲಿ ಪೀಠಿಕೆ, ಕೊನೆಯಲ್ಲಿ ಪ್ರಯೋಗಸಾರವೆಂಬ ಶಬ್ದಾರ್ಥನಿರ್ಣಯವೆಂಬ ಪ್ರಕರಣಗಳೂ ಇವೆ. ಸೂತ್ರಗಳ ಅರ್ಥ ಸಾಮಾನ್ಯರಿಗೂ ಅರ್ಥವಾಗಲಿ, ಸಂದಿಗ್ಧತೆ ಉಂಟಾಗದಿರಲಿ ಎಂಬ ಇಚ್ಛೆಯಿಂದ ಕೇಶಿರಾಜನು ತನ್ನ ಸೂತ್ರಗಳಿಗೆ ತಾನೇ ವೃತ್ತಿಯನ್ನು ಬರೆದು ಉಪಕರಿಸಿದ್ದಾನೆ. ಆದರೂ ಲಿಂಗಣಾರಾಧ್ಯನೆಂಬುವನು (ಕ್ರಿ. ಶ. ೧೬೦೦) ಶಬ್ದಮಣಿದರ್ಪಣಕ್ಕೆ 'ಸೂತ್ರಾನ್ವಯ ರತ್ನಮಾಲೆ' ಎಂಬ ವ್ಯಾಖ್ಯಾನವನ್ನೂ, ನಿಟ್ಟೂರ ನಂಜಯ್ಯನೆಂಬುವನು (ಕ್ರಿ. ಶ. ೧೭೦೦) ಟೀಕೆಯನ್ನೂ ಬರೆದಿದ್ದಾನೆ. ಅವಶ್ಯವೆನಿಸಿದೆಡೆಯಲ್ಲಿ ತನ್ನ ವಿಚಾರವನ್ನೂ ವ್ಯಕ್ತಪಡಿಸಿರುವನೇ ಹೊರತು ಮೂಲ ಸೂತ್ರವನ್ನು ತಿದ್ದಹೋಗಿಲ್ಲ. ಆದ್ದರಿಂದ ನಂಜಯ್ಯನ ಟೀಕು, ವಿಚಾರಗಳಿಂದ ಕೂಡಿದ ಶಬ್ದಮಣಿದರ್ಪಣವನ್ನೇ ಡಿ. ಎಲ್. ನರಸಿಂಹಾಚಾರ್ಯರು ಸಮರ್ಪಕವಾಗಿ ಸಂಪಾದಿಸಿದ್ದಾರೆ. ಅದುವೆ ಜನಪ್ರಿಯ ಆವೃತ್ತಿಯಾಗಿದೆ.

### 3.1.7 ಶಬ್ದಾನುಶಾಸನ :

ಕೇಶಿರಾಜನ ಶಬ್ದಮಣಿದರ್ಪಣ ಬಂದ ಮೇಲೆ ಸುಮಾರು ಮೂರುನೂರು ವರ್ಷಗಳ ಕಾಲ ಯಾರೂ ಕನ್ನಡ ವ್ಯಾಕರಣ ಕ್ಷೇತ್ರಕ್ಕೆ ಕೈಹಾಕಲಿಲ್ಲ. ಭಟ್ಟಾಕಳಂಕನೂ (೧೬೦೪) ಸಹಿತ ಕನ್ನಡದಲ್ಲಿ ಸರ್ವಕಾಲಕ್ಕೆ ಶಬ್ದಮಣಿದರ್ಪಣವೊಂದೇ ಸಾಕು ಎನ್ನುವಂತೆ ಕನ್ನಡ ವ್ಯಾಕರಣವನ್ನು ಸಂಸ್ಕೃತದಲ್ಲಿ ಬರೆದನು. ಅದೇ ಅವನ ಶಬ್ದಾನುಶಾಸನ. ಒಂದು ಬಗೆಯಲ್ಲಿ ಇದು ಅನುಶಾಸನವೇ ಸರಿ.

ಭಟ್ಟಾಕಳಂಕ ಸಮಗ್ರ ಕನ್ನಡಭಾಷೆಯನ್ನು ತನಗಿಂತ ಹಿಂದಿನ ಯಾವ ವ್ಯಾಕರಣವೂ ವಿವರಿಸದ ರೀತಿಯಲ್ಲಿ ವಿಸ್ತೃತವಾಗಿ ವಿವರಿಸಿದ್ದಾನೆ. ೫೯೨ ಸೂತ್ರಗಳ ಈ ಬೃಹದ್ಗ್ರಂಥವನ್ನು ಕನ್ನಡದಲ್ಲಿ ಬರೆದಿದ್ದರೆ ಅತ್ಯಮೌಲ್ಯ ಕೊಡುಗೆಯೇ ಆಗುತ್ತಿತ್ತು. ನಾಗವರ್ಮನ ಕಾಲದಲ್ಲಿದ್ದಷ್ಟು ಸಂಸ್ಕೃತ ಪಂಡಿತರು ಭಟ್ಟಾಕಳಂಕನ ಕಾಲದಲ್ಲಿ (೧೭ನೆಯ ಶತಮಾನ) ಇರಲಿಲ್ಲವಷ್ಟೇ ಅಲ್ಲ. ಸಂಸ್ಕೃತದಲ್ಲಿದ್ದುದನ್ನು ಓದಿ ಅರಗಿಸಿಕೊಳ್ಳುವಂಥವರ ಸಂಖ್ಯೆಯೂ ದಿನೇ ದಿನೇ ಕಡಿಮೆಯಾಗುತ್ತಲಿತ್ತು. ಮುಡಿಪಾಗಿಟ್ಟ ಬೆಲೆಯುಳ್ಳ ದ್ರವ್ಯ ನೇರವಾಗಿ ದೇವರ ಸಾನಿಧ್ಯ ಸೇರುವಂತೆ ಸಂಸ್ಕೃತದಲ್ಲಿ ರಚಿಸಲ್ಪಟ್ಟ ಇವನ ಶಬ್ದಾನುಶಾಸನವು ನೇರ ವಾಗಿ ಪಂಡಿತ ಮಂಡಲಿಯ ಆಶ್ರಯ ಪಡೆದು ಸಾಮಾನ್ಯರ ಕೈಗೆಟುಕದೇ ಹೋಯಿತು. ಹೀಗಾಗಿ ಬೆಲೆಯುಳ್ಳ ರತ್ನ ದೇವರ ಮನೆಯ ಅಡಕಲಿನಲ್ಲಿದ್ದಂತೆ ಭಟ್ಟಾಕಳಂಕನ ಗ್ರಂಥದ ಮಹಿಮೆ ಎಷ್ಟೋ ಜನಕ್ಕೆ ಅರ್ಥವಾಗದೇ ಉಳಿದು ಬಿಟ್ಟಿತು. ಆದರೆ ಭಟ್ಟಾಕಳಂಕನ ಉದ್ದೇಶವೇ ಬೇರೆಯಾಗಿತ್ತು.

ಕನ್ನಡವು ಪಂಡಿತರ ದೃಷ್ಟಿಯಲ್ಲಿ ಮನ್ನಣೆ ಕಳೆದುಕೊಳ್ಳುತ್ತಿರುವುದರಿಂದ ಕನ್ನಡಕ್ಕೆ ಗೌರವ ತಂದುಕೊಡಬೇಕೆಂಬ ಹಂಬಲದಿಂದ ಬೇಕೆಂದೇ ಸಂಸ್ಕೃತದಲ್ಲಿ ಪ್ರೌಢ ವ್ಯಾಕರಣವನ್ನು ರಚಿಸಿದನು. ಕನ್ನಡಿಗರಿಗೆ ಮಾತ್ರ ಅದು ಕಾಡುಕುಸುಮ ವಾಯಿತು. ಆದರೆ ಭಟ್ಟಾಕಳಂಕ ಮಾತ್ರ ಅದನ್ನು 'ಸೋಪಜ್ಞ ಶಬ್ದಾನುಶಾಸನ' ವೆಂದೇ ಕರೆದಿರುವನು. ೫೯೨ ಸೂತ್ರಗಳಲ್ಲಿ (ನಾಲ್ಕು ಪಾದಗಳುಳ್ಳವು) ಸಾಕಷ್ಟು ಸುದೀರ್ಘವಾಗಿ, ವಿವೇಚನಾಪೂರ್ಣವಾಗಿ ಹಾಗೂ ಅಷ್ಟೇ ವ್ಯವಸ್ಥಿತವಾದ ಬಗೆಯಲ್ಲಿ ಕನ್ನಡ ವ್ಯಾಕರಣ ಅಂಶಗಳು ನಿರೂಪಿಸಲ್ಪಟ್ಟಿವೆ. ಬಿ. ಎಲ್. ರೈಸ್ ಅವರು ಈ ಬೃಹತ್ ವ್ಯಾಕರಣ ಗ್ರಂಥವನ್ನು ಪಾಣಿನಿಯ ಅಷ್ಟಾಧ್ಯಾಯಿಗೆ ಹೋಲಿಸಿದ್ದಾರೆ. ಪಾಣಿನಿಯ ಸೂತ್ರ ಪದ್ಧತಿಯನ್ನೇ ಹೆಚ್ಚು ಅನುಕರಿಸಿ ಸಂಸ್ಕೃತ ಮಾದರಿಯನ್ನು ಕಟ್ಟುನಿಟ್ಟಾಗಿ ಅನುಸರಿಸಿದ್ದರಿಂದ ಟೀಕೆಗೂ ಗುರಿ ಯಾಗಿದ್ದಾನೆ.

3.2 ಪರಂಪರಾಗತ ಪ್ರಾಚೀನ ಕನ್ನಡ ವ್ಯಾಕರಣಗಳೆಲ್ಲವೂ ಸಾಮಾನ್ಯವಾಗಿ ಹಳಗನ್ನಡ ಭಾಷೆಯನ್ನೇ ಲಕ್ಷಿಸಿದವು. ಕೇಶಿರಾಜನು ಕ್ವಚಿತ್ತಾಗಿ ಅಲ್ಲಲ್ಲಿ ತನ್ನ ಸಮಕಾಲೀನ ಕನ್ನಡದ ಜಾಡನ್ನು ಗಮನಿಸಿದರೂ ಅವನ ಪೂರ್ಣ ದೃಷ್ಟಿ ಹಳ

ಗನ್ನಡದೆಡೆಗೇ ಹರಿದಿರುವುದು ಸ್ಪಷ್ಟ. ಸಂಸ್ಕೃತದ ಪ್ರಭಾವ ಕನ್ನಡವನ್ನು ಕುರಿತ ಎಲ್ಲ ಪ್ರಾಚೀನ ವ್ಯಾಕರಣಗಳಲ್ಲೂ ಒಡೆದು ಕಾಣುವ ಅಂಶವಾಗಿದೆ. ಸಂಸ್ಕೃತದ ಮಾದರಿಯಲ್ಲೇ, ಸಂಸ್ಕೃತದ ಚೌಕಟ್ಟಿನಲ್ಲಿಯೇ ಕನ್ನಡವನ್ನು ವಿವರಿಸಹೊರಟುದೊಂದು ಅನಿವಾರ್ಯ ದೋಷವಾಗಿ ಪರಿಣಮಿಸಿತು. ನಿಜವಾದ ಪ್ರತಿಭೆ ಇದ್ದೂ ಅವರು ಕನ್ನಡದ ಭಾಷಾರಚನೆಯ ಒಳತಿರುಳನ್ನು ಎಷ್ಟೋ ಸಲ ಗುರುತಿಸಲು ಸಾಧ್ಯವಾಗದೇ ಹೋಯಿತು. ಕೇಶಿರಾಜನು ಕನ್ನಡ ವರ್ಣಮಾಲೆಯನ್ನು ವಿವರಿಸುವಾಗಲೂ ಕೂಡ ಸಂಸ್ಕೃತದ ವರ್ಣಗಳನ್ನು ಮೊದಲು ಹೇಳಿ ಅದರಲ್ಲಿ ಕನ್ನಡದಲ್ಲಿ ಇಲ್ಲದವನ್ನು ಕಳೆಯಲು ಹೇಳುತ್ತಾನೆ (ಸೂ. ೪೩). ಈ ರೀತಿ ತೀರ ಸಾಮಾನ್ಯ ವಿಷಯವನ್ನು ಸಂಸ್ಕೃತದ ಮೂಲಕವೇ ಹೇಳುವುದು ಈ ವ್ಯಾಕರಣಗಳ ಪರಂಪರೆಯಾಗಿದೆ. ಈ ಕೊಂಕಣ ಸುತ್ತಿ ಮೈಲಾರಕ್ಕೆ ಬರುವ ಪದ್ಧತಿಯಿಂದಾಗಿ ಕೇಶಿರಾಜನಂಥ ವೈಯಾಕರಣನೂ ಅನೇಕ ಕಡೆಗೆ ಎಡವಬೇಕಾಯಿತು, ಸಂಸ್ಕೃತಕ್ಕೆ ಸಲ್ಲುತ್ತಿದ್ದ ಮನ್ನಣೆ, ಪರಂಪರಾಗತ ವ್ಯಾಕರಕಾರರು ಕನ್ನಡ ಸಂಸ್ಕೃತಗಳೆರಡರಲ್ಲೂ ಪಂಡಿತರಾಗಿರುತ್ತಿದ್ದುದು, ಸಂಸ್ಕೃತದೇವಭಾಷೆ, ಅದರಿಂದಲೇ ಎಲ್ಲ ಭಾಷೆಗಳೂ ಹುಟ್ಟಿದವು ಎಂಬ ತಪ್ಪು ಕಲ್ಪನೆ ಇತ್ಯಾದಿ ಅಂಶಗಳು ಹೀಗೆ ಬರೆಯಲು ಅವರನ್ನು ಪ್ರೇರೇಪಿಸಿರಬಹುದು.

ಪರಂಪರಾಗತ ಪ್ರಾಚೀನ ವ್ಯಾಕರಣಗಳು ಹೆಚ್ಚಾಗಿ ಶಬ್ದಶಾಸ್ತ್ರವನ್ನು ಮಾತ್ರ ವಿವರವಾಗಿ ವಿಶ್ಲೇಷಿಸುವ ಕಾರ್ಯ ಮಾಡಿವೆ. ಧ್ವನಿಶಾಸ್ತ್ರಕ್ಕಾಗಲಿ, ವಾಕ್ಯಶಾಸ್ತ್ರಕ್ಕಾಗಲಿ, ಅರ್ಥ ವ್ಯವಸ್ಥೆಗಾಗಲಿ ಗಮನವನ್ನು ಅಷ್ಟಾಗಿ ನೀಡಿಲ್ಲ. ಅವರ ಪ್ರಕರಣ ವಿಭಜನೆಯಲ್ಲೂ ಸ್ವಂತಿಕೆಯನ್ನು ವಿಶೇಷವಾಗಿ ಕಾಣಲಾರೆವು. ಪಾರಿಭಾಷಿಕ ಪದಗಳೆಲ್ಲವೂ ಸಂಸ್ಕೃತದವೇ ಆಗಿವೆ, ಸಂಸ್ಕೃತದಲ್ಲಿದ್ದುದೆಲ್ಲ ಕನ್ನಡದಲ್ಲಿದೆಯೆಂಬ ಭ್ರಮೆ ಈ ವ್ಯಾಕರಣಕಾರರಿಗಿದೆ. ಉದಾಹರಣೆಗೆ: ಕೇಶಿರಾಜನು ವಚನವನ್ನು ಪ್ರಸ್ತಾಪಿಸುವಾಗ "ದ್ವಿವಚನಮುಚಿತದೆ ಬರ್ಕುಂ" (ಸೂ. ೧೦೪) ದ್ವಿವಚನ ಕನ್ನಡದಲ್ಲಿ ಉಚಿತವಾಗಿ ಬರುತ್ತದೆ ಎನ್ನುತ್ತಾನೆ.

### 3.3 ಆಧುನಿಕ ವ್ಯಾಕರಣಗಳು :

3.3.0 ಪರಂಪರಾಗತ ದೃಷ್ಟಿಯ ಪ್ರಾಚೀನ ಕನ್ನಡ ವ್ಯಾಕರಣಗಳು ಸಂಖ್ಯೆಯಲ್ಲಿ ವಿರಳವಾದರೂ ಸತ್ವದಲ್ಲಿ ಗಟ್ಟಿಯಾಗಿವೆ, ಹಳಗನ್ನಡದ ಅವಸ್ಥೆಯನ್ನು

ಸಂಸ್ಕೃತದ ಪಡಿಯಚ್ಚಿನಲ್ಲಿ ಅವು ಪ್ರತಿಬಿಂಬಿಸಿದವು. ಭಟ್ಟಾಕಳಂಕನ ಅನಂತರ ಕನ್ನಡ ವ್ಯಾಕರಣ ಪರಂಪರೆ ಹೊಸ ತಿರುವನ್ನು ಪಡೆಯಿತು. ಪಂಡಿತರಿಗೆ, ವಿಶೇಷ ಅಭ್ಯಾಸಿಗಳಿಗೆ ಮಾತ್ರ ಪ್ರಾಚೀನ ವ್ಯಾಕರಣಗಳು ಅರ್ಥವಾಗುವಂತಿದ್ದವು. ಸೂತ್ರರೂಪದಲ್ಲಿದ್ದ ಅವು ಜನಸಾಮಾನ್ಯರನ್ನು ತಲುಪಲಿಲ್ಲ, ೧೮ನೆಯ ಶತಮಾನದ ವೇಳೆಗೆ ಕನ್ನಡ ಭಾಷೆ ನಡುಗನ್ನಡದ ಗಡುವನ್ನು ದಾಟಿ ಹೊಸಗನ್ನಡದ ಹೊಸ್ತಿಲಲ್ಲಿ ಕಾಲಿಟ್ಟಿತ್ತು. ಹಳಗನ್ನಡದ ವ್ಯಾಕರಣಗಳು ಹೊಸ ಪೀಳಿಗೆಯವರಿಗೆ ಪ್ರಯೋಜನವಾಗುವಂತಿರಲಿಲ್ಲ. ಅರ್ಥವೂ ಆಗುತ್ತಿರಲಿಲ್ಲ, ಆಂಗ್ಲರು ಭಾರತದಲ್ಲೆಲ್ಲ ಪಸರಿಸುತ್ತಿದ್ದಂತೆಯೆ ಅವರು ಇಲ್ಲಿನ ಸ್ಥಳೀಯ ಭಾಷೆಯನ್ನು ಕಲಿಯಬೇಕಾಯಿತು. ಈ ಪರಿಸರದಲ್ಲಿ ಹೊಸ ಬಗೆಯ ಸರಳ ವ್ಯಾಕರಣಗಳು ಕನ್ನಡ ವಿದ್ಯಾರ್ಥಿಗಳಿಗೆ ಹಾಗೂ ಅನ್ಯಭಾಷೀಯರಿಗೆ ಬೇಕಾಗಿದ್ದವು. ಈ ಆವಶ್ಯಕತೆಯನ್ನು ಪೂರೈಸುವುದಕ್ಕಾಗಿ ವಿದೇಶಿ ಹಾಗೂ ದೇಶಿ ಪಂಡಿತರಿಂದ ಸುಲಭ ವ್ಯಾಕರಣಗಳು ರಚಿತವಾಗತೊಡಗಿದವು. ೧೯ನೆಯ ಶತಮಾನದ ಆರಂಭದ ವೇಳೆಗಾಗಲೆ ಇಂತಹ ಆಧುನಿಕ ವ್ಯಾಕರಣಗಳು ಕ್ರೈಸ್ತ ಪಂಡಿತರಿಂದ ಪ್ರಕಟಗೊಳ್ಳತೊಡಗಿದವು, ಕ್ರಿ. ಶ. ೧೮೦೦ ರಿಂದ ಇತ್ತೀಚಿನ ವರೆಗಿನ ಸುಮಾರು ೧೭೫ ವರ್ಷಗಳ ಅವಧಿಯಲ್ಲಿ ಬೆಳೆದು ಬಂದ ಕನ್ನಡ ವ್ಯಾಕರಣದ ಇತಿಹಾಸವನ್ನು ಮುಖ್ಯವಾಗಿ ಮೂರು ಹಂತಗಳಲ್ಲಿ ಗುರುತಿಸಬಹುದಾಗಿದೆ. ೧೯೫೦ರ ವರೆಗಿನ ಹಂತ ಒಂದು ಬಗೆಯದು. ೧೯೫೦ ರಿಂದ ೧೯೭೫ರ ವರೆಗೆ ಇನ್ನೊಂದು ಅಲ್ಲಿಂದ ಇತ್ತೀಚಿನವರೆಗೆ ಮತ್ತೊಂದು.

### 3.3.1 ಪ್ರಥಮ ಹಂತ :

೧, ಸುಲಭ ವ್ಯಾಕರಣಗಳು ೨. ಪ್ರೌಢವ್ಯಾಕರಣಗಳು ಎಂದು ಎರಡು ವರ್ಗಗಳಲ್ಲಿ ಈ ಅವಧಿಯ (೧೮೦೦ ರಿಂದ ೧೯೫೦) ವ್ಯಾಕರಣಗಳನ್ನು ವಿಂಗಡಿಸುವುದು ಉಚಿತವೆನಿಸುತ್ತದೆ.

ಕನ್ನಡ ಬಾರದವರು ಸುಲಭವಾಗಿ ಕನ್ನಡವನ್ನು ಕಲಿಯುವುದಕ್ಕೆ ಅನುಕೂಲವಾಗುವಂತೆ ಕೆಲವು ಆಂಗ್ಲ ಭಾಷಾವಿದ್ವಾಂಸರು ಇಂಗ್ಲೀಷಿನಲ್ಲಿ ಕನ್ನಡ ವ್ಯಾಕರಣಗಳನ್ನು ರಚಿಸಿದರು. ಆಂಗ್ಲರು ಭಾರತದಲ್ಲಿ ತಮ್ಮ ನೆಲೆಯನ್ನು ಭದ್ರಪಡಿಸಿಕೊಳ್ಳುತ್ತಿರುವಾಗ ಇಂಗ್ಲಂಡಿನಿಂದ ಬಂದ ಅಧಿಕಾರಿಗಳು ಇಲ್ಲಿನ

ಜನಸಾಮಾನ್ಯರೊಂದಿಗೆ ವ್ಯವಹರಿಸಬೇಕಾಗಿ ಬಂದಾಗ ಅವರಿಗೆ ಸ್ಥಳೀಯ ಭಾಷೆಯನ್ನು ಕಲಿಯಲೇಬೇಕಾಯಿತು. ಕೆಲವರು ಇಲ್ಲಿಯ ಭಾಷೆಯ ಬಗೆಗೆ ಕುತೂಹಲದಿಂದ ಆಳವಾದ ಅಧ್ಯಯನವನ್ನು ಕೈಕೊಂಡರು. ಅಂಥವರಲ್ಲಿ ಕಾಲ್ಡವೆಲ್, ಗುಂಡರ್ಟ್, ಕಿಟೆಲ್ ಮುಂತಾದ ಹಲವರನ್ನು ಇಲ್ಲಿ ಸ್ಮರಿಸಬಹುದು. ಆಂಗ್ಲರು ಅನಿವಾರ್ಯವಾಗಿ ಬಂದ ಈ ಅವಕಾಶವನ್ನು ಸದುಪಯೋಗಪಡಿಸಿಕೊಂಡರು. ಅವರ ತೀಕ್ಷ್ಣಬುದ್ಧಿ, ವೈಜ್ಞಾನಿಕ ವಿಚಾರವೈಖರಿ ಪರಿಶ್ರಮಶೀಲತೆ, ಉತ್ಸಾಹ ಅಧ್ಯಯನಾಕಾಂಕ್ಷೆ ಮುಂತಾದವುಗಳಿಂದಾಗಿ ಭಾರತೀಯ ವಿದ್ವಾಂಸರೇ ನಾಚುವಂತೆ ಭಾಷಾಧ್ಯಯನ ಕ್ಷೇತ್ರದಲ್ಲಿ ಕೆಲಸ ಮಾಡಿತೋರಿಸಿ ಹೊಸ ದಿಗಂತಕ್ಕೆ ಮಾರ್ಗಮಾಡಿಕೊಟ್ಟರು. ಕ್ರೈಸ್ತ ಪಂಡಿತರು ಒಂದೆಡೆ ಸಂಸ್ಕೃತವನ್ನೂ ಇನ್ನೊಂದೆಡೆ ಪ್ರಾದೇಶಿಕ ಭಾಷೆಗಳನ್ನೂ ಅಭ್ಯಸಿಸಿದರು. ಗ್ರಂಥ ರಚಿಸಿದರು. ಪ್ರಚಾರ ಮಾಡಿದರು. ಅವರು ಭಾಷೆಗಳನ್ನು ಕಲಿಯುವದರಲ್ಲಿಯ ಇನ್ನೊಂದು ಮಹತ್ತರವಾದ ಉದ್ದೇಶವೆಂದರೆ ತಮ್ಮ ಧರ್ಮ ಪ್ರಚಾರ. ಹೀಗೆ ಭಾಷಾಧ್ಯಯನದಿಂದಾಗಿ ಅವರಿಗೆ ವ್ಯಾಪಾರ, ಆಡಳಿತ, ಧರ್ಮಪ್ರಚಾರ, ಆತ್ಮತೃಪ್ತಿ ಸುಲಭವಾದವು.

ಸುಲಭ ವ್ಯಾಕರಣಗಳೆಂದು ಕರೆಯುವ ಕಾರಣವೆಂದರೆ ಈ ವ್ಯಾಕರಣಗಳ ಉದ್ದೇಶವೇ ಕನ್ನಡ ಭಾಷೆಯ ರಚನೆಯ ಅಂಶಗಳನ್ನು ಸುಲಭವಾಗಿ ತಿಳಿಸಿಕೊಡಬೇಕೆಂಬುದು ಹಾಗೂ ಶಾಲಾ ಬಾಲಕರು ಸಹ ಸರಳ ವ್ಯಾಕರಣಗಳ ನಿಯಮಗಳನ್ನು ಅರ್ಥಮಾಡಿಕೊಳ್ಳಬೇಕೆಂಬುದಾಗಿತ್ತು. ಸರಳವಾದ ಗದ್ಯದಲ್ಲಿ ವ್ಯಾಕರಣ ನಿಯಮಗಳನ್ನು ನೀಡಿ ನಿತ್ಯ ಜೀವನದಲ್ಲಿ ಬಳಕೆಯಲ್ಲಿ ಇರುವ ಉದಾಹರಣೆಗಳನ್ನೇ ಅವುಗಳ ಸಮರ್ಥನೆಗೆ ಆಯ್ದುಕೊಂಡು ವಿವರಿಸಿರುವುದು ಇಲ್ಲಿ ಎದ್ದು ಕಾಣುವ ಅಂಶವಾಗಿದೆ. ಎಲ್ಲ ವ್ಯಾಕರಣಗಳಲ್ಲೂ ಸಾಮಾನ್ಯವಾಗಿ ಈ ಅಂಶಗಳನ್ನು ಕಾಣಬಹುದು. ಅಂತಹ ವ್ಯಾಕರಣಗಳಲ್ಲಿಯ ಕೆಲವು ಮಹತ್ವದವುಗಳನ್ನಿಲ್ಲಿ ಸೂಚಿಸಲಾಗಿದೆ.

3.3.1.1 ಕ್ರಿ. ಶ. ೧೮೧೭ ರಲ್ಲಿ ರೆವ್ಹರೆಂಡ ವಿಲ್ಯಂ ಕ್ಯಾರಿ ಅವರು *The Grammar of Karnataka Language*, ಜಾನ ಮೆಕೆರೆಲ್ ಅವರ *Karnataka Vyakarana* (೧೮೨೦), ಥಾಮಸ್ ಹಡಸನ್

ಅವರ *An Elementary Grammar of the Karnataka* (೧೮೫೯), ರೆವ್ಹರೆಂಡ್ ಝಿಗ್ಲರ್ ಅವರ *A Practical key to the Canarese Language* (೧೮೭೦), ಆರಂಭದಲ್ಲಿ ಮೂಡಿ ಬಂದ ವ್ಯಾಕರಣಗಳು. ಆನಂತರ ಕಿಟೆಲ್ ಅವರು ಎರಡು ವ್ಯಾಕರಣಗಳನ್ನು ಕನ್ನಡದಲ್ಲೂ ಒಂದನ್ನು ಇಂಗ್ಲೀಷನಲ್ಲಿಯೂ ಬರೆದು ಪ್ರಕಟಿಸಿದರು. : ೧. ಕನ್ನಡ ವ್ಯಾಕರಣ ಸೂತ್ರಗಳು, ೨. ಸಂಕ್ಷೇಪ ವ್ಯಾಕರಣ ಸೂತ್ರಗಳು, ೩. *A Grammar of Kannada Language*. ಮೊದಲಿನವು ೧೮೮೯ ರಲ್ಲಿಯೂ, ಕೊನೆಯದು ೧೯೦೩ ರಲ್ಲೂ ಬೆಳಕು ಕಂಡವು. ಕಿಟೆಲ್‌ರ ಕೊಡುಗೆ ಗಮನಾರ್ಹವಾಗಿದೆ. ಬಿ. ಗ್ರೇಟರ್ ಅವರ *Tables of Canarese Language* ೧೮೮೪ ರಲ್ಲಿ, ಹೆರಾಲ್ಡ ಸ್ಪೆನ್ಸರ್ ಅವರ *A Canarese Grammar* ೧೯೧೪ ರಲ್ಲಿ ಪ್ರಕಟಗೊಂಡವು. ಇದುವೆ ೧೯೫೦ ರಲ್ಲಿ ಡಬ್ಲು ಪರ್ಸಟನ್‌ರಿಂದ ಪರಿಷ್ಕೃತಗೊಂಡು ಮರುಮುದ್ರಣವಾಯಿತು. ಇವು ಮಹತ್ವದ ಕೆಲ ವ್ಯಾಕರಣಗಳಾದರೆ ಇನ್ನು ಕೆಲವು ಕೇವಲ ಶಾಲಾ ಮಕ್ಕಳಿಗಾಗಿಯೇ ರಚಿತವಾದವುಗಳಾಗಿವೆ. ಕನ್ನಡ ವ್ಯಾಕರಣಸಾರಂ (೧೮೪೯)– ಸಿ. ಕ್ಯಾಂಪ್‌ಬೆಲ್, ಕನ್ನಡ ವ್ಯಾಕರಣ (೧೮೫೫)– ಥಾಮಸ್ ಹಡ್‌ಸನ್, ಕನ್ನಡ ಶಾಲಾ ವ್ಯಾಕರಣ (೧೮೬೬)– ರೆ. ಝಿಗ್ಲರ್, ಕನ್ನಡ ಬಾಲ ವ್ಯಾಕರಣ (೧೮೦೮)– ಜಿ. ಕೊಯಿಜ್ಜ, ಶಾಲಾ ವ್ಯಾಕರಣ (೧೮೬೫)– ಜೆ. ಗ್ಯಾರೆಟ್, *Elements of Canarese Grammar for natives* (೧೮೭೦)– ರೆ. ಕ್ಯಾಂಪಬೆಲ್, *A Kannada Grammar* (೧೮೫೪)– ಜಾನ್ ಶಾಮರಾವ್. ಇವುಗಳಲ್ಲದೆ ಇನ್ನೂ ಹಲವಾರು ಇಂತಹ ವ್ಯಾಕರಣಗಳು ಈ ಕಾಲದಲ್ಲಿ ರಚಿತವಾಗಿವೆ. ಈ ಎಲ್ಲ ವ್ಯಾಕರಣಗಳ ಉದ್ದೇಶವೇ ಸೀಮಿತವಾಗಿದ್ದರಿಂದ ವಿಶೇಷವೇನನ್ನೂ ನಾವು ಇವುಗಳಲ್ಲಿ ಕಾಣುವಂತಿಲ್ಲ. ಝಿಗ್ಲರ್ ಅವರ *A Practical key to the Canarese* ಹಾಗೂ ಕಿಟೆಲ್‌ರ *A Grammar of Kannada Language* ಎರಡನ್ನು ಬಿಟ್ಟು ಉಳಿದೆಲ್ಲವೂ ಶಾಲಾ ಪಠ್ಯಕ್ರಮಕ್ಕನುಗುಣವಾಗಿ ಬರೆದವುಗಳು. ಅವುಗಳಲ್ಲಿ ಇಂಗ್ಲೀಷ್ ಪದ್ಧತಿ ಒಡೆದು ಕಾಣುತ್ತದೆ.

ಇದೇ ವೇಳೆಗೆ ಸ್ಥಳೀಯ ಪಂಡಿತರೂ ಕನ್ನಡದಲ್ಲಿ ವ್ಯಾಕರಣಗಳನ್ನು ರಚಿಸತೊಡಗಿದ್ದರು. ಒಂದೆರಡು ಒಳ್ಳೆಯ ವ್ಯಾಕರಣಗಳನ್ನು ಬಿಟ್ಟರೆ ಸುಮಾರು ೬೦ ಕ್ಕೂ ಹೆಚ್ಚು ಸಂಖ್ಯೆಯ ವ್ಯಾಕರಣಗಳು ಸಾಮಾನ್ಯಮಟ್ಟದವೇ ಆಗಿದ್ದವು. ಕೆ. ಕೃಷ್ಣಮಾಚಾರ್ಯರು ೧೮೩೮ ರಲ್ಲಿ 'ಹೊಸಗನ್ನಡ ನುಡಿಗನ್ನಡಿ ಎಂಬ ಹೊಸಗನ್ನಡ ವ್ಯಾಕರಣವು' ಎಂಬ ವ್ಯಾಕರಣವನ್ನು ಬೆಳಕಿಗೆ ತಂದರು. ಅನಂತರ ಘೋಂಡೊ ನರಸಿಂಹ ಮುಳಬಾಗಲ ಅವರ 'ನುಡಿಗಟ್ಟು' ೧೮೯೨ ರಲ್ಲಿ ಬಂದಿತು. ಇದಾದ ಮೇಲೆ ಅತ್ಯಂತ ಗಮನಾರ್ಹವಾದ ಕೃತಿಯೆಂದರೆ ಮೈಸೂರು ವಿಶ್ವವಿದ್ಯಾಲಯದಿಂದ ೧೯೨೭ ರಲ್ಲಿ ಪ್ರಕಟಿಸಲ್ಪಟ್ಟ ಕನ್ನಡ ಕೈಪಿಡಿ. ೧೯೩೯ ರಲ್ಲಿ ತೀ. ನಂ, ಶ್ರೀಕಂಠಯ್ಯನವರು ಕನ್ನಡ ಮಧ್ಯಮ ವ್ಯಾಕರಣವನ್ನು ಬರೆದು ಪ್ರಕಟಿಸಿದರು. ಇದೂ ಕೂಡ ಪ್ರೌಢ ಶಾಲೆಯ ವಿದ್ಯಾರ್ಥಿಗಳಿಗಾಗಿ ಬರೆಯಲ್ಪಟ್ಟಿದ್ದರೂ ವಿಷಯ ವಿವೇಚನೆ ಅತ್ಯುತ್ತಮ ರೀತಿಯಲ್ಲಿರುವುದರಿಂದ ಒಳ್ಳೆಯ ಉತ್ತಮ ದರ್ಜೆಯ ( *Standard* ) ವ್ಯಾಕರಣವೆನ್ನಿಸಿತು.

ಇನ್ನಿತರ ಕೆಲವು ಮಹತ್ವದ ವ್ಯಾಕರಣ ಗ್ರಂಥಗಳನ್ನು ಹೆಸರಿಸಬೇಕೆಂದರೆ- ಕರ್ನಾಟಕ ವಾಗ್ವಿಧಾಯಿನಿ (೧೮೯೦)- ಎಂ. ರಾಮಸ್ವಾಮಿ ಶಾಸ್ತ್ರಿಯವರದು. ಏಳು ಆವೃತ್ತಿಗಳನ್ನು ಕಂಡಿದೆ. ಬಿ. ಮಲ್ಲಪ್ಪನವರ ಶಬ್ದಸಾರ (೧೯೩೩), ಮು. ಪ್ರ. ಪೂಜಾರ ಅವರ ಕನ್ನಡ ನುಡಿಗನ್ನಡಿ ಮತ್ತು ಛಂದೋಮಂಜರಿ (೧೯೨೮) ಬಹಳ ಜನಪ್ರಿಯವಾದುದಲ್ಲದೆ ೧೯೩೬ ರಷ್ಟೊತ್ತಿಗೆ ನಾಲ್ಕು ಮುದ್ರಣಗಳನ್ನು ಕಂಡಿತು. ಅವರೇ ಬರೆದ ನುಡಿಗನ್ನಡಿ ೪ ಭಾಗಗಳಲ್ಲಿ ವಿಸ್ತೃತವಾಗಿ ೧೯೩೧ ರಲ್ಲಿ ಬಂದಿತು. ಪಂಜೆ ಮಂಗೇಶರಾಯರ ಕನ್ನಡ ಮೂಲವ್ಯಾಕರಣ (೧೯೩೬) ೬ ಆವೃತ್ತಿಗಳನ್ನು ಕಂಡಿತು. ಎಸ್. ಎಸ್. ಬಸವನಾಳ ಹಾಗೂ ಪಂಡಿತ ಜೆ. ಎ. ಕವಲಿ ಅವರು ಜೊತೆಯಾಗಿ ಬರೆದು ಪ್ರಕಟಿಸಿದ ಕನ್ನಡ ಚೆನ್ನುಡಿ (೧೯೫೦) ಬಹು ಜನಪ್ರಿಯವಾಯಿತು. ಇದು ೪ ಭಾಗಗಳಲ್ಲಿ ಬಂದಿದೆ. ಒಟ್ಟಿನಲ್ಲಿ ಶಾಲಾ ವ್ಯಾಕರಣಗಳ ಹಾಗೂ ಜನಪ್ರಿಯ ವ್ಯಾಕರಣಗಳ ಸಂಖ್ಯೆ ಕ್ರಿ. ಶ. ೧೯೫೦ ರ ವರೆಗಿನ ಅವಧಿಯಲ್ಲಿ ೬೦ ಕ್ಕೂ ಮೀರುತ್ತದೆ.

ಸರಳ ವ್ಯಾಕರಣಗಳ ಪ್ರವಾಹ ಹರಿಯುತ್ತಿದ್ದಂತೆಯೇ ಇನ್ನೊಂದೆಡೆ ಪಂಡಿತಮಾನ್ಯ ಪ್ರೌಢ ವ್ಯಾಕರಣಗಳೂ ಆಗಾಗ ರಚಿತವಾಗುತ್ತಲೇ ಇದ್ದವು. ೧೯೩೪ ರಲ್ಲಿ ಬಂದ ಆರ್. ನರಸಿಂಹಾಚಾರ್ಯರ *(The History of Kannada Language)* ಕೂಡ ಈ ನಿಟ್ಟಿನಲ್ಲಿ ಬಹಳ ಉಪಯುಕ್ತವಾದ ಗ್ರಂಥವಾಗಿದೆ,

## 3.3.2 ದ್ವಿತೀಯ ಹಂತ:

೧೯೫೦ ರಿಂದ ೧೯೬೫ರ ವರೆಗಿನ ಒಂದೂವರೆ ದಶಕದಲ್ಲಿ ಕನ್ನಡ ವ್ಯಾಕರಣ ಅಧ್ಯಯನ ಕ್ಷೇತ್ರ ಇನ್ನೂ ವ್ಯಾಪಕವಾಯಿತು. ಸರಳ ಕನ್ನಡ ವ್ಯಾಕರಣಗಳ ಕಾಲ ಗತಿಸಿಹೋಗಿ ಆಧುನಿಕ ಭಾಷಾಶಾಸ್ತ್ರ ವಿದ್ವಾಂಸರನ್ನು ಆಕರ್ಷಿಸಿತು. ಕನ್ನಡ ಭಾಷೆಯನ್ನು ತೌಲನಿಕ, ಐತಿಹಾಸಿಕ ಮತ್ತು ವರ್ಣನಾತ್ಮಕ ದೃಷ್ಟಿಕೋನಗಳಿಂದ ಅಲ್ಲದೆ ಶಾಸನಗಳ, ಕಾವ್ಯಗಳ ಕನ್ನಡ ನುಡಿಯನ್ನು ವಿಶ್ಲೇಷಿಸುವ ಪ್ರಯತ್ನ ಆರಂಭವಾಯಿತು. ಆರ್. ವಾಯ್. ಧಾರವಾಡಕರ ಅವರ ಕನ್ನಡ ಭಾಷಾಶಾಸ್ತ್ರ ೧೯೫೧ರಲ್ಲಿ ಒಂದು ಒಳ್ಳೆಯ ಹೆಸರು ಪಡೆಯಿತು. ೧೯೬೧ ರಲ್ಲಿ ಆರ್. ಸಿ. ಹಿರೇಮಠ ಅವರ *The Structure of Kannada* ಪ್ರಕಟವಾಯಿತು.

ದ್ವಿತೀಯ ಹಂತದ ಕೊನೆಯ ದಶಕದಲ್ಲಿ ಪರಂಪರಾಗತ ವ್ಯಾಕರಣಗಳಿಂದ ಭಿನ್ನವಾದ ಆಧುನಿಕ ರೀತಿಯಲ್ಲಿ ಕನ್ನಡ ಭಾಷೆಯನ್ನು ವರ್ಣಿಸಬೇಕೆಂಬ ಒಲವು ಪ್ರಾರಂಭವಾಯಿತು. ೧೯೫೦ರ ದಶಕ ಹಾಗೂ ಅನಂತರವಂತೂ ಆಧುನಿಕ ಭಾಷಾ ವಿಜ್ಞಾನದೆಡೆಗೆ ಸಾಗಿದ್ದನ್ನು ಸ್ಪಷ್ಟವಾಗಿ ಗುರುತಿಸಬಹುದು.ತೀ. ನಂ. ಶ್ರೀ ನರಸಿಂಹಾಚಾರ್ಯ, ಗಾಯಿ. ಧಾರವಾಡಕರ. ಅವರು ಒಂದು ಹಂತದಲ್ಲಿ ನಿಂತರೆ ಆರ್. ಸಿ. ಹಿರೇಮಠ, ಹಾ. ಮಾ. ನಾಯಕ, ವಿಲ್ಯಂಬ್ರೈಟ, ಬಿಳಿಗಿರಿ ಮುಂತಾದವರು ತತ್ಕಾಲೀನ ಭಾಷಾವಿಜ್ಞಾನದ ತತ್ತ್ವಗಳ ಆಧಾರದ ಮೇಲೆ ಕನ್ನಡ ಭಾಷೆಯನ್ನು ವಿವರಿಸುವುದರ ಮೂಲಕ ಇನ್ನೊಂದು ಮುಂದುವರಿದ ಹಂತದಲ್ಲಿ ನಿಲ್ಲುತ್ತಾರೆ. ಇಲ್ಲಿಂದ ಕನ್ನಡ ಭಾಷಾ ವ್ಯಾಸಂಗದ ನವೀನಮಾರ್ಗ ಮುನ್ನಡೆಯುತ್ತದೆ.

### 3.3.3 ತೃತೀಯ ಹಂತ :

೧೯೬೫ ರಿಂದ ಇತ್ತೀಚೆಗೆ ಕೆ. ಎಂ. ಕೃಷ್ಣರಾವ ಅವರ ಕನ್ನಡ ಭಾಷೆಯ ಸ್ವರೂಪ, ವಿಲ್ಯಂ ಮಾಡ್ತ ಅವರ ಕನ್ನಡ ಭಾಷೆಯ ರೂಪರೇಷೆಗಳು ಡಿ. ಎನ್. ಶಂಕರಭಟ್ಟ ಅವರ ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ ಪ್ರ. ಗೋ. ಕುಲಕರ್ಣಿಯವರ ಕನ್ನಡ ಭಾಷೆಯ ಚರಿತ್ರೆ, ಬಿ. ಬಿ. ಪಾಟೀಲರ ವ್ಯಾಕರಣ ಲೋಕ, ಡಿ. ಎನ್. ಶಂಕರಭಟ್ಟರ ಕನ್ನಡ ವಾಕ್ಯಗಳು, ಹೆರಾಲ್ಡ ಶಿಫ್‌ಮನ್ ಅವರ ***A Reference Grammar of Spoken Kannada***, ಆಂಡ್ರೊನೋವ್ ಅವರ ರಶಿಯನ್ ಭಾಷೆಯಲ್ಲಿ ಇರುವ ಜಾರ್ಝಿಕ್ ಕನ್ನಡ (ಕನ್ನಡ ಅನುವಾದ–ವಿಲ್ಯಂ ಮಾಡ್ತ) ಮ್ಯಾಕೊರ್‌ಮ್ಯಾಕ್ ಅವರ ***Kannada*** ಕುಶಾಲಪ್ಪ ಗೌಡರ ಕನ್ನಡಭಾಷೆ ಮತ್ತು ವ್ಯಾಕರಣಗಳ ಒಂದು ಅಧ್ಯಯನ ಟಿ. ವಿ. ವೆಂಕಟಾಚಲ ಶಾಸ್ತ್ರೀ ಅವರ ಹೊಸಗನ್ನಡದ ವ್ಯಾಕರಣ ಮುಂತಾದ ಕೆಲವನ್ನು ಇಲ್ಲಿ ಸ್ಮರಿಸಬಹುದು. ಇದೇ ಕಾಲದಲ್ಲಿ ಶಬ್ದಮಣಿದರ್ಪಣದ ಮೇಲೆ ಹಲವಾರು ವಿವೇಚನಾತ್ಮಕ ಗ್ರಂಥಗಳೂ ಬಂದಿವೆ. ಎಚ್. ಎಸ್. ಬಿಳಿಗಿರಿ ಅವರ ಆಲೋಕ (ಭಾಗ ೧) ಅತ್ಯಂತ ಉತ್ತಮ ದರ್ಜೆಯ ವ್ಯಾಖ್ಯಾನಗ್ರಂಥ, ಡಿ. ಪದ್ಮನಾಭಶರ್ಮ ಭುವನಹಳ್ಳಿ ಅವರು ಸುದೀರ್ಘವಾಗಿ ವಾಖ್ಯಾನಿಸಿದ ಕೇಶಿರಾಜ ಕೃತ ಶಬ್ದಮಣಿದರ್ಪಣ (ನಲ್ನುಡಿಗನ್ನಡಿ), ದೊಡ್ಡಸ್ವಾಮಿಯವರ ಶಬ್ದಮಣಿದರ್ಪಣ ದಿಗ್ದರ್ಶನ, ತ. ಸು. ಶಾಮರಾಯ ಹಾಗೂ ಎಚ್. ನಂಜೇಗೌಡರ ಶಬ್ದಮಣಿದರ್ಪಣ ಸೂತ್ರಸಾರ, ವಿ. ಶಿವಾನಂದರ ಶಬ್ದಮಣಿದರ್ಪಣ ವಿಳಾಸ, ಎಂ. ಎಂ. ಕಲಬುರ್ಗಿ ಹಾಗೂ ಬಿ. ಟಿ. ಸಾಸನೂರ ಅವರ ಶಬ್ದಮಣಿದರ್ಪಣ ಸಂಗ್ರಹ, ಮುಂತಾದ ಗ್ರಂಥಗಳು ಈ ನಿಟ್ಟಿನಲ್ಲಿ ಮಹತ್ವದ್ದಾಗಿವೆ.

ಕನ್ನಡ ಭಾಷೆಯೊಡನೆ ಸೋದರ ದ್ರಾವಿಡಭಾಷೆಗಳ ತೌಲನಿಕ ಅಧ್ಯಯನ ಕನ್ನಡದಲ್ಲಿ ಅಷ್ಟಾಗಿ ನಡೆದಿಲ್ಲ. ಹಂಪನಾ ಅವರ ದ್ರಾವಿಡ ಭಾಷಾ ವಿಜ್ಞಾನ, ಸಂಗಮೇಶ ಸವದತ್ತಿಮಠ ಅವರ ದ್ರಾವಿಡಭಾಷಾವ್ಯಾಸಂಗ, ಕೆ. ಕೆಂಪೇಗೌಡ ಅವರ ತೌಲನಿಕ ದ್ರಾವಿಡ ಭಾಷಾವಿಜ್ಞಾನ ಈ ಕ್ಷೇತ್ರದಲ್ಲಿ

ಬಂದ ಮಹತ್ವದ ಗ್ರಂಥಗಳು. ದ್ರಾವಿಡ ಸಂಖ್ಯಾವಾಚಿಗಳು (ಹಂಪನಾ), ದ್ರಾವಿಡ ಭಾಷೆಗಳು, ದ್ರಾವಿಡ ಜನಾಂಗ ದ್ರಾವಿಡ ಭಾಷಾವಿಜ್ಞಾನ ಪರಿಚಯ (ಸವದತ್ತಿಮಠ), ಕನ್ನಡ–ತೆಲುಗು ಸಂಬಂಧ ಸಾಮ್ಯ (ಕೆ. ಎಂ. ಕೃಷ್ಣರಾವ್) ಈ ನಿಟ್ಟಿನಲ್ಲಿ ಮೂಡಿಬಂದ ಕಿರು ಹೊತ್ತಿಗೆಗಳು.

೪

# ಕನ್ನಡ ವರ್ಣಗಳು

## 4.1.1 ವರ್ಣಮಾಲೆ :

ಭಾಷೆಯ ಮೂಲ ಸಾಮಗ್ರಿ ಧ್ವನಿಗಳು. ಅವುಗಳ ಅಧ್ಯಯನವನ್ನು ಧ್ವನಿಶಾಸ್ತ್ರ ಒಳಗೊಂಡಿರುತ್ತದೆ. ಆದರೆ ಭಾಷೆಯಲ್ಲಿ ಬಳಕೆಯಲ್ಲಿರುವ ಪ್ರತಿಯೊಂದು ಧ್ವನಿಯನ್ನು ಸೂಕ್ಷ್ಮಾತಿಸೂಕ್ಷ್ಮವಾಗಿ ವಿವರಿಸುವುದು ತೀರ ಕಷ್ಟದಾಯಕ ಕಾರ್ಯ. ಭಾಷೆ ನಿರಂತರವಾಗಿ ಬದಲಾಗುವ ಬೆಳವಣಿಗೆ ಹೊಂದುವ ಹಾಗೂ ಯಾದೃಚ್ಛಿಕ, ಸಾಮಾಜಿಕ ಲಕ್ಷಣಗಳನ್ನು ಹೊಂದಿರುವದರಿಂದ ಧ್ವನಿ ವಿವೇಚನೆ ಇನ್ನೂ ದುಸ್ತರ. ಅಂತೆಯೆ ಪರಸ್ಪರ ಹೋಲಿಕೆಯುಳ್ಳ ಧ್ವನಿಗಳನ್ನು ಗುಂಪುಮಾಡಿ ಆ ಗುಂಪಿನ ಮುಖ್ಯ ಧ್ವನಿ ಘಟಕವನ್ನು ಪ್ರಾತಿನಿಧಿಕವಾಗಿ ತೆಗೆದುಕೊಂಡು ಅದಕ್ಕೆ ಲಿಪಿ ಸಂಕೇತ ನೀಡಿ ವಿವರಿಸುತ್ತಾರೆ. ಆಧುನಿಕ ಭಾಷಾವಿಜ್ಞಾನಿಗಳು 'ಧ್ವನಿಮಾ' ಎಂಬ ಪಾರಿಭಾಷಿಕ ಪದವನ್ನು ಅಂಥ ಧ್ವನಿ ಘಟಕಗಳಿಗೆ ಬಳಸುತ್ತಾರೆ, ಪರಂಪರಾಗತ ವೈಯಾಕರಣರು ಲಿಪಿಯುಕ್ತ ಧ್ವನಿ ಸಂಕೇತಗಳಿಗೆ 'ವರ್ಣ' ಎಂಬ ಪದವನ್ನು ಬಳಸಿದ್ದಾರೆ.ಲಿಪಿ ಮೂಲಕವೇ ಗುರುತಿಸಲ್ಪಡುವ ಇಂಥ ವರ್ಣಗಳನ್ನು ವರ್ಣಮಾಲೆಯಲ್ಲಿ ಅವರು ಸೂಚಿಸಿದ್ದಾರೆ. ಕೇಶಿರಾಜನು ಅಕ್ಷರ ಹಾಗೂ ವರ್ಣ ಇವುಗಳನ್ನು ಸಮಾನಾರ್ಥದಲ್ಲಿ ಬಳಸಿದ್ದಾನೆ.

ಅಕ್ಕರಮುಂ ವರ್ಣಮುಮೆಂ
ದಕ್ಕುಂ ಶುದ್ಧಾಕ್ಷರಕ್ಕೆ ನಾಮಂ ಬರೆಪಂ
ಬೊಕ್ಕುಚ್ಚರಿಸಲ್ಬಾರದ
ವಕ್ಕರಮಲ್ತವು ಘನಸ್ವನಾದಿ ಧ್ವನಿಗಳ್ (ಸೂ, ೧೨)

ಎಂದು ಅವನು ಹೇಳಿದ್ದನ್ನು ನೋಡಿದರೆ ಬರೆಯಲೂ ಉಚ್ಚರಿಸಲೂ ಬರುವಂಥವೇ ಶುದ್ಧ ಅಕ್ಷರಗಳು, ಅವನ್ನೇ ವರ್ಣಗಳು ಎನ್ನಬಹುದು ಎಂಬುದು

ಸ್ಪಷ್ಟವಾಗುತ್ತದೆ. ಆದರೆ ಅಕ್ಷರ ಹಾಗೂ ವರ್ಣ ಇವುಗಳನ್ನು ಸಮಾನವಾಗಿ ಪರಿಗಣಿಸುವುದು ಸಮಂಜಸವೆನಿಸುವುದಿಲ್ಲ, ಅಕ್ಷರವು ಉಚ್ಚಾರದ ಅತಿ ಸಣ್ಣ ಮೂಲ ಧ್ವನಿಘಟಕವೂ ಆಗಬಲ್ಲುದು, ಇಲ್ಲವೆ ಮೂಲ ಧ್ವನಿಘಟಕಗಳ ಸಮೂಹವೂ ಆಗಬಲ್ಲುದು. ಉದಾಹರಣೆಗೆ 'ಸ್ತ್ರೀ' ಎಂಬುದು ಒಂದು ಅಕ್ಷರ. ಇದರಲ್ಲಿ ಸ್, ತ್, ರ್, ಈ ಎಂಬ ನಾಲ್ಕು ಅತಿ ಸಣ್ಣ ಮೂಲ ಧ್ವನಿ ಘಟಕಗಳು ಇವೆ. 'ಈ' ಎಂಬ ಸ್ವರ ಬಿಡಿಯಾಗಿಯೂ ಅಕ್ಷರವಾಗುತ್ತದೆ. ಇದು ಅತಿಸಣ್ಣ ಮೂಲಧ್ವನಿಘಟಕವೂ ಹೌದು. ಅತಿಸಣ್ಣ ಮೂಲ ಧ್ವನಿ ಘಟಕವನ್ನು 'ವರ್ಣ' ಎನ್ನುವುದು ಸೂಕ್ತ. ಎಲ್ಲ ವ್ಯಂಜನಗಳೂ ವರ್ಣ ಆಗುತ್ತವೆ. ಆದರೆ ಸ್ವರಗಳೆಲ್ಲವೂ ಬಿಡಿಯಾಗಿದ್ದಾಗ ವರ್ಣಗಳು, ಅಥವಾ ಅಕ್ಷರಗಳಾಗುತ್ತವೆ. ವ್ಯಂಜನಗಳೊಂದಿಗೆ ಅವು ಸೇರಿಕೊಂಡಾಗ ಆ ಎಲ್ಲ ಘಟಕ ಅಥವಾ ಘಟಕಗಳೊಂದಾಗಿ ಅಕ್ಷರ ಆಗುತ್ತವೆ. ವರ್ಣಮಾಲೆ ಎಂದರೆ ಒಂದು ಭಾಷೆಯಲ್ಲಿರುವ ಅತಿಚಿಕ್ಕ (ಅಂದರೆ ವಿಭಜಿಸಲು ಬಾರದ) ಮೂಲ ಧ್ವನಿ ಘಟಕಗಳ ಪಟ್ಟಿ ಎಂದರ್ಥ,

4.1.2 ಗ್ರಂಥಸ್ಥ ಭಾಷೆಯನ್ನು ಅನುಲಕ್ಷಿಸಿ ಅಚ್ಚ ಕನ್ನಡದ ಶಿಷ್ಟ ಭಾಷೆಯ (ಆಡು ನುಡಿಯಲ್ಲದ ಭಾಷೆಯ) ವರ್ಣಮಾಲೆಯನ್ನು ಇಲ್ಲಿ ನಿರೂಪಿಸಿದೆ–

| | | |
|---|---|---|
| ೧. ಸ್ವರಗಳು : | ಅ, ಇ, ಉ, ಎ, ಒ (ಹ್ರಸ್ವ) | ೫ |
| | ಆ ಈ ಊ ಏ ಓ (ದೀರ್ಘ) | ೫ |
| ೨. ವ್ಯಂಜನಗಳು : | ಕ್, ಗ್, ಚ್, ಜ್, ಟ್, ಡ್, ತ್, ದ್, ಪ್, ಬ್ (ವರ್ಗೀಯ) | ೧೦ |
| | ಯ್, ರ್, ಲ್, ವ್, ಸ್, ಹ್, ಳ್ (ಅವರ್ಗೀಯ) | ೭ |
| ೩. ಅನುನಾಸಿಕಗಳು : | ಮ್, ನ್, ಣ್, ಙ್, ಞ್ | ೫ |
| | ಒಟ್ಟು | ೩೨ |

ಈ ೩೨ ವರ್ಣಮಾಲೆಯ ಸಂಖ್ಯೆಗೆ ಇನ್ನಷ್ಟು ಸೇರುತ್ತವೆ. ಸಂಸ್ಕೃತದ ಪ್ರಭಾವ ಕನ್ನಡದ ಮೇಲೆ ಅದರಲ್ಲೂ ಶಿಷ್ಟ ಕನ್ನಡಭಾಷೆಯ ಮೇಲೆ ಬಹು ಪ್ರಾಚೀನ ಕಾಲದಿಂದ ದಟ್ಟವಾಗಿದೆ. ಕಾರಣ ಸಂಸ್ಕೃತದ ವರ್ಣಗಳನ್ನೂ ಶಿಷ್ಟ ಕನ್ನಡದಲ್ಲಿ ಬಳಸುವ ರೂಢಿ ಇದೆ. ಅವು ಹೀಗಿವೆ–

೪. ವ್ಯಂಜನಗಳು : ಖ್, ಘ್, ಛ್, ಝ್, ಠ್, ಢ್,
ಥ್, ಧ್, ಫ್, ಭ್ (ಮಹಾಪ್ರಾಣಗಳು) ೧೦
ಶ್, ಷ್, (ಅವರ್ಗೀಯ) ೨
೫. ಸ್ವರಗಳು : ಋ, ೠ, ಐ, ಔ, ಅಂ, ಅಃ ೬
೨
೬. ಸಂಯುಕ್ತಾಕ್ಷರಗಳು ಕ್ಷ, ಜ್ಞ ಒಟ್ಟು ೨೦

ಹೀಗೆ ೩೨ಕ್ಕೆ ೨೦ನ್ನು ಸೇರಿಸಿದರೆ ವರ್ಣಮಾಲೆಯ ಸಂಖ್ಯೆ ೫೨ಕ್ಕೇರುತ್ತದೆ, ಕೆಲವರು ಕ್ಷ್ ಮತ್ತು ಜ್ಞ್ ಗಳು ಸಂಯುಕ್ತಾಕ್ಷರಗಳೆಂದು (ಕ್+ಷ್.) ಅವೆರಡನ್ನು ಸೇರಿಸದೆ ವರ್ಣಮಾಲೆಯ ಸಂಖ್ಯೆಯನ್ನು ೫೦ಕ್ಕೆ ತರುತ್ತಾರೆ. ಹಾಗೆ ನೋಡಿದರೆ ಈ ಎಲ್ಲ ವರ್ಣಗಳೂ ಕೇವಲ ಸಂಸ್ಕೃತದಿಂದ ಸ್ವೀಕೃತ ಪದಗಳಲ್ಲಿ ಮಾತ್ರ ಬಳಕೆಯಾಗುತ್ತವೆ. 'ೠ' ಈ ವರ್ಣವಂತೂ ಕನ್ನಡದಲ್ಲಿ ಎಂದೂ ಬಳಕೆಯಾಗಿಲ್ಲ. ಕಾರಣ ಇದನ್ನು ಕೈಬಿಟ್ಟರೆ ಯಾವ ಬಾಧಕವೂ ಇಲ್ಲ. ಹೀಗೆ ಕ್ಷ್, ಜ್ಞ್ ಹಾಗೂ ೠ ಗಳನ್ನು ಕಳೆದರೆ ೧೭ ಮಾತ್ರ ಉಳಿಯುತ್ತವೆ. ಆದ್ದರಿಂದ ಶಿಷ್ಟ ಕನ್ನಡದಲ್ಲಿ ೩೨+೧೭=೪೯ ವರ್ಣಗಳೆಂದಾಯಿತು. ಅಚ್ಚಗನ್ನಡದ ೩೨ ವರ್ಣಗಳಲ್ಲಿ ಙ ಮತ್ತು ಞ್‌ಗಳು ಇನ್ನುಳಿದ ಅನುನಾಸಿಕಗಳಂತೆ (ನ್, ಣ್, ಮ್ ಗಳಂತೆ) ಸ್ವತಂತ್ರವಾಗಿ ಬಳಕೆಗೊಳ್ಳುವುದಿಲ್ಲವಾದ್ದರಿಂದ ಅವುಗಳನ್ನು ಉಪವರ್ಣಗಳೆಂದು ಹೇಳಬೇಕು.

4.1.3 ಕೇಶಿರಾಜನು ಸಂಸ್ಕೃತ ವರ್ಣಮಾಲೆಯ ಹಿನ್ನೆಲೆಯಲ್ಲಿ ಕನ್ನಡದ ಶುದ್ಧಗೆ (ವರ್ಣಮಾಲೆ) ಯನ್ನು ೪೭ಕ್ಕೆ ತಂದು ನಿಲ್ಲಿಸಿದ್ದಾನೆ. ದೇಸೀಯ ೫ ವರ್ಣಗಳನ್ನು ಸಂಸ್ಕೃತದ ವರ್ಣ ಮಾಲೆಗೆ ಸೇರಿಸಿ ೫೭ ಮಾಡಿ ಅನಂತರ ಕನ್ನಡದಲ್ಲಿ ಇಲ್ಲದ ೧೦ ವರ್ಣಗಳನ್ನು ಕಳೆಯಲು ಹೇಳುತ್ತಾನೆ. ಕೇಶಿರಾಜನು ವರ್ಣಗಳನ್ನು ಕುರಿತು ಹೇಳುವಾಗ ಅನುಲೋಮ-ವಿಲೋಮ ಸವರ್ಣ, ಸಂಜ್ಞೆ. ನಾಮಿ, ಮುಂತಾದ ಕೆಲವು ಕನ್ನಡ ಭಾಷೆಯ ದೃಷ್ಟಿಯಿಂದ ಯಾವುದಕ್ಕೂ ಪ್ರಯೋಜನ ಇಲ್ಲದಂತಹ ಸಂಜ್ಞೆಗಳನ್ನು ನಿರೂಪಿಸಿದ್ದಾನೆ.

4.2 ಱ, ಕುಳ, ಕ್ಷಳ :

4.2.1 ಱ ಆಕಾರದಂತೆ ಇರುವ ಹಳಗನ್ನಡ ೞ,ಕನ್ನಡದಲ್ಲಿ ಸಹಜವಾಗಿರುವ ಳ, ಸಂಸ್ಕೃತದ ಲ ಅಥವಾ ಳ ಈ ಮೂರು ಳ ಕಾರಗಳನ್ನೇ ಅನುಕ್ರಮವಾಗಿ

ಱಟ, ೞಳ, ಕ್ಷಳ ಎಂದು ಕರೆಯಲಾಗಿದೆ. ೞಳ ಮತ್ತು ಕ್ಷಳ ಇವುಗಳನ್ನು ಕಾವ್ಯದಲ್ಲಿ ಆದಿ ಪ್ರಾಸಕ್ಕೆ ಬಳಸುವಾಗ ಮಿಶ್ರ ಮಾಡಬಹುದಾದರೂ ಕನ್ನಡ ಲಕಾರ ಹಾಗೂ ಸಂಸ್ಕೃತದ ಲಕಾರಗಳನ್ನು ಪ್ರಾಸದಲ್ಲಿ ಕೂಡಿಸಬಾರದೆಂದು ಕೇಶಿರಾಜ (ಸೂ. ೧೫) ಹೇಳಿದ್ದಾನೆ. ಈ ವಿಷಯ ನೇರವಾಗಿ ವ್ಯಾಕರಣಕ್ಕೆ ಸೇರುವುದಿಲ್ಲವಾದರೂ ಕನ್ನಡ ಸಂಸ್ಕೃತ ವರ್ಣಗಳ ಮಿಶ್ರಣ ತರವಲ್ಲವೆಂಬ ಅಭಿಪ್ರಾಯ ಇಲ್ಲಿರುವುದು ಗಮನಾರ್ಹ. ಱಟ, ೞಳ, ಕ್ಷಳಗಳು ಪ್ರಾಸಕ್ಕೆ ಸಲ್ಲುವುದಿಲ್ಲವಾದರೂ ವರ್ಣಾವೃತ್ತಿಯಲ್ಲಿ ಸೇರುತ್ತವೆ ಎನ್ನುತ್ತಾನೆ. ಱಟ, ೞಳ, ಕ್ಷಳಗಳ ಬಗೆಗೆ ಕೇಶಿರಾಜನು ಪ್ರಯಾಸಪಟ್ಟು ಅವುಗಳ ಸ್ವರೂಪವನ್ನು ಸ್ಥಾಪಿಸಲು ಯತ್ನಿಸಿದ್ದಾನೆ. ಆದರೆ ಕ್ಷಳ–ಲ, ೞಳ–ಕ್ಷಳ, ಱಟ–ೞಳ ಹೀಗೆ ಪರಸ್ಪರವಾಗಿ ಅದರ ಸ್ಥಾನದಲ್ಲಿ ಇದು, ಇದರ ಸ್ಥಾನದಲ್ಲಿ ಅದು ಅದಲು ಬದಲಾಗಿ ಬಳಕೆಗೊಳ್ಳುವ ಬಗೆ ಕೇಶಿರಾಜನಿಗಿಂತ ಎಷ್ಟೋ ಕಾಲ ಮುಂಚೆಯೆ ಅಂದರೆ ೯ನೆಯ ಶತಮಾನದ ವೇಳೆಗೇ ಆರಂಭವಾಗಿತ್ತು. ಕಾವ್ಯಗಳಲ್ಲೂ ನಿಯಮ ಸಡಿಲುಗೊಂಡಿತ್ತು.

ಕೇಶಿರಾಜನು ವೈಯ್ಯಾಕರಣ ಅದರಲ್ಲೂ ಪ್ರಯೋಗ ಶರಣನಾದ ವೈಯ್ಯಾಕರಣ. ಅಂತೆಯೇ ನೇಮಿಚಂದ್ರ, ಹರಿಹರ ಮುಂತಾದವರು ಱಟ, ೞಳ, ಕ್ಷಳ, ನಿಯಮವನ್ನು ಮೀರಿದಂತೆ ಕೇಶಿರಾಜ ಮೀರುವ ಸ್ಥಿತಿಯಲ್ಲಿರಲಿಲ್ಲ. ಅವು ರೂಢಿಯಿಂದ ಗತಿಸಿ ಹೋಗುತ್ತಿದ್ದರೂ ಅವುಗಳನ್ನು ಕಾಯ್ದುಕೊಳ್ಳಲು ಶ್ರಮಪಟ್ಟ. ಅಷ್ಟೇ ಏಕೆ ಕನ್ನಡದ ಅಸಾಧಾರಣ ಲಕ್ಷಣಗಳಲ್ಲಿ ಎರಡನೆಯ ಲಕ್ಷಣವಾಗಿ ಱಟ, ೞಳ, ಕ್ಷಳಗಳನ್ನು ಸೇರಿಸಿ (ಸೂ. ೨೬೨) ತನ್ನ ಹಟವನ್ನೇ ಸಾಧಿಸಿದನು.

ಱಟ, ೞಳ; ಕ್ಷಳಗಳ ಉಚ್ಚಾರ ಸಾಮಾನ್ಯವಾಗಿ ಮೂರ್ಧನ್ಯ ವ್ಯಂಜನದಂತಿರುತ್ತದೆ. ಕೇಶಿರಾಜನು ಱಟದ ಉಚ್ಚಾರ ಡಕಾರಾಶ್ರಿತವೆಂದು ಹೇಳಿರುವುದರಿಂದ ಪ್ರಾಯಶಃ ಱ್ ಹಾಗೂ ಡ್ ಇವೆರಡರ ಮಧ್ಯ ಟ್ ಕಾರ ಉಚ್ಚರಿತವಾಗುತ್ತಿರಬಹುದು. "ಡಕಾರಂ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ ಱಟವೆಸರ ಟಕಾರಂ ಪುಟ್ಟುಗುಂ ಡಕಾರಂ ಮೂರ್ಧನ್ಯ ಱಟನದಜಿಹ್ವಾಳೇಕ ಸ್ಥಾನಿ ಎಂದೂ ಸ್ಪಷ್ಟೀಕರಿಸಿರುವುದನ್ನಿಲ್ಲಿ ಗಮನಿಸಬೇಕು. ಇದರಂತೆ "ಲಕಾರಂ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ ೞಳವೆಸರ.

ೞ ಕಾರಂ ಪ್ರಟ್ಟುಗುಂ...... ಲ ಕಾರಂ ದಂತ್ಯಂ ಕುಳನದಜಿಹ್ವೋಲ್ಲೇಕ ಸ್ಥಾನಿ" ಆದ್ದರಿಂದ ಱ್ ಕಾರವು ಡ್ ಕಾರದ ಉಚ್ಚಾರವನ್ನು (ಅಂದರೆ ಮೂರ್ಧನ್ಯ) ೞ್ ಕಾರವು ಲ್ ಕಾರದ ಉಚ್ಚಾರವನ್ನು (ಅಂದರೆ ದಂತ್ಯ) ಹೆಚ್ಚು ಹೋಲುತ್ತಿತ್ತೆಂದೂ ಇದರಿಂದ ತಿಳಿದು ಬರುತ್ತದೆ. ಇದಕ್ಕೆ ಸಮರ್ಥನೆಯನ್ನು ಒದಗಿಸುವ ಹಲವಾರು ಉದಾಹರಣೆಗಳು ಶಬ್ದಮಣಿದರ್ಪಣದಲ್ಲೇ ಅಲ್ಲಲ್ಲಿ ದೊರೆಯುತ್ತವೆ.

| | | | |
|---|---|---|---|
| ಡ್—ಱ್ : | ಕಾಡ್ಗಿಚ್ಚು – ಕಾಱ್ಕಿಚ್ಚು | ಎರಡ್ಮಾತು – ಎರಱ್ಮಾತು |
| | ಮಾಡ್ಬ – ಮಾಱ್ಬ | ನೋಡ್ಬ – ನೋಱ್ಬ |
| | ಬೇಡ್ವ – ಬೇಱ್ವ | ನಾಡ್ಕಡೆ – ನಾಱ್ಕಡೆ |
| ಲ್—ೞ್ : | ಜಲಂ – ಜೞಂ | ಫಲಂ – ಫೞಂ |
| | ತಿಲಂ – ತಿೞಂ | ಚಲಂ – ಚೞಂ |

ಱ ಕನ್ನಡದಲ್ಲಿ ಸಹಜವಾದುದೆಂಬುದನ್ನು ಸ್ಥಾಪಿಸಲು ಒಂದರ್ಥದಿಂದ ಐದರ್ಥಗಳನ್ನು ಒಳಗೊಂಡ ಪ್ರಮಾಣ ಪುರುಷರು ಕಾವ್ಯಮಾರ್ಗದಲ್ಲಿ ಬಳಸುವ ೧೮೧ ಶಬ್ದಗಳ ಪಟ್ಟಿಯನ್ನು ಸಮರ್ಥನೆಗೆಂದು ನೀಡಿದ್ದಾನೆ. ಇಷ್ಟೆಲ್ಲ ಮಾಡಿದರೂ ಕೇಶಿರಾಜನಿಗೆ ಕೆಲವು ಸಂದೇಹಗಳು ಉಳಿದವು. ಒತ್ತಕ್ಷರದಿಂದೊಡಗೂಡಿದ ಱಕ್ಕೆ ಪ್ರತಿಯಾಗಿ ರ್ ಕಾರದ ಒತ್ತಕ್ಷರವನ್ನು ಪ್ರಾಸಕ್ಕೆ ಹಿರಿಯರು ಪ್ರಯೋಗಿಸಿದ್ದಾರೆಂಬುದನ್ನು "ಅಂತದು ಶುದ್ಧಂ" (ಸೂ. ೨೪) ಎಂದು ಮೆತ್ತಗೆ ಒಪ್ಪಿಕೊಳ್ಳುತ್ತಾನೆ. ಝೞಕ, ಝೞಪಿಸಿದ, ಜಾಂಗುೞಿ, ಮುಂಬುೞಿ, ಅೞವಾೞ, ತವಾೞ, ಪೞಿಗೆ, ಹಿಂದುೞಿ, ಜಂಗುೞಿ, ಪುತ್ತೞಿ, ಗೋೞಿ ಮುಂತಾದ ಶಬ್ದಗಳಲ್ಲಿರುವ ೞಕ್ಕೆ ಸಂಶಯವಿರುವುದನ್ನು ತಾನೇ ಎತ್ತಿತೋರಿ ಅವುಗಳ ಪ್ರಯೋಗ ನಿರ್ಧರಿಸಬೇಕೆನ್ನುತ್ತಾನೆ. (ಸೂ. ೨೫) ಆ ಮೇಲೆ ಕುಳ ಯಾವ ಪದಗಳಲ್ಲಿ ಬರುತ್ತದೆಂಬುದನ್ನು ಪಟ್ಟಿಮಾಡುತ್ತಾನೆ. (ಸೂ. ೨೬, ೨೭) ಬೆರಲ್, ಒರಲ್, ಕೊರಲ್, ಸರಲ್, ಪರಲ್ ಮುಂತಾದವುಗಳನ್ನು ಬೆರೞ್, ಕೊರೞ್, ಸರೞ್ ಎಂದು ಉಚ್ಚರಿಸಬಾರದು, ಗ್ರಾಮ್ಯರು ಅರಿಯದೆ ಇಂಥವುಗಳನ್ನು ಕುಳಾಂತ ಭ್ರಮೆಯಿಂದ ಬೆರೞ್, ಕೊರೞ್ ಇತ್ಯಾದಿಯಾಗಿ ಉಚ್ಚರಿಸುತ್ತಾರೆ ಎಂದು ಹಳಿಯುತ್ತಾನೆ. (ಸೂ. ೨೮) ಸ್ಫಟಿಕ, ಪೇಟಿಕೆ, ವೀಟಿಕೆ ಮುಂತಾದ ಅನೇಕ ಶಬ್ದಗಳಲ್ಲಿ ಟ್ ಕಾರದ ಬದಲಾಗಿ ಕುಳಗಳೇ ಬರಬೇಕಾಗಿತ್ತು. (ಸೂ.

೩೨) ಸ್ಫೋಟಕ–ಹೋಳಿಗೆ ಆದದ್ದು ಲಪಂಟ–ಲಂಪಳ ಆದದ್ದು ಸಂದೇಪ ಎನ್ನುತ್ತಾನೆ. ಟ್, ತ್, ಠ್, ರ್, ಕ್ಷಳ ಗಳಿಗೆ ಅಪಭ್ರಂಶತೆಯಿಂದ ಕವಿಗಳು ಱಟ ಬಳಸುತ್ತಾರೆ. (ಸೂ. ೩೧) ದಾಳಿಂಬ, ಕುಂಬಳ, ಗೌಳಿ, ಗುಳಂ. ಜಗಳ, ವಿಳಂಗ ಇವುಗಳಲ್ಲಿ ಡ್>ಟ್>ಳ್ ಬದಲಾವಣೆ ಆಗಿದೆ. ಇದು ಅಪಭ್ರಂಶ ಎನ್ನುತ್ತಾನೆ (ಸೂ. ೩೦).

ಕೇಶಿರಾಜನಿಗೇ ಈ ಸಂದೇಹಗಳಿರುವುದರಿಂದ ಅವನ ಕಾಲಕ್ಕಾಗಲೆ ಱಟ, ಕುಳ, ಕ್ಷಳ ಗಳೆಲ್ಲವೂ ಒಂದಾಗಿದ್ದವು. ರೂಢಿಯಲ್ಲಿ ತಪ್ಪುತ್ತಿದ್ದ ಅವುಗಳನ್ನು ಹಿಡಿದಿಡುವ ವ್ಯರ್ಥಸಾಹಸ ಮಾಡಿದನಷ್ಟೇ. ಆದರೂ ಅವನ ಪ್ರಯತ್ನ ಶ್ಲಾಘನೀಯವೇ ಸರಿ. ಆಧುನಿಕ ಕನ್ನಡದಲ್ಲಿ /ಲ್/ ಮತ್ತು /ಳ್/ ಎರಡು ಮಾತ್ರ ಉಳಿದಿವೆ. ಆದ್ದರಿಂದ ಈಗಿನ ಕನ್ನಡ ವರ್ಣಮಾಲೆಯಲ್ಲಿ 'ೞ' ವನ್ನು ಸೇರಿಸುವ ಅವಶ್ಯಕತೆ ಇಲ್ಲ.

### 4.3 ಶಕಟರೇಫ 'ಱ'

ಮೂಲದ್ರಾವಿಡಭಾಷೆಯಲ್ಲಿ 'ರ್' ಕಾರದ ಉಚ್ಚಾರ ಎರಡು ಭಿನ್ನ ರೀತಿಯಲ್ಲಿ ಆಗುತ್ತಿರಬೇಕೆಂಬುದನ್ನು ಗಮನಿಸಿ ಒಂದನ್ನು ರೇಫ ಎಂದೂ ಇನ್ನೊಂದನ್ನು ಶಕಟರೇಫವೆಂದೂ ಕರೆಯಲಾಗಿದೆ. ಶಕಟ ಎಂದರೆ ಸಂಸ್ಕೃತದಲ್ಲಿ ಚಕ್ಕಡಿ. ಚಕ್ಕಡಿ (ಬಂಡಿ) ಗಾಲಿಯಂತೆ ಕಣ್ಣಿಗೆ ಕಾಣುವ ಇದರ ಲಿಪಿಯನ್ನು ಲಕ್ಷಿಸಿ ಶಕಟರೇಫ ಎಂದು ಹೆಸರಿಸಿರಬಹುದಾಗಿದೆ. ವರ್ತ್ಸ್ಯಘೋಷ ಸ್ಪರ್ಶ ಧ್ವನಿಯಾಗಿ ಇದು ಉಚ್ಚರಿತಗೊಳ್ಳುತ್ತಿರಬೇಕೆಂಬುದು ದ್ರಾವಿಡ ಭಾಷಾವಿಜ್ಞಾನಿಗಳ ಅಭಿಪ್ರಾಯ. ಕೇಶಿರಾಜನು ೨೮ನೆಯ ಸೂತ್ರದಲ್ಲಿ "ಅತಿಪೀಡನದಿಂ ರೇಫಾಶ್ರಿತಮಾದ ಱಕಾರಮುಂ" ಎಂದೇ ಹೇಳಿದ್ದಾನೆ. 'ರ್'ವನ್ನು ಆಶ್ರಯಿಸಿ ಮೂರ್ಧನ್ಯ ಟ್ ದೆಡೆಗೆ ನಾಲಗೆಯನ್ನು ಒತ್ತಿ ಉಚ್ಚರಿಸಿದಾಗ ಉಂಟಾಗುವ ಧ್ವನಿಯೇ 'ಱ' ಎಂದು ಊಹಿಸಬಹುದಾಗಿದೆ. ಕನ್ನಡದಲ್ಲಿ 'ಱ' ಕಾರವು ಜನರ ನಾಲಗೆಯಿಂದ ಸುಮಾರು ಹತ್ತನೆಯ ಶತಮಾನದಿಂದಲೆ ಕಡಿಮೆಯಾಗುತ್ತ ೧೪ನೆಯ ಶತಮಾನದ ವೇಳೆಗೆ ಬಳಕೆಯಿಂದ ಸಂಪೂರ್ಣ ನಿಂತು ಹೋಯಿತು. ಕೇಶಿರಾಜನು ಇದನ್ನು ಗುರುತಿಸಿ ಅದನ್ನು ಹೇಗಾದರೂ ಮಾಡಿ ಉಳಿಸಿಕೊಳ್ಳಬೇಕೆಂದು ಅದನ್ನು ಒತ್ತುಕೊಟ್ಟು ವಿವರಿಸಿದಂತೆ ಕಾಣುತ್ತದೆ, ಶಕಟರೇಫಗಿಂತ

'ಱ' (ಱಱ) ವನ್ನು ಉಳಿಸಿಕೊಳ್ಳಲು ಅವನು ಬಹಳ ಹೆಣಗಿದ್ದಾನೆ.ಇಷ್ಟಾದರೂ ಕೊನೆಗೆ ಅವು ನಿಲ್ಲದೆಯೆ 'ಱ' ವು 'ರ' ದಲ್ಲಿಯೂ 'ೞ' ವು 'ಳ/ಲ' ಗಳಲ್ಲಿಯೂ ಲೀನವಾಗಿ ಹೋದವು.

## 4.4 ಯೋಗವಾಹಗಳು :

'ಅಯೋಗವಾಹ' ಎಂದು ಮೊದಲು ಗುರುತಿಸುತ್ತಿದ್ದ ವರ್ಣಗಳನ್ನು ಅನಂತರ 'ಯೋಗವಾಹ' ಎಂದು ತಪ್ಪಾಗಿ ಕರೆಯ ತೊಡಗಿದ್ದನ್ನು ವಿದ್ವಾಂಸರು ಎತ್ತಿತೋರಿದ್ದಾರೆ. 'ಅ' ದ ಸಹಾಯದಿಂದ ಮಾತ್ರ ಉಚ್ಚರಿತಗೊಳ್ಳುವ ವರ್ಣಗಳಿವು ಎಂಬ ಕಾರಣದಿಂದ 'ಅಯೋಗವಾಹ' ಎಂದು ಕರೆಯುವುದೇ ಸರಿ ಎಂದು ಅವರ ಅಭಿಪ್ರಾಯ. ೧೦ನೆಯ ಶತಮಾನದ ಅನಂತರದ ಸಂಸ್ಕೃತ ವ್ಯಾಕರಣಗಳಲ್ಲಿ ಯೋಗವಾಹ ಶಬ್ದ ರೂಢಿಗೆ ಬಂತು.ಅದನ್ನೇ ಕೇಶಿರಾಜ ಇಟ್ಟು ಕೊಂಡ. ಬಿಂದು, ವಿಸರ್ಗ, ಜಿಹ್ವಾಮೂಲೀಯ ಮತ್ತು ಉಪಾಧ್ಮಾನೀಯ ಇವನ್ನು ಯೋಗವಾಹಗಳಲ್ಲಿ ಕೇಶಿರಾಜ ಪರಿಗಣಿಸಿದ್ದಾನೆ (ಸೂ. ೨೭) ವಿಸರ್ಗ, ಜಿಹ್ವಾಮೂಲೀಯ ಹಾಗೂ ಉಪಾಧ್ಮಾನೀಯಗಳು ಒಂದೇ ವರ್ಗಕ್ಕೆ ಸೇರು ವಂತಹವು, ವಿಸರ್ಗ ಸಂಸ್ಕೃತ ಶಬ್ದಗಳಲ್ಲಿ ಮಾತ್ರ ಬಳಕೆಯಾಗುವ ವರ್ಣವಾಗಿದೆ. ಸ್ವರಗಳ ಸಹಾಯವಿಲ್ಲದೆ ಇದು ಉಚ್ಚರಿತವಾಗದು. ಸ್ವರ ಮತ್ತು 'ಕ್' ಅಥವಾ ಖ್ ಇವುಗಳ ಮಧ್ಯದಲ್ಲಿ ಬರುವ ವಿಸರ್ಗಕ್ಕೆ ಜಿಹ್ವಾಮೂಲೀಯವೆಂದು ಹೆಸರು (ಉಷಃಕಾಲ, ದುಃಖ), ಸ್ವರ ಮತ್ತು 'ಪ್' ಅಥವಾ 'ಫ್' ಇವುಗಳ ಮಧ್ಯದಲ್ಲಿ ಬರುವ ವಿಸರ್ಗವನ್ನು ಉಪಾಧ್ಮಾನೀಯವೆನ್ನುತ್ತಾರೆ (ಅಂತಃಪುರ ತಪಃಫಲ) ಕನ್ನಡದಲ್ಲಿ ವಿಸರ್ಗವಾಗಲಿ ಜಿಹ್ವಾಮೂಲೀಯ, ಉಪಾಧ್ಮಾನೀಯ ಗಳಾಗಲಿ ಇಲ್ಲ. ಅನುಸ್ವಾರವಾದರೂ ಕನ್ನಡದಲ್ಲಿ ಇಲ್ಲ, ಆದರೆ ಬಿಂದು ಇದ್ದು ಅದರ ಸ್ಥಾನ ವಿಶಿಷ್ಟವಾಗಿದೆ (ನೋಡಿ ೪.೭) ಒಟ್ಟಿನಲ್ಲಿ ಅಚ್ಚಗನ್ನಡ ದಲ್ಲಿ ಯೋಗವಾಹಗಳು ಇಲ್ಲ. ಸಂಸ್ಕೃತದಿಂದ ತೆಗೆದುಕೊಂಡ ಶಬ್ದಗಳಲ್ಲಿ ಮಾತ್ರ ಇವು ಕಾಣಿಸಿಕೊಳ್ಳುತ್ತವೆ;

ಕನ್ನಡ ವರ್ಣಗಳ ವಿಶೇಷ ವಿಚಾರಗಳನ್ನು ಇನ್ನಷ್ಟು ತಿಳಿದುಕೊಳ್ಳೋಣ.

## 4.5 ಶಿಥಿಲದ್ವಿತ್ವ :

ಟ್, ಳ್ ಹಾಗೂ ರ್ ಇವು ಪದಾಂತ್ಯದಲ್ಲಿ ಇದ್ದು ಅವುಗಳ ಹಿಂದಿನ ವರ್ಣಗಳು ಹ್ರಸ್ವವಾಗಿದ್ದು ಇಂತಹ ಟ್, ಳ್, ರ್, ಗಳ ಮುಂದೆ ಗ್, ದ್,

ಜ್, ವ್ ಇವುಗಳಲ್ಲಿ ಯಾವುದೇ ವ್ಯಂಜನ ಬಂದರೂ ಅವೆರಡೂ ಕೂಡಿ ಆಗುವ ಉಚ್ಚಾರ 'ಶಿಥಿಲ' ವಾಗುತ್ತದೆ.

ಉದಾ : ಅಗಟ್+ಗಳ್ > ಅಗಟ್ಗಳ್, ಎಸಟ್+ಗಳ್ > ಎಸಟ್ಗಳ್
ಮುಗುಳ್+ಗಳ್ > ಮುಗುಳ್ಗಳ್, ಅಮಳ್+ಗಳ್ > ಅಮಳ್ಗಳ್
ಪೆಸರ್+ಗಳ್ > ಪೆಸರ್ಗಳ್, ಬಿದಿರ್+ಗಳ್ > ಬಿದಿರ್ಗಳ್
ಪೊಗಟ್+ದ್ > ಪೊಗಟ್ದಂ, ನುಸುಳ್+ದ > ನುಸುಳ್ದಂ
ತೊಡರ್+ದ್ > ತೊಡರ್ದಂ.
ಕೇಶಿರಾಜನು (ಸೂ. ೫೨–೫೫) 'ಶಿಥಿಲ'ಕ್ಕಿಷ್ಟು ಹೇಳಿದರೂ,
ಅಲರ್+ತೋಂಟ > ಅಲರ್ದೋಂಟ
ಬೆಳರ್+ಕೆಂಪು > ಬೆಳರ್ಗೆಂಪು

ತಾನೇ ಹೇಳಿದ ಈ ಉದಾಹರಣೆಗಳಲ್ಲಿ ರೇಫದ ನಂತರ ಗ್, ದ್, ಜ್ ಅಥವಾ ವ್ ಇವುಗಳಲ್ಲಿ ಯಾವುದೂ ಇಲ್ಲದಿದ್ದರೂ ಶಿಥಿಲ ಉಚ್ಚಾರವಿದೆ. ಆದರೆ ಇಲ್ಲಿರುವ 'ತ್' 'ಕ್' ಅಘೋಷ ಸ್ಪರ್ಶಗಳು ಘೋಷಸ್ಪರ್ಶ (ದ್, ಗ್) ಗಳಾಗಿ ಪರಿವರ್ತಿತವಾಗಿರುವುದು ಗಮನಾರ್ಹ. ಅವು ಸಂಧಿಯಲ್ಲಿ ಘೋಷಗಳಾದುದ ರಿಂದಲೇ ಶಿಥಿಲತ್ವ ಘಟಿಸಿದೆ. ಇದರಿಂದ ತಿಳಿದು ಬರುವ ಅಂಶವೆಂದರೆ ಶಿಥಿಲತೆ ನಿರ್ದಿಷ್ಟ ಪರಿಸರದಲ್ಲಿ ಮಾತ್ರ ನಡೆಯುತ್ತದೆಂಬುದು.

ಈ ಶಬ್ದಗಳನ್ನು ಗಮನಿಸಿರಿ– ದಡ, ದಣಿವು, ದೋಣಿ, ದರಿ, ದನಿ, ಇದು, ಕುದಿ, ಕದ, ತಿದಿ, ಸದೆ, ಇವುಗಳಲ್ಲಿ 'ದ್' ಉಚ್ಚಾರ ಸ್ಪಷ್ಟವಿದೆ. ಆದರೆ ಪೊಗಟ್ದಂ, ತೊಡರ್ದಂ, ನುಸುಳ್ದಂ, ಈ ಉದಾಹರಣೆಗಳಲ್ಲಿ 'ದ್' ಉಚ್ಚಾರ ವನ್ನು ಅವುಗಳಿಗೆ ಹೋಲಿಸಿದರೆ ದಡ ಇತ್ಯಾದಿ ಮೇಲೆ ಹೇಳಿರುವ ಶಬ್ದಗಳಲ್ಲಿರು ವಷ್ಟು ಸ್ಪಷ್ಟವಾಗಿ ಉಚ್ಚರಿಸಲ್ಪಡುವುದಿಲ್ಲವೆಂಬುದು ಗಮನಕ್ಕೆ ಬರುತ್ತದೆ, ಟ್, ಳ್, ರ್, (ಮೂರ್ಧನ್ಯ) ವ್ಯಂಜನಗಳಿಂದಾಗಿ ಅವುಗಳ ಮುಂದಿನ ಗ್, ದ್, ಜ್, (ಘೋಷ) ಹಾಗೂ ವ್ (ಅರೆವ್ಯಂಜನ) ಗಳು ತಮ್ಮ ಧ್ವನಿಯ ಗಡಸುತನದ (ಕಂಪನದ) ಕೆಲ ಭಾಗವನ್ನು ಕಳೆದುಕೊಳ್ಳುತ್ತವೆಂದಾಯಿತು. ಅಂತೆಯೆ ಮೂರ್ಧನ್ಯ ವ್ಯಂಜನವಿದ್ದಾಗ ಒಂದು ಬಗೆ ಇತರ ಪರಿಸರದಲ್ಲಿ

ಮತ್ತೊಂದು ಬಗೆಯ ಉಚ್ಚಾರ ಗ್, ಜ್, ದ್, ವ್ ಗಳಿಗೆ ಇದ್ದಿರಬಹುದೆಂದು ನಿರ್ಣಯಿಸಲು ಸಾಧ್ಯ. ಈ ಇಡೀ ಸಾಧ್ಯತೆ ಹ್ರಸ್ವ ಸ್ವರಗಳಿದ್ದಾಗ ಮಾತ್ರ ವೆಂಬುದನ್ನು ಗಮನಿಸಬೇಕು. ಇದನ್ನು ಕೇಶಿರಾಜನು 'ಶಿಥಿಲತ್ವಮಗುರು ಪೂರ್ವ ಸ್ಥಿತಿಯಿಂ' ಎಂದು ಸ್ಪಷ್ಟವಾಗಿ ಹೇಳಿದ್ದು ಉಚಿತವಾಗಿದೆ.

ಆದರೆ ಈ ನಿರ್ಣಯಕ್ಕೆ ತದ್ವಿರುದ್ಧವಾದ ಉದಾಹರಣೆಗಳೂ ಕನ್ನಡ ಶಾಸನ, ಪ್ರಾಚೀನ ಗ್ರಂಥಗಳಲ್ಲಿ ದೊರೆಯುತ್ತವೆಂಬುದು ತಿಳಿದರೆ ನಮ್ಮನ್ನು ದಾರಿ ತಪ್ಪಿಸುತ್ತವೆ. ಇರ್ಕ್ಕಳ, ಅವರ್ಗ್ಗ, ಪೆರ್ಚ್ಚು ಇತ್ಯಾದಿ. ಇವು ಒತ್ತಟ್ಟಿಗಿರಲಿ, ಕೇಶಿರಾಜನೇ ಕೆಲವು ಪದಗಳು ನಿಯತವಾಗಿ ದ್ವಿತ್ವವಾಗುತ್ತವೆಂದು ಸಾರಿ (ಸೂ. ೯೬)– ಎಟ್ದ, ಬಟಿಲ್ದಂ, ಬಿಟ್ದ, ಬಿಜ್ದಂ, ಸುರುಳ್ದಂ ಇಂತಹ ಉದಾಹರಣೆಗಳನ್ನು ನೀಡಿದ್ದಾನೆ. ಅಗುಜ್ದಂ, ನೆಗಟ್ದಂ, ಮಸುಳ್ದಂ ಮುಂತಾದ ಕೆಲವು ಶಿಥಿಲವೂ ದ್ವಿತ್ವವೂ ಆಗುತ್ತವೆನ್ನುತ್ತಾನೆ. ಇದಕ್ಕೇನೆನ್ನೋಣ ? ಕೇಶಿರಾಜನ ಕಾಲಕ್ಕಾಗಲೆ ಈ ಗೊಂದಲ ಅಂದರೆ ಉಚ್ಚಾರಕ್ಕೂ ಬರವಣಿಗೆಗೂ ನಡುವೆ ಕಂದಕ ಬಹಳ ಆಳವಾಗಿ ಬಿದ್ದಿತ್ತು ಎನಿಸುತ್ತದೆ.

## 4.6 ಮಹಾಪ್ರಾಣಗಳು :

ಮಹಾಪ್ರಾಣಗಳನ್ನು ಕನ್ನಡ ವರ್ಣಮಾಲೆಯಲ್ಲಿ ಸೇರಿಸಬೇಕೆ ಬೇಡವೆ ? ಎಂಬುದೊಂದು ಪ್ರಶ್ನೆ. ಹಲವಾರು ವಿದ್ವಾಂಸರು ಇದನ್ನು ಚರ್ಚಿಸಿ ಕೆಲವರು ಇಟ್ಟುಕೊಳ್ಳಬೇಕೆಂದೂ ಕೆಲವರು ಅನಾವಶ್ಯಕವೆಂದೂ ವಾದಿಸಿದ್ದಾರೆ. ಕೇಶಿರಾಜನು 'ಒಳವು ಮಹಾಪ್ರಾಣಂಗಳ್ ವಿಳಸತ್ಕರ್ಣಾಟಕ ಭಾಷೆಯೊಳ್ ಕೆಲವು ನಿಜೋಜ್ವಳಮಾಗಿ ವರ್ಗದಂತ್ಯಂಗಳನಱಿಯನುನಾಸಿಕಾಖ್ಯೆಯುಂ ತಳೆದಿರ್ಕುಂ. (೨೫) ಎಂಬ ಸೂತ್ರದ ಪೂರ್ವಭಾಗದಲ್ಲಿ ಮಹಾಪ್ರಾಣಗಳು ಕನ್ನಡದಲ್ಲಿ ಕೆಲವು ಶಬ್ದಗಳಲ್ಲಿ ಸಹಜವಾಗಿ ಉಂಟು ಎಂದು ಹೇಳಿ ೪೭ ಶಬ್ದಗಳ ಉದಾಹರಣೆಗಳ ಪಟ್ಟಿ ನೀಡಿದ್ದಾನೆ. ಆದರೆ ಅವಾವವೂ ಕನ್ನಡ ಶಬ್ದಗಳೆಂದು ಧೈರ್ಯವಾಗಿ ಹೇಳುವಂತಿಲ್ಲ, ಈ ಮೊದಲಿನ ಸೂತ್ರದಲ್ಲಿ 'ವರ್ಗ ದ್ವಿತೀಯ ವರ್ಣಂ ವರ್ಗ ಚತುರ್ಥಾಕ್ಷರಂ ಮಹಾಪ್ರಾಣಮವಂ ಮಾರ್ಗವಿದರ್ ಸಂಜ್ಞೆಯೊಳಂ ಘೋರ್ಗರೆವನುಕೃತಿಯೊಳಂ ಪ್ರಯೋಗಿಸುತಿರ್ಪರ್, (೨೪) ಎಂಬುದಾಗಿ ವರ್ಗದ್ವಿತೀಯ ಚತುರ್ಥಾಕ್ಷರಗಳು ಮಹಾಪ್ರಾಣಗಳಾಗುತ್ತವೆ. ಅವು

ಗಳನ್ನು ಪಂಡಿತರು ಸಂಖ್ಯಾವಾಚಕ ಹಾಗೂ ಅನುಕರಣವಾಚಕ ಶಬ್ದಗಳಲ್ಲಿ ಬಳಸುತ್ತಾರೆ ಎಂದಿದ್ದಾನೆ, ಈ ಅಸ್ಪಷ್ಟ ವಿವರಣೆಯಿಂದ ನಮಗೆ ಮಹಾ ಪ್ರಾಣಗಳ ವ್ಯಾಖ್ಯೆ ಗೊತ್ತಾಗುವುದಿಲ್ಲ. ಅಲ್ಲದೆ ಅವನು ನೀಡುವ ಉದಾ ಹರಣೆಗಳೆಲ್ಲ ಸಂಸ್ಕೃತ ಅಥವಾ ಪ್ರಾಕೃತಕ್ಕೆ ಸೇರಿದವಾಗಿವೆ. ಸ್ವತಃ ಕೇಶಿರಾಜ ನಿಗೇ ಈ ಬಗ್ಗೆ ಸಂಶಯವಿರಬೇಕು. ಕನ್ನಡದಲ್ಲಿ ಸಹಜವಾಗಿದ್ದರೆ ಕೇವಲ ಸಂಖ್ಯಾವಾಚಕ, ಅನುಕರಣವಾಚಕಗಳಲ್ಲಿ ಮಾತ್ರವೇ ಅವು ಏಕೆ ಬರಬೇಕು? ಸಂಖ್ಯಾವಾಚಕಗಳಿಗೂ ಅವನು ನೀಡಿದ ಉದಾಹರಣೆಗಳು ಸಂಸ್ಕೃತದ ಸಹಸ್ರ ಪದದ ತದ್ಭವವಾದ ಸಾಸಿರ ಎಂಬ ಉತ್ತರಪದದಿಂದ ಕೂಡಿವೆ ಹಾಗೂ ಉಳಿ ದವುಗಳಲ್ಲಿ ಮಹಾಪ್ರಾಣ ಕ್ವಚಿತ್ತಾಗಿ ಬರುತ್ತವೆ. ಅನುಕರಣವಾಚಕಗಳು ಭಾಷಾಶಾಸ್ತ್ರದ ದೃಷ್ಟಿಯಿಂದ ಭಾಷಾರಚನೆಯ ವೈಶಿಷ್ಟ್ಯವನ್ನು ನಿರ್ಧರಿಸುವಷ್ಟು ಮಹತ್ವಪೂರ್ಣವಲ್ಲ. ಕೇಶಿರಾಜನು ಉದಾಹರಿಸಿದ ಬಹಳಷ್ಟು ಶಬ್ದಗಳೂ ಮೂಲತಃ ಅಲ್ಪಪ್ರಾಣಗಳಾಗಿರಬೇಕು. ಅಲ್ಲದೆ 'ಕಂಭಕ್ಕಂ, ಭಾಸೆಗಂ ವಿಕಲ್ಪಂ' ಎಂದು ಅವನು ಹೇಳುವುದನ್ನು ನೋಡಿದರೆ ಮಹಾಪ್ರಾಣೀಕರಣ ಸಾರ್ವತ್ರಿಕ ವಾಗಿದ್ದಂತಿಲ್ಲ. ಸಂಸ್ಕೃತದ ಕೆಲವು ಅಲ್ಪಪ್ರಾಣಯುಕ್ತ ಶಬ್ದಗಳೂ ಮಹಾಪ್ರಾಣ ಗಳಾಗಿ ಉಚ್ಚರಿಸಲ್ಪಟ್ಟಿರುವ ಉದಾಹರಣೆಗಳಿರಬಹುದಾದರೂ ಅವು ಕನ್ನಡ ದಲ್ಲಿ ವ್ಯಾಪಕವಾಗಿಲ್ಲವಾದ್ದರಿಂದ ಅವುಗಳ ಆಧಾರ ಅಷ್ಟಾಗಿ ನಿಲ್ಲದು.

ದ್ರಾವಿಡ ಭಾಷೆಗಳಲ್ಲಾಗಲಿ ಕನ್ನಡದ ಪ್ರಾದೇಶಿಕ ಉಪಭಾಷೆಗಳಲ್ಲಾಗಲಿ ಮಹಾಪ್ರಾಣಗಳ ಬಳಕೆ ಇಲ್ಲ. ಕೇವಲ ಸುಶಿಕ್ಷಿತರ ನುಡಿಯಲ್ಲಿ ಮಾತ್ರ (ಮೂಲತಃ ಕನ್ನಡದಲ್ಲಿ ಸಹಜವಾಗಿಲ್ಲದ ಮಹಾಪ್ರಾಣಗಳು) ಸಂಸ್ಕೃತ-ಪ್ರಾಕೃತ ಭಾಷೆಗಳ ಪ್ರಭಾವದಿಂದ ಸೇರಿಕೊಂಡವು. ಈ ಎಲ್ಲ ಕಾರಣಗಳಿಂದ ಅಚ್ಚ ಗನ್ನಡದಲ್ಲಿ ಮಹಾಪ್ರಾಣಗಳನ್ನು ಸೇರಿಸಲಾಗುವುದಿಲ್ಲ.

ಕನ್ನಡಭಾಷೆ ಅನ್ಯಭಾಷೆಗಳಿಂದ ಸಾಕಷ್ಟು ಶಬ್ದಗಳನ್ನು ಸ್ವೀಕರಿಸಿ ಪರಿ ಪುಷ್ಟವಾಗಿದೆ. ಹಾಗೂ ಬೆಳವಣಿಗೆ ಹೊಂದಿರುತ್ತದೆ. ಈ ನಿಟ್ಟಿನಲ್ಲಿ ಮಡಿ ವಂತಿಕೆಗೆ ಆಸ್ಪದವಿಲ್ಲ. ಮೂಲದಲ್ಲಿ ಇದ್ದಿರಲಿಲ್ಲವೆಂಬ, ವರ್ಣಮಾಲೆ ಬೆಳೆಯುವು ದೆಂಬ, ನಮ್ಮವಲ್ಲವೆಂಬ, ಕಾರಣಗಳಿಂದ ಬಿಡುವುದಕ್ಕಿಂತ ಆಧುನಿಕ ಕನ್ನಡದ ಸಮೃದ್ಧಿಯ ದೃಷ್ಟಿಯಿಂದ ಅವುಗಳನ್ನು ಇಟ್ಟುಕೊಂಡರೆ ಯಾವ ಕೊರತೆಯೂ

ಉಂಟಾಗುವುದಿಲ್ಲ. ಕೇಶಿರಾಜನು ಪ್ರಯೋಗ ಶರಣನಾಗಿ ಮಹಾಪ್ರಾಣಗಳನ್ನು ಹೇಳಿದ್ದಾನೆಯೆಹೊರತು ಶಿಷ್ಟಕನ್ನಡಕ್ಕೆ ಅವು ಹೇಗೆ ಬೇಕು ಎಂಬುದನ್ನು ವಿವೇಚಿಸಲಿಲ್ಲ.

## 4.7 ಅನುನಾಸಿಕಗಳು, ಅನುಸ್ವಾರ, ಬಿಂದು :

ಅನುನಾಸಿಕಗಳ ಉಚ್ಚಾರಕ್ಕೂ ಅನುಸ್ವಾರದ ಉಚ್ಚಾರಕ್ಕೂ ಭೇದವಿದೆ. ಕನ್ನಡದಲ್ಲಿ ಅನುಸ್ವಾರವಿಲ್ಲ. ಆದರೆ ಕೇಶಿರಾಜ ಹಾಗೂ ಅನೇಕ ಪಂಡಿತರು ಅದನ್ನು ಕನ್ನಡದಲ್ಲಿ ಸ್ಥಾಪಿಸಲು ಪ್ರಯತ್ನಿಸಿದ್ದಾರೆ. ಅವರ್ಗೀಯ ವ್ಯಂಜನಗಳ (ಳ್' ಬಿಟ್ಟು) ಹಿಂದೆ ಬರುವ 'ನಾಸಿಕ್ಯ' ಧ್ವನಿ ಅನುಸ್ವಾರವೆನಿಸುತ್ತದೆ. ಉದಾ : ಸಂಯಮ, ಸಂರಕ್ಷಣ, ಸಂಲಗ್ನ, ಸಂವೇದನೆ, ಸಂಶಯ. ಸಂಸಾರ, ಸಂಹಾರ, ಸಂಕ್ಷೇಪ, ಸಂಜ್ಞೆ. ಸಂಸ್ಕೃತದಲ್ಲಿ ಅನುಸ್ವಾರಕ್ಕೆ ಬೆಲೆ ಇದೆ. ವರ್ಗೀಯ ವ್ಯಂಜನಗಳ ಹಿಂದೆ ನಾಸಿಕಧ್ವನಿ ಬಂದರೆ ಅದು ಅನುಸ್ವಾರಕ್ಕಿಂತ ಭಿನ್ನವಾಗಿ ಉಚ್ಚಾರವಾಗುತ್ತದೆ. ಅದನ್ನೇ ಅನುನಾಸಿಕವೆಂದು ಕರೆಯುತ್ತಾರೆ. ಅಂಕ, ಅಂಗ, ಸಂಚಕಾರ, ಕುಂಜರ, ಕಂಠ, ಮಂಡನ, ಕ್ರಾಂತಿ, ಆಕ್ರಂದನ, ಸಂಪೀಡನ, ಕುಂಭ ಈ ಉದಾಹರಣೆಗಳಲ್ಲಿ ಅನುನಾಸಿಕಗಳ ಉಚ್ಚಾರವನ್ನು ಗಮನಿಸಬಹುದು. ವರ್ಗೀಯ, ಅವರ್ಗೀಯ. ವ್ಯಂಜನಗಳ ಹಿಂದಲ್ಲದೆ ಸ್ವರಗಳ ಜೊತೆಗೂ ನಾಸಿಕ್ಯ ಧ್ವನಿ ಸಹೋಚ್ಚಾರಣೆ ಗೊಳ್ಳುವುದನ್ನು ಗಮನಿಸಬೇಕು. ಜೇವು, ಹೂ, ಹಾ, ಹೂಸು, ಮುಂತಾದ ಕನ್ನಡ ಉದಾಹರಣೆಗಳಲ್ಲಿ ಈ ಬಗೆಯ ಉಚ್ಚಾರದ ಬಳಕೆ ಕಡಿಮೆ ಪ್ರಮಾಣದಲ್ಲಿದೆಯಲ್ಲದೆ, ಎಷ್ಟೋ ಸಲ ವಿಕಲ್ಪವೂ ಆಗಿರುತ್ತದೆ. ಆದುದರಿಂದ ಮೂರು ಭಿನ್ನ ಪರಿಸರಗಳಲ್ಲಿ ಬರುವ ನಾಸಿಕ್ಯ ಉಚ್ಚಾರವು ಬೇರೆ ಬೇರೆ ಎಂದಾಯಿತು, ಸಂಸ್ಕೃತದಲ್ಲಿ ಅನುನಾಸಿಕವನ್ನು ಮೊದಲು ಬೇರೆಬೇರೆಯಾಗಿಯೇ ಲಿಪಿಯಲ್ಲಿ ಗುರುತಿಸುತಿದ್ದುದು ಬರಬರುತ್ತ ಸೊನ್ನೆಯನ್ನು ಎರಡಕ್ಕೂ ಬಳಸಲು ಆರಂಭಿಸಿರಬೇಕು. ಅನುನಾಸಿಕ ಹಾಗೂ ಅನುಸ್ವಾರಗಳನ್ನು ಬಿಂದುವಿನ ಸಂಕೇತದ ಮೂಲಕ ಬರಹದ ಸೌಲಭ್ಯಕ್ಕಾಗಿ ಲಿಪಿಯಲ್ಲಿ ಬಳಸಲು ಆರಂಭವಾಗಿರಬೇಕು. ಸಹೋಚ್ಚರಿತ ನಾಸಿಕ್ಯ ಧ್ವನಿಗೆ ಮಾತ್ರ ಬಿಂದುವನ್ನು ಬಳಸುವುದು ರೂಢಿಗತವಾಗಲಿಲ್ಲ.

ವರ್ಗೀಯ ವ್ಯಂಜನಗಳ ಕೊನೆಗೆ ಬರುವ ಸಂಕೇತಗಳನ್ನು ಅನುನಾಸಿಕಗಳಿಗೆ ಮೊದಲು ಪ್ರಾಯಶಃ ಬಳಸಲಾಗುತ್ತಿತ್ತು. ಅಂತೆಯೇ ಅವುಗಳನ್ನು ಉಚ್ಚರಿಸಲಾಗುತ್ತಿತ್ತು.

ಉದಾ : ಶಾಙ್ಗ , ಕಣ್ಡೆ ಅಞ್ಚೆ, ಅಙ್ಕಿ, ಅಮ್ಬು

ಬಿಂದುವನ್ನು ಅನುಸ್ವಾರಗಳಿಗೆ ಮಾತ್ರ ಮೊದಲು ಬಳಸಲಾಗುತ್ತಿರಬೇಕು. ಅನಂತರ ಅನುನಾಸಿಕಗಳ ಉಚ್ಚಾರ ಹಾಗೇ ಉಳಿದು ಲಿಪಿಯಲ್ಲಿ ಮಾತ್ರ ಬಿಂದು ಕಾಣಿಸಿಕೊಳ್ಳಲಾರಂಭಿಸಿತು. ಆದ್ದರಿಂದ ಮೊದಲಿದ್ದ ಲಿಪಿ ಸಂಕೇತಗಳಿಗೆ ಎಲ್ಲಕ್ಕೂ ಸಾಮಾನ್ಯವಾದ ಬಿಂದುವಿನ ಸಂಕೇತದ ಬಳಕೆ ಆರಂಭವಾಗಿ ಬಿಂದುವು ಸಂಕೇತಗಳ ಸಂಕೇತವೆನಿಸಿತು.

ಕೇಶಿರಾಜನು ಬಿಂದುವನ್ನು ಬಹಳ ಸ್ಥೂಲವಾಗಿ ವಿವರಿಸಿದ್ದಾನೆ. ಬಿಂದುವನ್ನು ಅವನು

"ಬಿಂದುವನುಸ್ವಾರಂ ತಾ
ನೆಂದಕ್ಕುಂ ಸೊನ್ನೆ ಮುತ್ತುವೋಲ್ ವೃತ್ತತೆಯಿಂ
ಸಂದಿರ್ಪುದು...... ,, (ಸೂ, ೨೧)

ಎಂಬುದಾಗಿ ಹೇಳಿ ಇದೇ ಸೂತ್ರದ ವೃತ್ತಿಯಲ್ಲಿ–

"ಬಿಂದುವೆಂದುಂ ಅನುಸ್ವಾರಮೆಂದುಂ ಸೊನ್ನೆಗೆ ಪೆಸರ್, ಬಿಡುಮುತ್ತಂ ಪೋಲ್ತು, ಬಟ್ಟಿತ್ತಾಗಿರ್ಪುದರಿಂ, ಶೂನ್ಯಶಬ್ದದಪಭ್ರಂಶವಾಗಿಯುಂ ಕನ್ನಡದೊಳ್ ಸೊನ್ನೆಯೆಂದಾಯ್ತು; ಬಿಂದುವಿನಂತಿರ್ಪುದರಿಂ ಬಿಂದುವೆಂದಾಯ್ತು, ಬಿಂದು ಸ್ವರೂಪಂ—ಂ."

ಈ ರೀತಿಯಾಗಿ ಬಿಂದುವಿನ ಆಕಾರ, ಸ್ವರೂಪ ವಿವರಿಸಿದ್ದಾನೆ. ಬಿಂದು ಹಾಗೂ ಅನುಸ್ವಾರಗಳಲ್ಲಿ ಅಭೇದವನ್ನು ಸೂಚಿಸಿದ್ದಾನೆ. ಆದ್ದರಿಂದ ಕೇಶಿರಾಜನು ಅದರ ಭೌತಿಕ ಆಕಾರಕ್ಕೆ ಹೆಚ್ಚು ಗಮನ ನೀಡಿರುವಂತೆ ತೋರುತ್ತದೆ. ಆದರೆ ಇನ್ನೆರಡು ಸೂತ್ರಗಳಲ್ಲಿ ಅದರ ಉಚ್ಚಾರದ ಬಗೆಗೆ–

ಸ್ವರಪರದೊಳಿರ್ಪ ಕತದಿಂ
ದುರುಮುಖ್ಯೋಚ್ಚಾರಣಕ್ಕೆ ಬಾರದ ಕತದಿಂ
ಪರಿಕಿಸೆ ಬಿಂದು ವಿಸರ್ಗಂ
ಸ್ವರಾಂಗಮುಂ ವ್ಯಂಜನಾಂಗಮುಂ ತಾವೆಂಬರ್ (ಸೂ. ೨೨)

ಮಕಾರದ ಪರದೊಳ್ ವ್ಯಂ
ಜನಮಿರ್ದೊಡಮಿಲ್ಲದೊಡಮನುಸ್ವಾರಂ ಸಂ
ಜನಿಯಿಪುದು ವರ್ಗಮಿದಿರಿರೆ
ತನಗೆ ವಿಕಲ್ಪದೆ ತದೀಯ ಪಂಚಕಮಕ್ಕುಂ (ಸೂ. ೧೭೨)

ಎಂದು ಹೇಳಿ ಇದಕ್ಕೆ ಉಚ್ಚಾರಣೆಯಲ್ಲಿ ಸ್ವತಂತ್ರ ಸ್ಥಾನವಿಲ್ಲವೆಂಬುದನ್ನು ಹಾಗೆಯೆ ಸ್ವರದ ಮುಂದೆ ಬರುವ ಪರಿಸರವನ್ನು ಗುರುತಿಸಿದ್ದಾನೆ. ವ್ಯಂಜನದ ಲಕ್ಷಣ ಹೊಂದಿರುವುದೂ ಸ್ವರದ ಪರದಲ್ಲಿ ಬರುವುದೂ ಇದರ ವೈಶಿಷ್ಟ್ಯವೆಂದು ಹೇಳಿದ್ದಾನೆ. ಕೇಶಿರಾಜನ ಕಾಲದಲ್ಲಿ ಬಿಂದುವಿನ ಉಚ್ಚಾರ ಶಬ್ದಮಧ್ಯದಲ್ಲಿ ಮುಂದೆ ಬರುವ ವ್ಯಂಜನ ವರ್ಗದ ಅನುನಾಸಿಕವೇ ಆಗಿತ್ತೆಂಬುದು ಅವನು ನೀಡಿರುವ ಈ ಉದಾಹರಣೆಯಿಂದ ಸ್ಪಷ್ಟವಾಗುತ್ತದೆ.

ಬಿಜ್ಕಮೆಬ್ಬೆತ್ತೆಸೆವಞ್ಚಿಯ
ಸಙ್ಕುಳಮಂ ತೊಣ್ಡುಗೆಡೆಪ ಶುಕಸಾರಿಕೆಯುಂ
ಸೋಙ್ಕಿ ಬಲವನ್ದು ತೀಡುವ
ತೆಙ್ಕಣಗಾಳಿಯುಮುವೇಂ ಮನಙ್ಗೊಳಿಸಿದುವೋ

ಕೆಲವು ವ್ಯಾಕರಣಕಾರರು ಸ್ವರಗಳಲ್ಲಿ ಬಿಂದುವನ್ನು ಸೇರಿಸುತ್ತಾರೆ. ಮತ್ತೆ ಕೆಲವರು ಯೋಗವಾಹಗಳಲ್ಲಿ ಸೇರಿಸುತ್ತಾರೆ ಎಂದು ಹೇಳಿ ೨೭ನೆಯ ಸೂತ್ರದಲ್ಲಿ ತಾನೇ ಬಿಂದುವನ್ನು ಯೋಗವಾಹಗಳಲ್ಲಿ ಒಂದೆಂದು ಪಟ್ಟಿಮಾಡಿದ್ದಾನೆ.

ಙ್, ಞ್, ನ್, ಮ್ ಇವುಗಳನ್ನು ಅನುನಾಸಿಕಗಳೆಂದು ಹೇಳಿ ಯ್, ವ್, ಲ್ ಇವು ಅನುನಾಸಿಕಗಳೂ, ನಿರನುನಾಸಿಕಗಳೂ ಆಗುತ್ತವೆಂದಿದ್ದಾನೆ. ಕೇಶಿರಾಜನ ಈ ಎಲ್ಲ ವಿಚಾರಗಳನ್ನು ಪರಿಶೀಲಿಸಿದರೆ ಕನ್ನಡದಲ್ಲಿಯ ಬಿಂದುವಿನ ಸ್ವರೂಪ ಅವನಿಗೆ ಅಷ್ಟು ಸ್ಪಷ್ಟವಾಗಿಲ್ಲ ಎನ್ನುವುದು ಸ್ಪಷ್ಟವಾಗುತ್ತದೆ. ಬಿಂದು ಅನುಸ್ವಾರ ಒಂದೇ ಎನ್ನುವಲ್ಲಿ ಪ್ರಥಮತಃ ಎಡವಿದ್ದಾನೆ. ಯ್, ವ್, ಲ್ ಗಳ ಹಿಂದೆ ಬರುವ ಸ್ವರದೊಡನೆ ಸಹೋಚ್ಚಾರಣೆಯಾಗಿ ಬರುವ ನಾಸಿಕ್ಯ ಧ್ವನಿಯನ್ನು ಅನುನಾಸಿಕವೆಂದು ತಪ್ಪಾಗಿ ಗ್ರಹಿಸಿದ್ದಾನೆ. ಮ್, ನ್ ಕಾರದ ಮುಂದೆ

ವ್ಯಂಜನವಿರಲಿ ಇಲ್ಲದಿರಲಿ ಅನುಸ್ವಾರ ಹುಟ್ಟುತ್ತದೆ ಎಂಬ ಅವನ ಅಭಿಪ್ರಾಯ ದಿಂದ ಏನೊಂದೂ ಸ್ಪಷ್ಟವಾಗುವುದಿಲ್ಲ. ಮತ್ತೊಂದೆಡೆಗೆ ಕೇಶಿರಾಜನು ಕನ್ನಡದಲ್ಲಿ ವಲ್ಲಿ ಸ್ವಭಾವದಿಂದ ನಿತ್ಯ ಬಿಂದುಗಳು ಇರುವ ೬೪ ಪದಗಳ ಪಟ್ಟಿಯನ್ನು ನೀಡಿ ದ್ದಾನೆ (ಸೂ. ೪೬). ಆದರೆ ಆಧುನಿಕ ಕನ್ನಡದಲ್ಲೀಗ ಅವು ಅಬಿಂದುಕಗಳಾಗಿವೆ. ಬಿಂದು ಕೇಶಿರಾಜನ ಕಾಲಕ್ಕಾಗಲೆ ಅನೇಕ ಪದಗಳಲ್ಲಿ ಲೋಪವಾಗತೊಡಗಿ ತ್ತೆಂಬುದಕ್ಕೆ ಅವನೇ ಕೊಟ್ಟ ೧೮ ಉದಾಹರಣೆಗಳು (ಇಬುಂಪೆ–ಇಬುಪೆ, ನೊರಂಜು–ನೊರಜು ಇತ್ಯಾದಿ) ಸಾಕ್ಷಿಯಾಗಿವೆ. ಒಟ್ಟಿನಲ್ಲಿ ಅನುನಾಸಿಕಗಳನ್ನು ಸಂಕೇತಿಸುವ ಬಿಂದುವಿನ ಸ್ವರೂಪದ ಸ್ಪಷ್ಟ ಕಲ್ಪನೆ ಕೇಶಿರಾಜನಿಗಿದ್ದಿಲ್ಲ,

ಭಟ್ಟಾಕಳಂಕನ ಶಬ್ದಾನುಶಾಸನದಲ್ಲಿ ಬಿಂದು, ಅನುಸ್ವಾರಗಳನ್ನು ಯೋಗ ವಾಹಗಳಲ್ಲಿ ಸೇರಿಸಲಾಗಿದೆ. ಇತರ ಧ್ವನಿಘಟಕಗಳ ಯೋಗ (ಸಂಬಂಧ) ದಿಂದ ಮಾತ್ರ ಬಳಕೆಗೊಳ್ಳುವಂಥವು (ವಾಹಕಗಳು) ಯೋಗವಾಹಗಳೆಂದು ಅಂದರೆ ಪರಾವಲಂಬಿಯಾಗಿರುವಂತಹುಗಳೆಂದು ಅವನು ಹೇಳಿದ್ದಾನೆ. ಆದರೆ ಪಾಣಿನಿ ಇವುಗಳನ್ನು ಅಯೋಗವಾಹಗಳೆನ್ನುತ್ತಾನೆ. 'ಅಯೋಗವಾಹಗಳೆಂದರೆ ಯಾವ ವರ್ಣದಲ್ಲಿಯೂ ಅಂತರ್ಭಾವವನ್ನು ಹೊಂದದೆ ಪ್ರಯೋಗ ಮಾತ್ರದಲ್ಲಿದ್ದು ಶಬ್ದಗಳ ಸಾಧುತ್ವವನ್ನು ಬೋಧಿಸುವಂತಹವು. ಯೋಗವಾಹಗಳಲ್ಲಿ ೧. ಜಿಹ್ವಾ ಮೂಲೀಯ (ᳵಕ), ೨. ಉಪಾಧ್ಮಾನೀಯ (ᳶಪ), ೩. ಬಿಂದು, (ಂ), ೪. ವಿಸರ್ಗ (ಃ) ಇವಿಷ್ಟನ್ನು ಕೇಶಿರಾಜ ಸೇರಿಸಿದ್ದಾನೆ.

ಸಂಸ್ಕೃತ ಭಾಷೆಯ ದೃಷ್ಟಿಯಿಂದ ಬಿಂದುವಿನ ಬದಲಾಗಿ ಅನುಸ್ವಾರವೇ ಈ ಯೋಗವಾಹಗಳಲ್ಲಿ ಸೇರಬೇಕು. ಬಿಂದುವು ಅದನ್ನು ಆಕ್ರಮಿಸಿಕೊಂಡಿದೆ. ಕನ್ನಡದಲ್ಲಿ ಈ ಯೋಗವಾಹಗಳಲ್ಲಿ ಯಾವುವೂ ಇಲ್ಲ. ಬಿಂದು ಕನ್ನಡ ಭಾಷೆ ಯಲ್ಲಿ ವಿಶಿಷ್ಟ ಸ್ಥಾನವನ್ನೇ ಪಡೆದಿರುವುದನ್ನು ಈ ಮೊದಲು ಪರಿಶೀಲಿಸ ಲಾಗಿದೆ. ದ್ರಾವಿಡಭಾಷೆಗಳಲ್ಲಿ ಇಲ್ಲದಿರುವ ಅನುಸ್ವಾರ ಕನ್ನಡದಲ್ಲಿಯೂ ಸಹಜವಾಗಿ ಇಲ್ಲ. ಆದುದರಿಂದ ಬಿಂದು ಅನುನಾಸಿಕಗಳ ಉಚ್ಚಾರಕ್ಕೆ ಮಾತ್ರ ಸಂಬಂಧಿಸಿರುವುದು ಎಂಬುದನ್ನು ಗಮನದಲ್ಲಿಟ್ಟರೆ ಅದರ ಸ್ವರೂಪ ಸ್ಪಷ್ಟ ವಾಗುತ್ತದೆ. ವಿಸರ್ಗದ ಬಗೆಗೆ 'ನಿಸರ್ಗ ಮಾಗಿ ವಿಸರ್ಗ ವಿಲ್ಲ' ಎಂದುದನ್ನು ಮರುಮಾತಿಲ್ಲದೆ ಒಪ್ಪಿಕೊಳ್ಳಬೇಕು. ಇನ್ನು ᳵಕ' ᳶಪ ಇವೂ ಕನ್ನಡದವುಗಳಲ್ಲ.

೫

## ಕನ್ನಡ ಸಂಧಿಗಳು

5.0 ಎರಡು ಅಥವಾ ಹೆಚ್ಚು ಪದ ಅಥವಾ ಪದದೊಡನೆ ಪ್ರತ್ಯಯಗಳನ್ನು ತೀವ್ರಗತಿಯಲ್ಲಿ ಉಚ್ಚರಿಸುವುದೆ ಸಂಧಿ. ಹೀಗೆ ಸಂಧಿ ಮಾಡಿ ಉಚ್ಚರಿಸುವಾಗ ವರ್ಣಗಳ ಲೋಪ, ಆಗಮ, ಆದೇಶಗಳಾಗುತ್ತವೆ. ಸಂಧಿಯಲ್ಲಿ–
೧. ಪದ+ಪದ, ೨, ಪದ+ಪ್ರತ್ಯಯ, ೩. ಪ್ರಕೃತಿ+ಪ್ರಕೃತಿ ೪. ಪ್ರಕೃತಿ+ಪ್ರತ್ಯಯ ಈ ರೀತಿಯಾಗಿ ಕೂಡುವಿಕೆ ನಡೆಯಬಹುದು. ಸಂಧಿ ನಡೆದಾಗ ಸ್ವರ ಇಲ್ಲವೆ ವ್ಯಂಜನಗಳಲ್ಲಿ ಬದಲಾವಣೆಗಳು ಆಗುತ್ತವೆ. ಸ್ವರದ ಮೇಲೆ ನಡೆಯುವ ಸಂಧಿಯನ್ನು ಸ್ವರಸಂಧಿಯೆಂದೂ ವ್ಯಂಜನದ ಮೇಲೆ ನಡೆಯುವ ಸಂಧಿಯನ್ನು ವ್ಯಂಜನಸಂಧಿ ಎಂದೂ ಸಾಮಾನ್ಯವಾಗಿ ಹೇಳುತ್ತಾರೆ. ಕೇಶಿರಾಜನು 'ಎರಡುಂ ಪಲವುಂ ವರ್ಣಂ ಪರಸ್ಪರ ಕೂಡುವಂದಮದು ಸಂಧಿವಲಂ' ಎಂದು ಸಂಧಿಯನ್ನು ಕುರಿತು ಹೇಳಿದ್ದಾನೆ. ಆದರೆ ಈ ವ್ಯಾಖ್ಯೆ ಅಸ್ಪಷ್ಟವಾಗಿದೆ. ಎರಡು ಅಥವಾ ಹಲವು ವರ್ಣಗಳು ಸೇರುವುದೇ ಸಂಧಿ ಎಂದರೆ ಯಾವುದೇ ವರ್ಣ ಯಾವ ಬೇಕಾದ ವರ್ಣದೊಡನೆ ಕೂಡಬಹುದೆ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವಿಲ್ಲ. ಕೇಶಿರಾಜ ಪದಮಧ್ಯ ಮತ್ತು ಪದಾಂತ್ಯ ಎಂಬ ಎರಡು ಪ್ರಕಾರಗಳನ್ನು ಸಂಧಿಯಲ್ಲಿ ಹೇಳುತ್ತಾನೆ. ಪದ+ಪದ⟶ಪದಾಂತ್ಯ ಅವನ+ಆಳ್ತನಂ, ಕಾಮನ+ಅಂಡಲೆ; ಪ್ರಕೃತಿ+ಪ್ರತ್ಯಯ⟶ಪದಮಧ್ಯ ಮಾತು+ಅಂ, ನುಡಿದ+ಅಂ ಹೀಗೆ ಉದಾಹರಿಸಿದ್ದಾನೆ.

5.1 ನಾಮರೂಢಿಯಟೀಯದ ಪಕ್ಷದಲ್ಲಿ ಸ್ವರದ ಮುಂದೆ ಸ್ವರ ಬಂದಾಗ ಸ್ವರಲೋಪ (ಸೂ.೬೨) ಆಗುತ್ತದೆಂದೂ ಸೂ,೬೩., ೬೪ ಇವುಗಳಲ್ಲಿ 'ಯ' ಕಾರಾಗಮ ಸಂಧಿಯನ್ನೂ ಹೇಳಿದ್ದಾನೆ. ಆ, ಇ, ಈ, ಓ, ಐ, ಎ, ಏ ಇವುಗಳ ಮುಂದೆ ಮತ್ತೊಂದು ಸ್ವರ ಬಂದರೆ ಅಥವಾ ಅವಧಾರಣೆಯ ಸ್ವರ ಪರವಾದರೂ 'ಯ್' ಆಗಮವಾಗುತ್ತದೆ ಅಲ್ಲದೆ ಸಂಸ್ಕೃತ ಕನ್ನಡದ ಪ್ರಕೃತಿಗಳಿಗೆ

'ಇಸು' ಪ್ರತ್ಯಯ ಪರವಾದಾಗ 'ಯ್' ಆಗಮವೆನ್ನುತ್ತಾನೆ. ಉ, ಊ, ಋ, ೠ, ಓ, ಔ, ಇ, ಈ ಸ್ವರಗಳ ಮುಂದೆ ಸ್ವರ ಬಂದರೆ 'ವ್' ಕಾರಾಗಮವೆಂದು ಹೇಳುತ್ತಾನೆ. ಆದರೆ ಅವನು ನೀಡಿರುವ ಉದಾಹರಣೆಗಳಲ್ಲಿ ಕೆಲವು ಮೂಲತಃ ಕನ್ನಡದವು ಅಲ್ಲವೇ ಅಲ್ಲ (ಉದಾ: ಋೂಪೆಂದ, ಗೌವಂ, ಇತ್ಯಾದಿ) ಅನಂತರ (ಸೂ.೬೬ರಿಂದ೭೪) ಸಂಧಿ ಎಲ್ಲಿ ಆಗುವುದಿಲ್ಲ ಅಥವಾ ಮಾಡಬಾರದು, ಎಲ್ಲಿ ವಿಕಲ್ಪ ಎಂಬುದನ್ನೆಲ್ಲ ವಿವರಿಸುತ್ತ ಸಾಗುತ್ತಾನೆ.

ಗದಬಾದೇಶ, ಪ್ > ವ್, ಸ್ > ಚ್ ಬದಲಾವಣೆಗಳ ಸಂಧಿಗಳನ್ನು (ಸೂತ್ರ ೭೫ ರಿಂದ ೭೮) ವಿವರಿಸಿ ಣಳಯಲಗಳು ದ್ವಿತ್ವವಾಗುವ ಸಂಧಿಯೊಂದನ್ನು ಪ್ರತ್ಯೇಕವಾಗಿ ಹೇಳಿರುವನು. ಆದರೆ ವ್ಯಂಜನಾಂತ ಪದಗಳು ಸ್ವರಾಂತವಾಗುವಲ್ಲಿ ಈ ಬಗೆಯ ದ್ವಿತ್ವ ಕನ್ನಡದ ಸಹಜ ರೀತಿಯೇ ಆಗಿದೆ. ಕಣ್ > ಕಣ್ಣು, ಮಣ್ > ಮಣ್ಣು, ತಿನ್ > ತಿನ್ನು, ಬಯ್ > ಬಯ್ಯು, ಕೊಯ್ > ಕೊಯ್ಯು, ಕಲ್ > ಕಲ್ಲು ಇವುಗಳನ್ನು ಗಮನಿಸಿರುವುದು ಉಚಿತವೇ ಆಗಿದೆ. ಮುಂದೆ (ಸೂ.೮೦-೮೧) ದ್ವಿತ್ವ ಎಲ್ಲಿ ಇಲ್ಲ ಹಾಗೂ ಎಲ್ಲಿ ನಿತ್ಯ ಎಂಬುದನ್ನು ವಿವರಿಸಿದ್ದಾನೆ.

ಸಂಧಿ ಎಂಬ ಪ್ರಕರಣದಡಿಯಲ್ಲಿ ೭೧ ಸೂತ್ರಗಳ ಸುದೀರ್ಘ ವಿವರಗಳಿದ್ದರೂ ನಿಜವಾಗಿ ಸಂಧಿ ಪ್ರಕ್ರಿಯೆಗೆ ನೇರವಾಗಿ ಸಂಬಂಧಿಸಿರುವ ಒಟ್ಟು ಸೂತ್ರಗಳೆಂದರೆ ಕೇವಲ ೨೨ ಮಾತ್ರ. ಪೀಠಿಕಾಪ್ರಕರಣ ಮುಗಿದು ಸಂಧಿಪ್ರಕರಣ ಆರಂಭವಾಗುವುದು ೬೨ನೆಯ ಸೂತ್ರದಿಂದಾದರೂ ನಿಜವಾಗಿ ಸಂಧಿಗಳ ಬಗೆಗೆ ವಿವರಣೆ ೫೯ನೆಯ ಸೂತ್ರದಿಂದ ಆರಂಭವಾಗುತ್ತದೆ. ೫೮ ನ ವರೆಗಿನ ವಿಷಯಗಳು ಸಂಜ್ಞಾವಿಭಾಗಕ್ಕೆ ಸಂಬಂಧಿಸಿದ್ದು, ಸಂಧಿ ಪ್ರಕರಣದಲ್ಲಿ ಸೇರಿಸಲಾಗಿದೆ.

ಸಂಧಿಗೆ ಸಂಬಂಧಿಸಿದ ಅನೇಕ ಅಂಶಗಳನ್ನು ನಾಮ, ಸಮಾಸ ಹಾಗೂ ಆಖ್ಯಾತ ಪ್ರಕರಣಗಳಲ್ಲಿ ಅಲ್ಲಲ್ಲಿ ವಿವರಿಸಲಾಗಿದೆ. ಉದಾಹರಣೆಗೆ ದ್ವಿತ್ವ ಸಂಧಿ ವಿಚಾರ ನಾಮ ಪ್ರಕರಣದ ೧೪೯ನೆಯ ಸೂತ್ರದಲ್ಲಿ ಬಂದಿದೆ. ವ್ಯಂಜನ ಲೋಪ ಹಾಗೂ ಇತರ ಸಂಧಿ ವಿಚಾರಗಳು ಸಮಾಸ ಪ್ರಕರಣದ ೧೧೮ ರಿಂದ ೧೯೫, ಆಖ್ಯಾತ ಪ್ರಕರಣದ ೨೪೩ ರಿಂದ ೨೪೫ ಸೂತ್ರಗಳಲ್ಲಿ ವಿವರಿಸಿದ್ದಾನೆ.

ಧಾತು ಪ್ರಕರಣ ಬರೀ ಪಟ್ಟಿಯಾಗಿದ್ದರೆ ಅಪಭ್ರಂಶ ಪ್ರಕರಣದಲ್ಲಿ ಸಂಸ್ಕೃತ ಭಾಷಾ ಶಬ್ದಗಳು ಹೇಗೆ ಕನ್ನಡದಲ್ಲಿ ನಿಲ್ಲುತ್ತವೆ ಎಂಬುದನ್ನು ಹೇಳುವಾಗ ಆನುಷಂಗಿಕವಾಗಿ ವರ್ಣ ಬದಲಾವಣೆಯನ್ನು ಸೂಚಿಸಲಾಗಿದೆ.

ಒಟ್ಟಿನಲ್ಲಿ ಕೇಶಿರಾಜನು ಕನ್ನಡದಲ್ಲಿಯ ಸಹಜಸಂಧಿಪ್ರಕ್ರಿಯೆಗಿಂತ ಸಂಸ್ಕೃತ ಕನ್ನಡದ ಸಂಧಿ ಪ್ರಕ್ರಿಯೆಗೆ (ವರಸಂಸ್ಕೃತ ಕರ್ಣಾಟಕಮೆರಡಱೊಳಂ) ಹೆಚ್ಚಿನ ಗಮನವನ್ನು ಕೇಂದ್ರೀಕರಿಸಿದ್ದಾನೆ. ವ್ಯವಸ್ಥಿತವಾದ ರೀತಿಯಲ್ಲಿ ಅವನ್ನೆಲ್ಲ ಒಂದೆಡೆಗೆ ವಿವರಿಸಿಲ್ಲ. ಆದರೆ ಅವನು ನೀಡಿರುವ ವಿಪುಲ ಉದಾಹರಣೆಗಳು ಗ್ರಂಥಸ್ಥಭಾಷೆಯಲ್ಲಿದ್ದ ಅವನ ಪರಿಣತಿ ಹಾಗೂ ಕೆಲವೆಡೆ ಅವನು ತೋರಿರುವ ಸೂಕ್ಷ್ಮ ನಿರೀಕ್ಷಣಾ ಚಾಕಚಕ್ಯತಾಬುದ್ಧಿ ಮೆಚ್ಚುವಂತಹವು.

5.2 ಕೇಶಿರಾಜನು ನಿರೂಪಿಸಿರುವ ಸಂಧಿಗಳ ಕೆಲವು ವಿಚಾರಗಳನ್ನು ಇಲ್ಲಿ ಗಮನಿಸಬಹುದು—

5.2.1 **ಸ್ವರಸಂಧಿಗಳು** :



5.2.1.1 **ಲೋಪಸಂಧಿ**

ವಿಭಕ್ತಿ ಅಥವಾ ಪ್ರಕೃತಿ ಸ್ವರದ ಮುಂದೆ ಸ್ವರ ಪರವಾದಾಗ ಆ ವಿಭಕ್ತಿ ಅಥವಾ ಪ್ರಕೃತಿಸ್ವರ ಲೋಪವಾಗುತ್ತದೆ (ಸೂ. ೬೨).

ಬುಧ+ಅರ್– ಬುಧರ್. ಈಶ್ವರನ+ಒಲವು– ಈಶ್ವರನೊಲವು

ಈ ಬಗೆಯ ಸಂಧಿಗಳು ಸಂಸ್ಕೃತ ಕನ್ನಡ ಎರಡರಲ್ಲೂ ನಾಮರೂಢಿಯುಳಿಯದ ಸಂದರ್ಭಗಳಲ್ಲಿ ನಡೆಯುತ್ತವೆ. ನಾಮರೂಢಿಯುಳಿಯದ ಪಕ್ಷ ಎಂದು ಕೇಶಿರಾಜ ಹೇಳಿದ್ದರೂ ಮಹಾಕವಿಗಳು ಬಳಸಿದ 'ಸೇಸಿಕ್ಕಿದಂ' ಎಂಬಲ್ಲಿ 'ಸೇಸೆ' ಪದದ 'ಎ' ಕಾರ ಲೋಪ ನಾಮರೂಢಿಗೆ ವಿರುದ್ಧವೆನಿಸಿದರೂ ಮಹಾಕವಿ ಪ್ರಯೋಗವೆಂದು ಮೆತ್ತಗೆ ಒಪ್ಪಿಕೊಂಡುಬಿಟ್ಟಿದ್ದಾನೆನಿಸುತ್ತದೆ.

5.2.1.2 **ಆಗಮ ಸಂಧಿ**

5.2.1.2.1 **'ಯ್' ಆಗಮ** :– ಆ, ಇ, ಈ, ಓ, ಐ, ಎ, ಏ ಇವುಗಳಿಗೆ ಸ್ವರಪರವಾದರೆ 'ಯ್' ಆಗಮವೆನ್ನುತ್ತಾನೆ. (ಸೂ. ೬೩) ಉದಾ : ಆಯಿರ್ದ, ಕಲಿಯಾರ್, ಈಯಲ್, ಜೋಯೆಂದು, ಸೈಯೆಂದಂ, ಪಸೆಯಿರ್ದಂ, ಮೇಯಿಸಿದಂ, ಆತನಯೆ, ಪೂರಯಿಸಿದಂ, ಮೇಳಯಿಸಿದಂ, ಬಲಿಯಂ.

5.2.1.2.2 **'ವ್' ಆಗಮ** :– ಉ, ಊ, ಋ, ೠ, ಓ, ಔ **ಗಳಿಗೆ** ಸ್ವರಪರವಾದರೆ ವ್ ಆಗಮವೆನ್ನುತ್ತಾನೆ. (ಸೂ. ೬೫) ಉದಾ : ಮನುವಿನ, ಪೂವಿನ, ಹೋತೃವೆ, ಋೂವೆಂದಂ, ಗೋವಿನ, ಗೌವಂ.

'ಯ್' 'ವ್' ಆಗಮಗಳು ಕನ್ನಡದಲ್ಲಿ ಬರದೆಯೂ ಇರಬಹುದು ಎನ್ನುತ್ತಾನೆ. ಉದಾ : ಒತ್ತಿ+ಇಟ್ಟ– ಒತ್ತಿಟ್ಟ, ಮಾತು+ಎಲ್ಲ– ಮಾತೆಲ್ಲ.

### 5.2.2 **ವಿಸಂಧಿ, ವಿಕಲ್ಪ ಸಂಧಿಗಳು**

ಸಂಧಿಯಾಗಬೇಕಾದಲ್ಲಿ ಸಂಧಿಯಾಗದೆ ಇರುವುದು ವಿಸಂಧಿ. ಸಂಧಿ ಆಗಿಯೂ ಆಗದೆ ಇದ್ದು ಎರಡೂ ಸ್ವೀಕೃತವಾದರೆ ಅದು ವಿಕಲ್ಪ. ಇದು ದೋಷವಲ್ಲವೆನ್ನುವುದು ಕೇಶಿರಾಜನ ಮತವೆಂದು ಕಾಣುತ್ತದೆ. ಒತ್ತಿಟ್ಟಂ–ಒತ್ತೆಯಿಟ್ಟಂ ಎಂಬುದು ವಿಕಲ್ಪ. 'ಕರೆ' ಎಂಬ ಶಬ್ದಕ್ಕೆ 'ಅಲ್' 'ಇಲ್' ಶಬ್ದಕ್ಕೆ 'ಅದೆ' ಪರವಾದರೆ ಕರೆಅಲ್, ಇರಅದೆ ಎಂದು ಬರೆದಲ್ಲಿ ವಿಸಂಧಿ. ಇದೇ ರೀತಿ ವಾಕ್ಯವೇಷ್ಟನ, ಅನುಕರಣಗಳಲ್ಲಿಯೂ ವಿಸಂಧಿ ತಪ್ಪಲ್ಲ.೧

ಇನ್ನು ಕೆಲವೆಡೆ ಸಂಧಿ ಘಟಿಸದು. ಕೇಶಿರಾಜನು ನಿಪಾತ, ಅವಧಾರಣೆ ವಿಶಂಕೆ, ಮೆಚ್ಚು, ಆಕ್ಷೇಪ, ಎಮ ಎಂಬ ಅಂಗೀಕಾರ ಅರ್ಥದಲ್ಲಿ, ಗಡಾ ಎಂಬ ಪ್ರಯೋಗದಲ್ಲಿ, ಖೇದ ಸೂಚನೆಯಲ್ಲಿ ಸಂಧಿ ಮಾಡಬಾರದು ಎಂದು ಹೇಳುತ್ತಾನೆ. ಇದಲ್ಲದೆ ಪೊಱ, ಒಳ, ಪೊಸ, ಪೞ, ಎೞ ಎಂಬವುಗಳ ಪರದಲ್ಲಿ ಸ್ವರದಿಂದ ಆರಂಭವಾಗುವ ಪದ ಇದ್ದರೂ ಸಂಧಿ ಆಗುವುದಿಲ್ಲ ಎಂದಿದ್ದಾನೆ. ಶ್ರುತಿಕಷ್ಟ, ಶ್ರುತಿದುಷ್ಟ, ಅಸಹ್ಯೋಕ್ತಿಗಳುಂಟಾಗುವಲ್ಲಿ ಸಂಧಿ ಕೂಡದು ಎನ್ನುತ್ತಾನೆ. ಸಂಧಿ ಆಗದೆಡೆಗಳಲ್ಲಿ ಸಂಧಿಯನ್ನು ಮಾಡುವುದು ಸಂಧಿ ದೋಷವಾಗುತ್ತದೆನ್ನುವುದನ್ನು ಅವನು ಸೂಚಿಸಿದ್ದಾನೆ.

### 5.2.3 **ವ್ಯಂಜನ ಸಂಧಿಗಳು**

ಪದ+ಪದ, ಪದ+ಪ್ರತ್ಯಯ, ಪ್ರಕೃತಿ+ಪದ, ಪ್ರಕೃತಿ+ಪ್ರತ್ಯಯ ಹೀಗೆ ಸೇರಿ ಸಂಧಿಯಾಗುವಲ್ಲಿ ವ್ಯಂಜನ ಬದಲಾವಣೆಗೊಂಡರೆ ವ್ಯಂಜನ ಸಂಧಿ ಎನ್ನುತ್ತಾರೆ.

---

೧. ಕೆ. ಕುಶಾಲಪ್ಪಗೌಡ (೧೯೮೬) ಪುಟ ೮೫.

### 5.2.3.1 ಗದಬಾದೇಶ ಸಂಧಿ

ಉತ್ತರ ಪದಗಳಲ್ಲಿಯ ಕ್, ತ್, ಪ್ ಗಳಿಗೆ ಗ್, ದ್, ಬ್ ಗಳು ಆದೇಶವಾಗುತ್ತವೆ— ಪಟಿಗನ್ನಡ, ಮೇಲ್ದುಟಿ, ಕಣ್ಬೊಲ.

ಕೆಲವೆಡೆ ಈ ಸಂಧಿ ನಡೆಯದಿರುವ ಉದಾಹರಣೆಗಳಿವೆ—

ಬೆಸೆಕೋಲ್, ಮಾರ್ಕಟ್ಟಳೆ, ಕಾಟ್ಕಿಚ್ಚು.

'ಪ್' ಕಾರ 'ವ್' ಕಾರ ಹಾಗೂ 'ಬ' ಕಾರವಾಗುವುದು.

ಕನ್ನಡವಕ್ಕಿ, ಎಳವೆಱೆ, ಆಡುಂಬೊಲಂ, ಪೆಸರಂಬಡೆದಂ.

'ಸ್' ಕಾರವು ಚ್, ಜ್, ಛ್ ಕಾರವಾಗುವುದು

ನುಣ್ಚರ, ಮುಂಜೆಜಿಂಗು, ನೂರ್ಛಾಸಿರ.

'ತ್' ಕಾರ 'ದ್' ಕಾರವಾಗುವುದು

ಬಳೆದೊಟ್ಟಂ. ಬಾಯ್ದೆಱೆ.

'ಬ್' ಕಾರ, 'ಮ್' ಕಾರಗಳು 'ವ್' ಕಾರವಾಗುವುದು.

ಎಳವಳ್ಳಿ, ಬಿಡುವಾಯ್, ಮೆಲ್ವಾತು, ನಾಲ್ವಡಿ.

### 5.2.3.2 ದ್ವಿತ್ವಸಂಧಿ

ಹ್ರಸ್ವದಿಂದೊಡಗೂಡಿದ ಏಕಾಕ್ಷರ ಶಬ್ದಕ್ಕೆ ಸ್ವರ ಪರವಾದರೆ ಉತ್ತರ ಪದದ ಸ್ವರದ ಹಿಂದಿನ ವ್ಯಂಜನವು ದ್ವಿತ್ವವಾಗುತ್ತದೆ.

ಚೆನ್ನಂ, ಪೊನ್ನಿಂ, ತಣ್ಣೆಲ್ ಕಲ್ಲೆಲ್ಲಂ, ಮೆಲ್ಲದೆ, ಕೊಳ್ಳದೆ, ಕೈಯ್ಯ, ಮುಳ್ಳಾಗಿ.

ಕೆಲವೆಡೆ ಅಲ್ ಬಂದರೆ ದ್ವಿತ್ವವಿಲ್ಲ.

ಉಣಲ್, ಮೆಲಲ್, ಗೆಯಲುಂ

ಮೇಲೆ ಹೇಳಿದ ಎಲ್ಲ ವ್ಯಂಜನ ಸಂಧಿಗಳಿಗೂ ಸಂಧಿಯಾಗದ ಉದಾಹರಣೆಗಳೂ ದೊರೆಯುತ್ತವೆ.

ತಲೆಕಟ್ಟು, ಬೆಸೆಕೋಲ್, ಸಮಕಟ್ಟು, ಮುಖತಾವರೆ, ನಾಟ್ತಿಡುಗುಣಿ, ಇರ್ಪತ್ತು, ಮಾಟ್ಪಿದು, ಕಿಟ್ಪೊಡೆ, ಪಾಟ್ಮನೆ. ಕಣ್ಬೇಟಂ

ಹೀಗೆ ಪ್ರತಿಯೊಂದು ಸಂಧಿಗೆ ಅಪವಾದಗಳಿದ್ದು ಕೇಶಿರಾಜನು ಅವುಗಳನ್ನು ಪಟ್ಟಿಮಾಡಿ ಕೊಟ್ಟಿದ್ದಾನೆ. ಆದ್ದರಿಂದ ಸಂಧಿ ನಿಯಮಗಳನ್ನು ನಿರ್ದಿಷ್ಟವಾಗಿ ಹೇಳುವುದು ಸುಲಭದ ಕೆಲಸವಲ್ಲ. ಕೇಶಿರಾಜನು ಕೂಡ ಸಂಧಿಯ ಮೂಲಕ ಆಗುವ ವರ್ಣ ಬದಲಾವಣೆಗಳನ್ನು ಸಂಧಿ ಪ್ರಕರಣವನ್ನು ಬಿಟ್ಟು ಬೇರೆ ಬೇರೆ ಪ್ರಕರಣಗಳಡಿಯಲ್ಲಿಯೂ ವಿವರಿಸಿದ್ದಾನೆ. ಉದಾಹರಣೆಗೆ ಸಮಾಸ ಪ್ರಕರಣದಲ್ಲಿ ದೀರ್ಘಾದೇಶ ದ್ವಿಭಾರ್ವ ಕುರಿತು ಹೇಳುತ್ತಾನೆ.

ಉದಾ : ಪಿರಿ > ಪೇರ್, ಪಿರಿ+ಆನೆ > ಪೇರಾನೆ, ಪಿರಿ+ಒಡಲ್ > ಪೇರೋಡಲ್

ತಣ್+ಎಲರ್ > ತಣ್ಣೆಲರ್, ಬೆಳ್+ಆನೆ > ಬೆಳ್ಳಾನೆ

ಹೀಗೆಯೆ ಸ್ವರಲೋಪ, ಇತರ ವ್ಯಂಜನ ಬದಲಾವಣೆಗಳನ್ನು ಸಮಾಸ ಪ್ರಕರಣದಲ್ಲಿ ಹೇಳಿದ್ದಾನೆ (ಸೂ. ೧೯೧–೧೯೪). ಇನ್ನಿತರ ಸಂಧಿಗಳನ್ನು ಅಲ್ಲಲ್ಲಿ ಹೇಳಿದ್ದಾನೆ.

5.2.3.3 **ಇನ್, ನ್, ವ್ ಆಗಮ ಸಂಧಿ–**

ಉತ್ತರ ಪದದ ಆದಿಯಲ್ಲಿ ಸ್ವರವಿದ್ದರೆ ಕೆಲವೆಡೆ ವ್, ನ್ ಗಳು ಆಗಮವಾದರೆ ಇನ್ನು ಕೆಲವೆಡೆ ಉತ್ತರ ಪದಾದಿ ಹಾಗೂ ಪೂರ್ವ ಪದಾಂತ್ಯದಲ್ಲಿ ಕೆಲವು ಸ್ವರಗಳ ಮಧ್ಯ 'ಇನ್' ಆಗಮವಾಗುತ್ತದೆ.

ಉದಾ– ಬೆಟ್ಟಂ+ಅಂ > ಬೆಟ್ಟಮಂ, ಕುಲಂ+ಅಂ > ಕುಲಮಂ

ಮರಂ+ನಿಂ > ಮರನಿಂ, ತಳಿರ್ವಾಸು+ಇಂದೆ > ತಳಿರ್ವಾಸಿನಿಂದೆ

ಗುರುವು+ಇಂ > ಗುರುವಿನಿಂ.

ಅಱ್, ಅಣ್, ಮುಂತಾದವು ಆಗಮವಾಗುತ್ತವೆ— ನಾಲ್ಕು+ಇಂ > ನಾಲ್ಕಱಿಂ, ಮೂಡು+ಇಂ > ಮೂಡಣಿಂ, ಮಾಡ್+ಪುದು > ಮಾಟ್ಪುದು. ಇದರಂತೆ ಕ್ರಿಯಾಪದಗಳಿಗೆ ಸಂಬಂಧಿಸಿದ ಸಂಧಿಗಳನ್ನೂ ಆಖ್ಯಾತ ಪ್ರಕರಣದಲ್ಲಿ ಹೇಳಿರುವನು.

೬

# ಕನ್ನಡ ನಾಮಪದ ಶಾಸ್ತ್ರ

6.1 ಭಾಷೆಯಲ್ಲಿ ವಾಕ್ಯ ಪೂರ್ಣ ಅರ್ಥವನ್ನು ನೀಡುವ ಒಂದು ಘಟಕ. ಅದರಲ್ಲಿ ನಾಮಪದ, ಕ್ರಿಯಾಪದ ಮುಖ್ಯವಾದ ಘಟಕಗಳು ಸೇರಿರುತ್ತವೆ. ಕ್ರಿಯೆಯನ್ನು ಹೇಳದುದು ಪ್ರತ್ಯಯರಹಿತವಾದದ್ದು ಆದರೆ ಅರ್ಥವನ್ನು ಉಳ್ಳದ್ದು - ಪ್ರಾತಿಪದಿಕ. ಪ್ರಾತಿಪದಿಕ ಎಂದರೆ ಪ್ರತ್ಯಯಗಳನ್ನು ಸ್ವೀಕರಿಸಿ ಕೊಳ್ಳಲು ಸಮರ್ಥವಾದ ರೂಪ. ಇದನ್ನು 'ಲಿಂಗ' ಎಂಬ ವಿಶಿಷ್ಟ ಪಾರಿಭಾಷಿಕ ಪದವಾಗಿ ಬಳಸಿರುವುದೂ ಉಂಟು. ಕೇಶಿರಾಜನು ಇದನ್ನೇ ಹೇಳುತ್ತಾನೆ (ಸೂ. ೮೨) 'ಲಿಂಗ' ಎಂದರೆ ಒಂದರ್ಥದಲ್ಲಿ 'ನಾಮಪ್ರಕೃತಿ'. ಲಿಂಗ ಎಂದರೆ ಯಾವುದು ಕ್ರಿಯಾರ್ಥವನ್ನು ಹೊಂದಿಲ್ಲವೋ ಅಂಥ ಅರ್ಥವತ್ತಾದ ಘಟಕ. ಆ ಘಟಕ ವಿಭಕ್ತಿ ಪ್ರತ್ಯಯಗಳನ್ನು ಸ್ವೀಕರಿಸಲು ಸಮರ್ಥವಾದದ್ದಾಗಿರತಕ್ಕದ್ದು, ಇಂಥ ಲಿಂಗಗಳು ಕೃಲ್ಲಿಂಗ, ತದ್ಧಿತಲಿಂಗ, ಸಮಾಸಲಿಂಗ, ನಾಮಲಿಂಗ ಎಂಬುದಾಗಿ ನಾಲ್ಕು ಬಗೆಯವೆಂದು ಕೇಶಿರಾಜ ಹೇಳುತ್ತಾನೆ. ಈ ಪ್ರಕಾರಗಳಲ್ಲಿ ಒಳಗೊಳ್ಳದ ವಾಕ್ಯಮಾಲಾಲಿಂಗದಂಥ ಹೊಸ ಬಗೆಯನ್ನೂ ಸೂಚಿಸಿದ್ದಾನೆ. ಕೇಶಿರಾಜನ ವೈಜ್ಞಾನಿಕ ಪ್ರಜ್ಞೆ ಇಂಥಲ್ಲಿ ಗೋಚರಿಸುತ್ತದೆ. ಆಧುನಿಕ ಭಾಷಾ ವಿಜ್ಞಾನಿಗಳು ಹೇಳುವ *Stem* ಹಾಗೂ *T. G. Grammar* ಪದ್ಧತಿ ಮೇರೆಗೆ ವಿವರಿಸಲ್ಪಡುವ ನಾಮಪುಂಜ (*NP*)ದ ಕಲ್ಪನೆ ಕೇಶಿರಾಜನಿಗೆ ಆಗಲೆ ಹೊಳೆದಿತ್ತೆಂಬುದು ಮೆಚ್ಚತಕ್ಕ ವಿಷಯ. ಕನ್ನಡದಲ್ಲಿ ಲಿಂಗಗಳು ರೂಪುಗೊಳ್ಳುವ ಬಗೆಗಳನ್ನು ಸವಿಸ್ತಾರವಾಗಿ ಕೇಶಿರಾಜ ಹೇಳಿದ್ದಾನೆ.

ಕೇಶಿರಾಜನು ಲಿಂಗಗಳ ಕುರಿತು ನೀಡಿದ ಸೂತ್ರಗಳು ಸರಿಯಾಗಿದ್ದರೂ ಕೆಲವೆಡೆ ಅವುಗಳಿಗೆ ನೀಡಿದ ಪ್ರಯೋಗಗಳಲ್ಲಿ ಅಸ್ಪಷ್ಟತೆಗಳಿವೆ. ಉದಾಹರಣೆಗೆ ನಾಮ ಪ್ರಕರಣದ ಮೊದಲ ೮೨, ೮೩ನೆಯ ಸೂತ್ರಗಳಲ್ಲಿ ಹೇಳಿದ ಕೃಲ್ಲಿಂಗಕ್ಕೆ

ಕೊಟ್ಟ ಉದಾಹರಣೆಗಳಲ್ಲಿ 'ಮಾಡಿದಂ' 'ನೋಡಿದಂ' ಎಂಬವು ಕ್ರಿಯಾಪದಗಳೇ ಹೊರತು ನಾಮಪದಗಳಲ್ಲ. ಇಂಥ ಗಂಭೀರ ತಪ್ಪುಗಳು ಅಲ್ಲಲ್ಲಿ ನುಸುಳಿವೆ. ಕೇಶಿರಾಜನ ಸರಿಯಾದ ಉದಾಹರಣೆಗಳು ಹೀಗಿವೆ-

**ಕೃಲ್ಲಿಂಗ :** **ಕೂಡಿದಂ**ಗೆರಡಂ ತಾ ಬಗೆವಾತನುಂ,
**ಬೇಡಿದ**ನಿಷ್ಟಮಂ ಸಲಿಪುದು

**ತದ್ಧಿತಲಿಂಗ :** **ಅ**ಡಪವಳ, ಮಡಿವಳ್ಳ

**ಸಮಾಸಲಿಂಗ :** ತ್ರಿಶೂಲ, ತರುಲತೆ, ಆದವಿಷ್ಣು

**ನಾಮಲಿಂಗ :** ಅರಸ, ಇಂದ್ರ, ವರಾಹ

**ವಾಕ್ಯಮೂಲಾಲಿಂಗ :** ನಮೋಸ್ತುಗಳ್, ಗುಣಕ್ಕೆನಲ್ಲಗಣೇಶಂ,
ಅಹಿಂಸಾಪರಮೋಧರ್ಮಂ.

ಇಷ್ಟಾದಮೇಲೆ ರೂಢಿಗತವಾದ ನಾಲ್ಕು ಬಗೆಯಲ್ಲಿ ನಾಮಗಳನ್ನು ಸೂಚಿಸಿದ್ದಾನೆ.

೧. ರೂಢನಾಮ : ನೆಲಂ, ಪೊಲಂ, ಜಲಂ, ಚಲಂ

೨. ಅಂಕಿತನಾಮ : ಮಾಚಂ, ಕಸವಂ, ಕಾಟಂ

೩. ಅನ್ವರ್ಥನಾಮ : ದಾನಿ, ಅಭಿಮಾನಿ, ಪರಾಕ್ರಮಿ, ನಿಡುಮೂಗಂ.

## 6.2 ಕನ್ನಡದಲ್ಲಿ ಲಿಂಗವ್ಯವಸ್ಥೆ :

6.2.0 ಶಬ್ದಾರ್ಥ ಇಲ್ಲವೆ ವ್ಯಾಕರಣವನ್ನು ಹೊಂದಿಕೊಂಡು ಲಿಂಗವಿವಕ್ಷೆ ಕನ್ನಡದಲ್ಲಿ ಬರುತ್ತದೆ. ನಾಮಪದವು ಗಂಡು, ಹೆಣ್ಣು, ನಪುಂಸಕ ಇವುಗಳಲ್ಲಿ (ವಿಶಿಷ್ಟ ಸನ್ನಿವೇಶಗಳನ್ನು ಹೊರತುಪಡಿಸಿ) ಸಹಜವಾಗಿ ಯಾವ ಅರ್ಥವನ್ನು ಹೊಂದಿರುತ್ತದೆಯೋ ಆ ಲಿಂಗವನ್ನು ಸೂಚಿಸಬಹುದಾಗಿದೆ. ಸಾಮಾನ್ಯವಾಗಿ ಮಾನವ, ಮಾನವೇತರ ಎಂಬ ವಿಂಗಡಣೆ ಇದ್ದು ಮಾನವ ವರ್ಗದಲ್ಲಿ ಮಾತ್ರ ಪುಲ್ಲಿಂಗ ಸ್ತ್ರೀಲಿಂಗ ಭೇದವನ್ನು ಸ್ಪಷ್ಟವಾಗಿ ಮಾಡಲಾಗುತ್ತದೆ. (ಪುಲ್ಲಿಂಗ– ಅವನು, ಮಗನು, ಹುಡುಗ, ಸ್ತ್ರೀಲಿಂಗ-ಅವಳು, ಮಗಳು, ಹುಡುಗಿ) ಮಾನವೇತರ ವರ್ಗದಲ್ಲಿ ಸಜೀವ ನಿರ್ಜೀವ ಭೇದವಿದ್ದು ಸಜೀವದಲ್ಲಿ ಪುಂ,ಸ್ತ್ರೀಲಿಂಗಗಳನ್ನು ಪ್ರತ್ಯೇಕವಾಗಿ ಸೂಚಿಸುವ ಸಾಮಾನ್ಯ ಪ್ರತ್ಯಯ ಅಥವಾ ಇನ್ನಾವುದೇ ವ್ಯವಸ್ಥೆ ಇಲ್ಲ (ಉದಾ : ಗುಬ್ಬಿ, ಮೀನು, ಹಾವು, ನಾಯಿ, ಹದ್ದು), ಎದ್ದು

ತೋರುವ ಕೆಲವು ನಾಮುಗಳಿಗೆ ಲಿಂಗದ ಅರ್ಥ ನೀಡುವ ಪ್ರತ್ಯೇಕ ಪದಗಳೇ ಇವೆ, ಉದಾ : ಬಾವುಗ (ಗಂಡುಬೆಕ್ಕು), ಹೋರಿ, ಕೋಣ, ಹೋತ, ಸಲಗ, ಪಿಡಿ. ಹುಂಜ, ಕೋಳಿ. ಇನ್ನುಳಿದವುಗಳಿಗೆ ಲಿಂಗಾರ್ಥವನ್ನು ಸೂಚಿಸಬೇಕಾದ ಸಂದರ್ಭವಿದ್ದರೆ ಅವುಗಳ ಪೂರ್ವಸ್ಥಾನದಲ್ಲಿ ಗಂಡು. ಹೆಣ್ಣು, ಎಂಬ ರೂಪಗಳನ್ನು ಜೋಡಿಸಿ ಬಳಸಲಾಗುತ್ತದೆ. (ಉದಾ : ಗಂಡುನಾಯಿ, ಹೆಣ್ಣುನರಿ, ಗಂಡುಗುಬ್ಬಿ, ಹೆಣ್ಣುಪಾರಿವಾಳ). ಇನ್ನು ಕೆಲವು ರೂಪಗಳನ್ನು ಪ್ರತ್ಯೇಕವಾಗಿ ಎತ್ತಿಕೊಂಡು ಲಿಂಗನಿರ್ಣಯ ಮಾಡಲು ಆಗುವುದಿಲ್ಲವಾದುದರಿಂದ ವಾಕ್ಯಪುಟ್ಟದಲ್ಲಿ ಮಾತ್ರ ಅಂಥವುಗಳ ಲಿಂಗವನ್ನು ಗುರುತಿಸಬಹುದು. (ಉದಾ : ವಸಂತ ಬರುತ್ತಾನೆ, ವಸಂತ ಬರುತ್ತಾಳೆ, ವಸಂತ ಬರುತ್ತದೆ). ಸಂಸ್ಕೃತಜನ್ಯ ಆರ್ಯಭಾಷೆಗಳಲ್ಲಿ ನಾಮಪದದ ಲಿಂಗವನ್ನು ಆದರ ಹಿಂದಿನ ನಾಮಪದವೂ ಅನುಸರಿಸುತ್ತದೆಂಬುದನ್ನು ಅದಕ್ಕನುಗುಣವಾಗಿ ರೂಪ ಬದಲಾಯಿಸಿಕೊಳ್ಳುವ ನಾಮಪದವೇ ಸಾರಿ ಹೇಳುತ್ತದೆ. ಉದಾ : ಸುಂದರಮ್ ಪುಸ್ತಕಂ; ಸುಂದರೀ ವನಿತಾ, ಸುಂದರಃ ಪುರುಷಃ ಕನ್ನಡದಲ್ಲಿ ಈ ರೀತಿ ಪದಗಳ ರೂಪಾನುಗುಣವಾದ ಲಿಂಗವ್ಯವಸ್ಥೆ ಇಲ್ಲ. ಆದರೆ ಕ್ರಿಯಾ ಪ್ರಾತಿಪದಿಕಗಳಿಗೆ ಅನ್ವಯವಾಗುವ ಆಖ್ಯಾತ ಪ್ರತ್ಯಯಗಳ ರೂಪಗಳು ಲಿಂಗವನ್ನು ಸೂಚಿಸುತ್ತವೆ. 'ಬರುತ್ತಾನೆ.' 'ಬರುತ್ತಾಳೆ' 'ಬರುತ್ತದೆ'. ಇವುಗಳಲ್ಲಿ 'ಆನೆ' 'ಆಳೆ' 'ಅದೆ' ಪ್ರತ್ಯಯಗಳು ಲಿಂಗವನ್ನೂ ವಚನವನ್ನೂ ಸೂಚಿಸುತ್ತವೆ. ಮಾನವವರ್ಗಕ್ಕೆ ಸಂಬಂಧಿಸಿದ ನಾಮಗಳ ಅದರಲ್ಲೂ ಜಾತ್ಯೇಕವಚನದ ನಾಮುಗಳ ಲಿಂಗವನ್ನು ಸಂಧರ್ಭಕ್ಕನುಗುಣವಾಗಿಯೇ ಅರ್ಥೈಸಬೇಕಾಗುತ್ತದೆ. ಕೆಲವೆಡೆಗಳಲ್ಲಂತೂ ಸಂದರ್ಭವೂ ಲಿಂಗವನ್ನು ನಿರ್ಣಯಿಸುವಲ್ಲಿ ಸಹಾಯಕಾರಿಯಾಗದು. ಸೂರ್ಯ ಮುಳುಗುತ್ತಾನೆ, ನಕ್ಷತ್ರ ಮಿನುಗುತ್ತದೆ. ಇಂಥ ಉದಾಹರಣೆಗಳಲ್ಲಿ ಸೂರ್ಯ ಪುಲ್ಲಿಂಗ ನಕ್ಷತ್ರ ನಪುಂಸಕಲಿಂಗವಾಗುತ್ತದೆ. ಇಂಥಲ್ಲಿ ಸೂರ್ಯ-ಚಂದ್ರ ವಾಯು ಅಗ್ನಿ ಮುಂತಾದ ಕೆಲವು ಭಾರತೀಯ ಸಂಸ್ಕೃತಿಯಲ್ಲಿ ದೇವತೆಗಳೆಂಬ ಕಲ್ಪನೆ ಇರುವುದರಿಂದ ಈ ಬಗೆಯ ರೂಢಿ ಬೆಳೆದಿದೆ.

ಕನ್ನಡದಲ್ಲಿ ಸ್ತ್ರೀಲಿಂಗಕ್ಕೆ ಅಳ್ (ಉ), ಇ ಹಾಗೂ ಎ ಮೂರು ಲಿಂಗ ಸೂಚಕ ಪ್ರತ್ಯಯಗಳಾಗಿ ಬಳಕೆಗೊಳ್ಳುತ್ತವೆ. (ಕರಿಯಳು, ಹುಡುಗಿ. ಕಮಲೆ

ಇತ್ಯಾದಿ) ಇದೇ ರೀತಿ ಅಕ್ಕ, ಗಿತ್ತಿ, ಅಮ್ಮ, ಅವ್ವ, ತಾಯಿ ಮುಂತಾದ ರೂಪಗಳು ನಾಮಗಳಿಗೆ ಅನ್ವಯವಾಗಿ ಸ್ತ್ರೀಲಿಂಗರೂಪಗಳನ್ನು ರೂಪಿಸುತ್ತವೆ, (ಉದಾ : ಸಾವಕ್ಕ, ಕರಿಯಮ್ಮ, ಕಮಲಮ್ಮ, ಗೋದೂತಾಯಿ). ಪುಲ್ಲಿಂಗಕ್ಕೆ ಅನ್ (ಉ), ಅ ಎಂಬವು ಅನ್ವಯವಾಗುತ್ತವೆ (ಕರಿಯನು, ಕರಿಯ) ಇದಲ್ಲದೆ ಅಣ್ಣ, ಅಪ್ಪ, ಅಜ್ಜ, ಮುಂತಾದವು ಪುಲ್ಲಿಂಗನಾಮಗಳನ್ನು ರೂಪಿಸುತ್ತವೆ. (ಉದಾ : ಮಲ್ಲಣ್ಣ, ಮಲ್ಲಪ್ಪ, ಮಲ್ಲಜ್ಜ)

ದ್ರಾವಿಡಭಾಷೆಗಳಲ್ಲಿ ಲಿಂಗಭೇದವನ್ನು ಮುಖ್ಯವಾಗಿ ಬುದ್ಧಿಶಕ್ತಿಯನ್ನು ಗಮನಿಸಿ ಮಾಡಲಾಗುತ್ತದೆ. ಕೂಸು ಅಳುತ್ತದೆ, ಆ ಪೆಣ್ ಬಂದುದು ಈ ಕನ್ನಿಕೆ ಪೊಲ್ಲದು ಇಂತಹ ಉದಾಹರಣೆಗಳಲ್ಲಿ ಬುದ್ಧಿ ಶಕ್ತಿಯನ್ನೇ ಆಧರಿಸಿ ನಪುಂಸಕಲಿಂಗ ಮಾಡಲಾಗಿರುವುದು ಸ್ಪಷ್ಟವಾಗಿದೆ. ಪುರುಷರು ಮಹತ್‌ಲಿಂಗದಲ್ಲಿಯೂ ಉಳಿದವೆಲ್ಲ ಅಮಹತ್ ಲಿಂಗದಲ್ಲಿಯೂ ಮೂಲತಃ ಪರಿಗಣಿತವಾಗುತ್ತಿದ್ದವು. ವಾಸ್ತವವಾಗಿ ಸ್ತ್ರೀಲಿಂಗಕ್ಕೆ ಪ್ರತ್ಯೇಕ ಸ್ಥಾನವೊದಲು ಇರಲಿಲ್ಲ.೧ ಕನ್ನಡ ಲಿಂಗವ್ಯವಸ್ಥೆಯನ್ನು ಈ ರೀತಿ ರೇಖಿಸಬಹುದು :



6.2.1 ಪುರುಷರೆ ಪುಲ್ಲಿಂಗಂ ಸ್ತ್ರೀ
ಯರೆ ತಾಂ ಸ್ತ್ರೀಲಿಂಗವಮುೞಿದುವೆಲ್ಲಂ ನಪ್ಪಾ
ಗಿರೆ ಸಲ್ಗುಂ ಕನ್ನಡದೊಳ್
ಪರಿವರ್ತಿಸುವುೞಿದ ಲಿಂಗವೊಳವಾಗಿರ್ದುಂ (೧೦೦)

ಎಂದು ಕೇಶಿರಾಜನು ನಿರ್ಧಾರಕ್ಕೆ ಬರುವಮುನ್ನ ಸಂಸ್ಕೃತದಲ್ಲಿಯಂತೆ ಕನ್ನಡದಲ್ಲೂ ಲಿಂಗವೊಂಬತ್ತುತೆರಂ ಎಂದು ವಿವರಿಸಲು ಹೆಣಗಿದನು. ಒಂಬತ್ತುತೆರನಾದ ಲಿಂಗ (ಸೂ. ೯೦) ಗಳಿಗೆ ನೀಡಿರುವ ಉದಾಹರಣೆಗಳಲ್ಲಿ ಮೊದಲ ಮೂರು (ಪು. ಸ್ತ್ರೀ. ನಪುಂಸಕ) ಲಿಂಗಗಳ ಉದಾಹರಣೆಗಳು ಮಾತ್ರ ಸರಿಯಾಗಿವೆ. ಉಳಿದವು ಸಂದರ್ಭಕ್ಕನುಗುಣವಾಗಿ ಹಾಗೂ ಮುಂಬರುವ ಪದವನ್ನು ನೋಡಿ ಗುರುತಿಸಿಕೊಳ್ಳಬೇಕಾದಂಥವು. ಅಂದರೆ ವಾಕ್ಯಮಟ್ಟದಲ್ಲಿ ಮಾತ್ರ ಲಿಂಗವನ್ನು ಗುರುತಿಸಲು ಸಾಧ್ಯವಾಗಿರುವಂಥವುಗಳು. ಲಿಂಗಸೂಚಕ ಪ್ರತ್ಯಯಗಳು ಎಲ್ಲ ಪದಗಳಲ್ಲಿ ಅನ್ವಯವಾಗಿಯೇ ತೀರುತ್ತವೆನ್ನಲು ಬಾರದು. ಆದ್ದರಿಂದ ವಾಕ್ಯಮಟ್ಟದಲ್ಲೂ ಲಿಂಗವಿವರಣೆ ತಪ್ಪಾಗಲಾರದು. ಪುಂಸ್ತ್ರೀಲಿಂಗಕ್ಕೆ, ತ್ರಿಲಿಂಗಕ್ಕೆ, ವಾಚ್ಯಲಿಂಗಕ್ಕೆ ಅವ್ಯಯಲಿಂಗಕ್ಕೆ ಅವನು ಕೊಟ್ಟಿರುವ ಉದಾಹರಣೆಗಳಲ್ಲಿ ಹುರಳಿಲ್ಲವೆನಿಸುತ್ತದೆ. ಅನ್, ಅಳ್ ಹಾಗೂ ಅದು ಯಾವ ನಾಮಗಳಿಗೆ ಅನ್ವಯವಾಗುತ್ತವೆಯೋ ಆ ನಾಮಗಳು ಅವಕ್ಕನುಗುಣವಾಗಿ ಲಿಂಗಾರ್ಥವನ್ನು ಪಡೆಯುತ್ತವೆ. (ಬಂದವನ್, ಬಂದಳ್ ಬಂದುದು, ನೇರಿದನ್, ನೇರಿದಳ್, ನೇರಿತಿದು ಇತ್ಯಾದಿ) ವಾಚ್ಯಲಿಂಗ ಇಲ್ಲವೆ ವಿಶೇಷ್ಯಾಧೀನಲಿಂಗವೆಂದು ಅವನು ವಿಶೇಷವಾಗಿ ಹೇಳುವುದರಲ್ಲಿ ಅರ್ಥವಿಲ್ಲ. ಸರ್ವನಾಮಗಳು ವಿಶೇಷ್ಯಗಳಾದರೆ ಮಾತ್ರ ಇವು ಯಾವ ಲಿಂಗಕ್ಕೆ ಸೇರುತ್ತವೆಂದು ಹೇಳಬಹುದು, ಇದು ಎಲ್ಲೆಡೆ ಸಾಧ್ಯವಿಲ್ಲ. ಸೂ. ೯೯ ರಲ್ಲಿ ಗುಣವಚನಾದಿಗಳಿಗೆ ಕೇಶಿರಾಜ ನೀಡಿದ ಉದಾಹರಣೆಗಳಲ್ಲಿ ಹೊಂದಾಣಿಕೆ ಇಲ್ಲ. ಅಲ್ಲದೆ ಸಂಖ್ಯೆಗಳಿಗೆ ಲಿಂಗ ವಿವಕ್ಷೆ ಇಲ್ಲ. ಸಹಜವಾಗಿ ಲಿಂಗಾರ್ಥವನ್ನು ತನ್ನಲ್ಲೇ ಒಳಗೊಂಡು ಬಳಕೆಗೊಳ್ಳುವಂಥ ನಾಮಗಳು ಇಲ್ಲಿ ಪರಿಶೀಲನೆಗೆ ಒಳಪಡುತ್ತವೆ. ಸಹಜವಾಗಿ ಲಿಂಗಾರ್ಥವನ್ನು ಹೊಂದಿರುವ ನಾಮಗಳಿಗೇ ಇಲ್ಲಿ ಹೆಚ್ಚು ಮಹತ್ವ. ಅವುಗಳ ಹಿಂದೆ ಬರುವ ಯಾವ ನಾಮವೇ ಇರಲಿ ಅದು ತನ್ನ ಮುಂದೆ ಇರುವ ನಾಮದ ಲಿಂಗಾರ್ಥವನ್ನು ನೀಡುತ್ತದೆ. ವಾಸ್ತವವಾಗಿ ವಿಶೇಷ್ಯಾಧೀನ,

ಅವ್ಯಯ ಮುಂತಾದವು ಲಿಂಗಗಳೆನಿಸುವದೇ ಇಲ್ಲ. 'ಅಂತೆಯೇ ಅವ್ಯಯ ಲಿಂಗಗಳನ್ನು ಅವನು ವ್ಯವಹರಿಸಿದ ರೀತಿ ಅವನಿಗೆ ಶ್ಲಾಘನೆಯನ್ನು ತರುವುದಿಲ್ಲ' ಎಂದು ಕುಶಾಲಪ್ಪಗೌಡ ಅವರು ಅಭಿಪ್ರಾಯಪಟ್ಟಿದ್ದಾರೆ.೨ ಆದರೂ ಅವರು ಕೇಶಿರಾಜನ ಲಿಂಗವಿಂಗಡನೆಯಲ್ಲಿರುವ ಕೆಲವು ಅಂಶಗಳು ಒಪ್ಪಿತವಾಗುವತ್ತ ವೆಂಬುದನ್ನೂ ಸಮರ್ಥಿಸಿದ್ದಾರೆ. ಕೇಶಿರಾಜನಿಗೆ ಈ ಬಗೆಗೆ ಸಂದೇಹವಿದ್ದುದ ರಿಂದಲೇ ಒಂಬತ್ತು ಬಗೆಯ ಲಿಂಗಗಳೆಂದು ಹೇಳಿದರೂ ಕೊನೆಗೆ ಪುಂಸ್ತ್ರೀ ನಪುಂಸಕಲಿಂಗವೆಂದು ಮೂರೇ ಬಗೆ ಎಂಬ ನಿರ್ಧಾರಕ್ಕೆ ಬಂದಿದ್ದಾನೆ. ಸಂಸ್ಕೃತದ ಕೆಲವು ಶಬ್ದಗಳು ಕನ್ನಡದಲ್ಲಿ ನಪುಂಸಕವಾಗಿಯೇ ಬಳಕೆಗೊಳ್ಳುತ್ತವೆಯೆಂದೂ ಮತ್ತೊಂದೆಡೆಗೆ (ಸೂ. ೧೬೬) ಹೇಳಿದ್ದಾನೆ. ಸಂಸ್ಕೃತದಲ್ಲಿ ವೃಕ್ಷ, ವಾಯು ಪುಲ್ಲಿಂಗಗಳು, ಪ್ರೀತಿ, ನದಿ, ಧರೆ–ಸ್ತ್ರೀಲಿಂಗಗಳು. ಕುಲ–ನಪುಂಸಕಲಿಂಗ, ಇವೆಲ್ಲ ಕನ್ನಡಕ್ಕೆ ಬಂದಾಗ ನಪುಂಸಕಲಿಂಗವೇ ಆಗುತ್ತವೆ. ಅಂದರೆ ಕನ್ನಡದಲ್ಲಿ ಲಿಂಗವಿವೇಚನೆ ಶಬ್ದಗಳ ಅರ್ಥವನ್ನು ಅನುಸರಿಸುತ್ತದೆ ಎಂಬುದನ್ನು ಅವನು ಹೇಳಿದಂತಾಗಿದೆ.

## 6.3 ವಚನ :

ನಾಮ ಹಾಗೂ ಕ್ರಿಯಾ ಪ್ರಾತಿಪದಿಕಗಳಿಗೆ, ಬಹುವಚನ ಪ್ರತ್ಯಯಗಳು ಅನ್ವಯವಾಗುತ್ತವೆ. ಹಳಗನ್ನಡ, ನಡುಗನ್ನಡ ಹಾಗೂ ಹೊಸಗನ್ನಡ ಅವಸ್ಥೆ ಗಳಲ್ಲಿ ಇರುವ ಬಹುವಚನ ಪ್ರತ್ಯಯಗಳು ಒಟ್ಟು ಇಷ್ಟು– ಅರ್, ಇರ್, ದಿರ್, ಇರ್, ಅವು/ವು, ಕಳ್/ಗಳ್, ಅರ್ಕಳ್, ಇರ್ಕಳ್. ಅಂದಿರು,

–ಕಳ್ ಪ್ರತ್ಯಯವು ಕೆಲವು ವಿಶಿಷ್ಟ ಶಬ್ದಗಳಿಗೆ (ಆಕೃತಿಬದ್ಧ ರೂಪಗಳಿಗೆ) ಅನ್ವಯವಾಗುತ್ತದೆ. ಉದಾ . ಮಕ್ಕಳ್ ಕೊಟ್ಕಳ್, ನಾಟ್ಕಳ್.

–ಗಳ್ ಸಾಮಾನ್ಯವಾಗಿ ಮಾನವೇತರ ಹಾಗೂ ಕೆಲವು ವಿಶಿಷ್ಟ ಮಾನವ ವರ್ಗದ ನಾಮಗಳಿಗೆ ಅನ್ವಯವಾಗುತ್ತದೆ. ಕೊಳಗಳ್, ಗುರುಗಳ್, ಅತ್ತೆಗಳ್, ಪೆಣ್‌ಗಳ್...ಇತ್ಯಾದಿ. –ಗಳ್ ಪ್ರತ್ಯಯದ ಹಿಂದೆ 'ಙ್' ಅನುನಾಸಿಕ ಕೆಲವೆಡೆ ಬಳಕೆಗೊಳ್ಳುತ್ತದೆ. ಉದಾ : ಭಾವಂಗಳ್, ಅಯ್ಯಂಗಳ್, ಮಾವಂಗಳ್.

---

೧. ಡಾ. ಕುಶಾಲಪ್ಪಗೌಡ (೧೯೮೬) ಪುಟ ೧೩೧

೨. ಲಿಂಗಮೊಂಬತ್ತುಮೆಂತೆರಂ ? – ಶ್ರೀಕಂಠತೀರ್ಥ (೧೯೭೭) ಪುಟ ೫೮೬

6.3.1 ಹೊಸಗನ್ನಡದಲ್ಲಿ '-ವಿರ್' ಪ್ರತ್ಯಯ ಬಳಕೆಯಲ್ಲಿಲ್ಲ. -'ಅಂದಿರು' ಎಂಬ ಪ್ರತ್ಯಯ. ಸಂಬಂಧವಾಚಿನಾಮಗಳಿಗೆ ಬಳಕೆಯಾಗುತ್ತದೆ, ಅಣ್ಣಂದಿರು, ಹೆಂಡಂದಿರು. ಅಳಿಯಂದಿರು, ಸೊಸೆಯಂದಿರು, ತಮ್ಮಂದಿರು. ಕೇಶಿರಾಜನು ಈ ಪ್ರತ್ಯಯವನ್ನು -ದಿರ್ ಪ್ರತ್ಯಯದಲ್ಲಿ ಸೇರಿಸಿರುವುದೇ ಸರಿಯೆನಿಸುತ್ತದೆ. 'ಗಳ್'ದ ಹಿಂದೆ ಅನುನಾಸಿಕ ಬರುವಂತೆ -ದಿರ್ ದ ಹಿಂದೆಯೂ ಅನುನಾಸಿಕ ಬಂದು -ಅಂದಿರ್ ಆಗಿರಬೇಕು.

ಬಹುವಚನದ ಎಲ್ಲ ಪ್ರತ್ಯಯಗಳನ್ನು ಸಂಕ್ಷಿಪ್ತವಾಗಿ ಹೀಗೆ ವಿವರಿಸ ಬಹುದು :

/ ಅರ್ / ಮಹತ್‌ನಾಮಪ್ರಕೃತಿಗಳಿಗೆ (ಸಂಬಂಧವಾಚಿಗಳನ್ನು ಬಿಟ್ಟು)
{ಅರ್} / ವಿರ್ / ವಿಶಿಷ್ಟ ಸಂಬಂಧವಾಚಿ ನಾಮಪ್ರಕೃತಿಗಳಿಗೆ
/ ದಿರ್ / ಇತರ ಸಂಬಂಧವಾಚಿ ನಾಮಪ್ರಕೃತಿಗಳಿಗೆ
/ ಇರ್ / ವಿಶಿಷ್ಟ ಸ್ತ್ರೀಲಿಂಗ ಸಂಬಂಧಿವಾಚಿ ನಾಮಪ್ರಕೃತಿಗಳಿಗೆ

ಇರ್ < ದಿರ್-ದ್+ಇರ್
ವಿರ್-ವ್+ಇರ್

ಈ ರೀತಿಯಾಗಿ ಬೆಳವಣಿಗೆಯಾಗಿರಬೇಕು.೧

/ ಕಳ್ / ಶಿಷ್ಟನಾಮ ಪ್ರಕೃತಿಗಳಿಗೆ
{-ಗಳ್} / ಗಳ್ / ಅಮಹತ್ ಹಾಗೂ ಕೆಲವು ವಿಶಿಷ್ಟ ನಾಮಪ್ರಕೃತಿಗಳಿಗೆ
/ ವು / ಇತರೆಡೆ

ಹೊಸಗನ್ನಡದಲ್ಲಿ -ವಿರ್, ದಿರ್, ಅರ್ಕಳ್ ಪ್ರತ್ಯಯಗಳ ಬಳಕೆ ನಿಂತು ಹೋಗಿದೆ. ಉಳಿದ ಪ್ರತ್ಯಯಗಳು ಸ್ವರಾಂತಗೊಂಡು ಬಳಕೆಯಾಗುತ್ತವೆ.

6.3 ಏಕದ್ವಿತ್ವಬಹುತ್ವಮ
ನೇಕದ್ವಿಬಹುತ್ವವಸ್ತುಗಳೊಳಾಚರಿಪರ್
ಸ್ವೀಕಾರಂ ಕನ್ನಡದೊಳ
ಗೇಕಬಹುತ್ವಂ ದ್ವಿವಚನಮುಚಿತವೆ ಬರ್ಕುಂ (೧೦೪)

೧. ಇಲ್ಲಿ ದ್, ವ್ inflectional increment ಆಗುತ್ತವೆ.

ಎಂಬುದಾಗಿ ಕೇಶಿರಾಜನು ವಚನಗಳನ್ನು ಹೇಳಿದ್ದರೂ ಕನ್ನಡದಲ್ಲಿ ದ್ವಿವಚನ 'ಉಚಿತದೆ ಬರ್ಕುಂ' ಎಂದು ಸೂಚಿಸಿರುವುದು ಮಾತ್ರ ಆಕ್ಷೇಪಣೆಗೆ ಎಡೆಮಾಡಿ ಕೊಟ್ಟಿದೆ. ಇಲ್ಲಿಯೂ ಸಂಸ್ಕೃತಾನುಸರಣೆ ಎದ್ದು ಕಾಣುತ್ತದೆ. ಕೇಶಿರಾಜನಿಗೂ ಈ ಸಂಶಯವಿದ್ದುದರಿಂದಲೇ ಉಚಿತ ವಚನದ ಪ್ರಸಿದ್ಧಿಯಿಂದ ಮಾತ್ರ ದ್ವಿವಚನವನ್ನು ಅರಿಯಬೇಕು ಎಂದು ಹೇಳುತ್ತಾನೆ. ರಾಮಲಕ್ಷ್ಮಣರ್ ಎನ್ನುವ ಬದಲು ರಾಮಲಕ್ಷ್ಮಣಸೀತೆಯರ್ ಅಂದರೆ ತ್ರಿವಚನವೆಂದು ಹೊಸವಚನ ಪ್ರಕಾರವೊಂದನ್ನು ಹೇಳಬಹುದೇ ? 'ಬ್ರಹ್ಮವಿಷ್ಣುಮಹೇಶ್ವರ' ಪ್ರಸಿದ್ಧಿ ಪಡೆದ ಈ ಪದಸಮೂಹವನ್ನು ತ್ರಿವಚನ ಎನ್ನಬಹುದೇ ? ಎಂಬುದಕ್ಕೆ ಉತ್ತರ, ಕನ್ನಡದ ಮಟ್ಟಿಗಂತೂ ಇಲ್ಲವೆಂದೇ ಹೇಳಬೇಕು 'ಕಣ್ಗಳ್' ಮುಂತಾದ ಉದಾಹರಣೆಗಳಲ್ಲಿ ಎರಡೇ ಕಣ್ಣುಗಳೆಂದೂ ಅರ್ಥ ಮಾಡಲಿಕ್ಕಾಗುವದಿಲ್ಲ. 'ಈ ಸಭೆಯಲ್ಲಿ ನೆರೆದ ಜನರ ಎಲ್ಲ ಕಣ್ಣುಗಳು ನನ್ನ ಕಡೆಗೆ ನೋಡುತ್ತಿವೆ' ಈ ವಾಕ್ಯದಲ್ಲಿರುವ ಕಣ್ಣುಗಳು– ಬಹುವಚನವನ್ನು ಸೂಚಿಸುವುದಿಲ್ಲವೇ? ಆದ್ದರಿಂದ ಕನ್ನಡದಲ್ಲಿ ಏಕ ಹಾಗೂ ಬಹು ಎಂಬೆರಡೇ ವಚನಗಳು.

6.3.1 ಕೇಶಿರಾಜನ ಮೇರೆಗೆ ಸಾಮಾನ್ಯವಾಗಿ ಗಳ್ / ಕಳ್ ಬಹುವಚನ ಪ್ರತ್ಯಯ ಕೇವಲ ಮಾನವೇತರ ನಾಮಗಳಿಗೆ ಅನ್ವಯವಾಗುತ್ತದೆ. ಆದರೆ ಪೆಣ್‌ಗಳ್, ಅತ್ತೆಗಳ್, ಗುರುಗಳ್, ಕಲಿಗಳ್, ಗಂಡುಗಳ್ ಇಂತಹ ಉದಾಹರಣೆಗಳಲ್ಲಿ ಮಾನವವರ್ಗದ ನಾಮಗಳಿಗೂ ಈ ಪ್ರತ್ಯಯ ಅನ್ವಯವಾಗುವುದನ್ನು ನೋಡಿದರೆ ಮೊದಮೊದಲು ಅಮಹತ್ ವರ್ಗದ ನಾಮಗಳಿಗೆ ಮಾತ್ರ ಅನ್ವಯವಾಗುತ್ತಿದ್ದ ಈ ಪ್ರತ್ಯಯ ಬರುಬರುತ್ತ ಮಹತ್ ವರ್ಗದ ನಾಮಗಳಿಗೂ ಹತ್ತಲು ಆರಂಭವಾಗಿರಬೇಕು ಎನಿಸುತ್ತದೆ. ಅಕ್ಕಂದಿರ್/ಅಕ್ಕಂಗಳ್, ಅಣ್ಣಂದಿರ್/ಅಣ್ಣಂಗಳ್ ಇತ್ಯಾದಿ ಉದಾಹರಣೆಗಳನ್ನು ಗಮನಿಸಬೇಕು. 'ಕಳ್' ಪ್ರತ್ಯಯವು ಕೆಲವು ನಾಮಗಳಿಗೆ ದ್ವಿತೀಯ ಪ್ರತ್ಯಯವಾಗಿ ಹಳಗನ್ನಡದಲ್ಲಿ ಬಳಕೆಯಲ್ಲಿತ್ತು. (ಬುಧರ್ಕಳ್, ತಾಯ್ವಿರ್ಕಳ್, ಅವರ್ಗಳ್, ಇವರ್ಗಳ್... ಇತ್ಯಾದಿ). ಅರ್+ಕಳ್; ವಿರ್+ಕಳ್ ಎಂಬುದಾಗಿ ಎರಡೆರಡು ಪ್ರತ್ಯಯಗಳು ಕೂಡಿ ಒಂದು ಪ್ರತ್ಯಯವಾಗಿ ರೂಪಿತಗೊಂಡಂತೆ ತೋರುತ್ತದೆ. ಇವು ಹೆಚ್ಚಾಗಿ ಮಾನವ ವರ್ಗದ ನಾಮಗಳಿಗೆ ಅನ್ವಯವಾಗುವುದರಿಂದ

ಪ್ರಾಯಶಃ ಗೌರವ ಸೂಚಿಸುವುದಕ್ಕಾಗಿ ಈ ಬಗೆ ಬಳಕೆಗೊಳ್ಳುತ್ತಿರಬಹುದಾಗಿದೆ.

ಕೇಶಿರಾಜನು ಹೇಳಿರುವ ಒಟ್ಟು ಬಹುವಚನ ಪ್ರತ್ಯಯಗಳಿಷ್ಟು– ಅರ್, ವಿರ್, ದಿರ್, ಅವು/ವು, ಕಳ್/ಗಳ್ (ಅರ್+ಕಳ್, ವಿರ್+ಕಳ್) ಇವುಗಳನ್ನು ಹೀಗೆ ವಿವರಿಸಬಹುದು :

–ಅರ್, –ವಿರ್, –ದಿರ್ ಹಾಗೂ –ಇರ್ ಈ ನಾಲ್ಕು ಪ್ರತ್ಯಯಗಳನ್ನು ಮಾನವ ವರ್ಗದ ನಾಮಗಳಿಗೆ ಅನ್ವಯವಾಗುವ ಗುಂಪಿನಲ್ಲಿಯೂ –ಅವು/ವು, ಕಳ್/ಗಳ್ ಇವೆರೆಡು ಪ್ರತ್ಯಯಗಳನ್ನು ಮಾನವೇತರ ವರ್ಗದ ನಾಮಗಳಿಗೆ ಅನ್ವಯವಾಗುವ ಗುಂಪಿನಲ್ಲಿಯೂ ಸೇರಿಸಬಹುದು. –ಅರ್ ಪ್ರತ್ಯಯವು ಸಂಬಂಧವಾಚಿನಾಮಗಳನ್ನು ಬಿಟ್ಟು ಇತರ ಯಾವುದೇ ಮಹತ್ ವರ್ಗದ ನಾಮಗಳಿಗೆ ಅನ್ವಯವಾಗುತ್ತದೆ. ಉದಾ : ನಲ್ಲರ್, ದೇವರ್, ಪುರುಷರ್, ಸ್ತ್ರೀಯರ್ ಇತ್ಯಾದಿ –ವಿರ್ ಪ್ರತ್ಯಯವು ಸಂಬಂಧವಾಚಿನಾಮಗಳಿಗೆ ಅನ್ವಯವಾಗುತ್ತದೆ- ತಾಯ್ವಿರ್, ಸೊಸೆವಿರ್, ಅತ್ತೆವಿರ್ ಇತ್ಯಾದಿ ಕೆಲವು ವಿಶಿಷ್ಟ ನಾಮಗಳಿಗೆ ಮಾತ್ರ ಇದು ಸೀಮಿತವಾಗಿದೆ. ಇತರ ಸಂಬಂಧವಾಚಿನಾಮಗಳಿಗೆ –ದಿರ್/ಅಂದಿರ್ ಹಾಗೂ ಇರ್ ಇವುಗಳಲ್ಲೊಂದು ಅನ್ವಯವಾಗುತ್ತದೆ. –ಇರ್ ಪ್ರತ್ಯಯವು ವಿಶಿಷ್ಟ ಸ್ತ್ರೀಲಿಂಗ ಸಂಬಂಧಸೂಚಿನಾಮಗಳಿಗೆ ಅನ್ವಯವಾಗುತ್ತದೆ. ಉದಾ : ತೊಳ್ತಿರ್, ಪೆಂಡಿರ್, ದಿರ್/ಅಂದಿರ್ ಪ್ರತ್ಯಯಗಳಿಗೆ ಉದಾಹರಣೆಗಳು : ಇವಳ್ದಿರ್, ಅಣ್ಣಂದಿರ್, ಅಕ್ಕಂದಿರ್, ಮಾವಂದಿರ್.

## 6.4 ವಚನ ಪಲ್ಲಟ :

6.4.0 ಬಹುವಚನದ ಅರ್ಥವನ್ನು ಸೂಚಿಸುವಲ್ಲಿ ಏಕವಚನವನ್ನು ಕೆಲವೆಡೆ ಬಳಸುವುದನ್ನು ಕೇಶಿರಾಜನು "ಜಾತಿಯೊಳೇಕವಚನಮಿರ್ದುಂ ಬಹುವಚನಮುಂ ಪೇೞ್ವುದು, ಜಾತಿಯಲ್ಲದಲ್ಲಿಯುಂ ಬಹುವಚನಕ್ಕೆ ಏಕವಚನಂ ವಿಶೇಷಣಮಾಗಿ ಪೊಕ್ಕು ಬಹುವಚನಮುಂ ಪೇೞ್ವುದು" (ಸೂ. ೧೪೮) ಎಂದು ವಿವರಿಸಿರುವುದರಿಂದ ಆನೆ ನೂಂಕಿದವು ಎನ್ನುವುದಕ್ಕಿಂತ ಆನೆಗಳ್ ನೂಂಕಿದವು, ಕುದುರೆ ಯೇೞಿದುವು ಎನ್ನುವುದಕ್ಕಿಂತ ಕುದುರೆಗಳೇೞಿದುವು ಎನ್ನುವುದು ಹೆಚ್ಚು ಉಚಿತವೆಂದು ಭಾವಿಸಿದ್ದಾನೆ. ಹಾಗೆಯೇ ಜಾತಿಯಲ್ಲದಲ್ಲಿಯೂ– ಮುನಂ

ಸಂಚಲಮಾದುವು ಎನ್ನುವುದಕ್ಕಿಂತ ಮನಂಗಳ್ ಸಂಚಲಂಗಳಾದವು ಹೆಚ್ಚು ಸಾಧು ಎನ್ನುತ್ತಾನೆ. ಎರಡನೆಯದಾಗಿ (ಸೂ. ೧೪೯)ಇದಕ್ಕೆ ತದ್ವಿರುದ್ಧವಾದ–ಇಂತುಟಾನೆ. ನಡೆದುದು ಹಂಸೆ, ಪಾಡಿದುದು ತುಂಬಿ ಇಂತಹ ಉದಾಹರಣೆಗಳಲ್ಲಿ ಆನೆ, ಹಂಸೆ ತುಂಬಿ ಏಕವಚನದಲ್ಲಿರುವುದೇ ಉಚಿತ ಎಂದು ಅಭಿಪ್ರಾಯಿಸಿದ್ದಾನೆ. ಮತ್ತೊಂದೆಡೆ (ಸೂ. ೧೫೦) ಸಂಖ್ಯೇಯ, ಸಂಖ್ಯೆ. ಭಾವ; ಇವುಗಳಲ್ಲಿ ಬಹುವಚನವೇ ಉಚಿತವೆನ್ನುತ್ತಾನೆ— ಮೂರುಲೋಕ, ಪತ್ತುದೆಸೆ, ನಾಲ್ಕುಯುಗ ಇವುಗಳಿಗಿಂತ ಮೂರುಲೋಕಂಗಳ್, ಪತ್ತುದೆಸೆಗಳ್, ನಾಲ್ಕು ಯುಗಂಗಳ್ ಎಂಬುದಾಗಿಯೂ ಒಂದುನಾಲ್ಕು, ಎರಡಯ್ದು, ಇವುಗಳಿಗಿಂತ ಒಂದುನಾಲ್ಕುಗಳ್, ಎರಡಯ್ದುಗಳ್ ಎಂಬುದಾಗಿಯೂ ಕಣ್ಗಳ ಕೂರ್ಪು, ಪೂಗಳ ಬೆಳ್ಪು ಇವುಗಳಿಗಿಂತ ಕೂರ್ಪುಗಳ್, ಪೂಗಳ ಬೆಳ್ಪುಗಳ್ ಎಂಬುದಾಗಿ ಬಳಸುವುದೇ ಹೆಚ್ಚು ಯೋಗ್ಯವೆಂದು ಅವನ ಅಭಿಪ್ರಾಯ. ಆದರೆ ಇದಕ್ಕೆ ವಿರುದ್ಧವಾಗಿ ವಿಶೇಷಣ ಬಹುವಚನವಿದ್ದರೂ ವಿಶೇಷ್ಯ ಮಾತ್ರ ಏಕವಚನವಾಗಿರಬೇಕು ಎಂದು ಹೇಳಿ ನೇರಿದುವು ಬೆರಲ್‌ಗಳ್, ಬಟ್ಟಿದುವು ಮೊಲೆಗಳ್ ಎನ್ನುವುದಕ್ಕಿಂತ ನೇರಿದುವು ಬೆರಲ್, ಬಟ್ಟಿದುವು ಮೊಲೆ ಎನ್ನುವುದೇ ಯೋಗ್ಯವೆನ್ನುತ್ತಾನೆ.

6.4.1 ಕೇಶಿರಾಜನು ರೂಢಿಯ ಬಗೆಯನ್ನು, ಕಾವ್ಯಪ್ರಯೋಗಗಳನ್ನು ಗಮನಿಸಿ ಅವುಗಳನ್ನು ವಿವರಿಸುತ್ತ ಸಾಗಿದ್ದಾನಷ್ಟೇ. ಈ ವಿಷಯದಲ್ಲಿ ನಾವು ಗಮನಿಸಬೇಕಾದುದು ಕನ್ನಡ ಭಾಷೆಯ ರಚನೆಯ ವೈಶಿಷ್ಟ್ಯವನ್ನು. ಮೊದಲನೆಯದಾಗಿ ಕನ್ನಡದಲ್ಲಿ ಸಹಜವಾಗಿ ಬಹುವಚನ ಅರ್ಥವನ್ನೊಳಗೊಂಡ ಕೆಲವು ರೂಪಗಳೂ ಇವೆ ಉದಾ ; ಹಾಲು, ಮಂದಿ, ರಾಶಿ... ಇತ್ಯಾದಿ. (ಹಾಗೆಯೆ ಏಕವಚನವನ್ನೇ ಸಹಜವಾಗಿ ಉಳ್ಳ ರೂಪಗಳೂ ಇವೆ, ಉದಾ : ಮಳೆ, ನೆಲ. ನೀರು... ಇತ್ಯಾದಿ.) ಸಹಜವಾಗಿ ಬಹುವಚನ ಅರ್ಥವನ್ನು ಹೊಂದಿರುವ ಶಬ್ದಗಳು ವಾಕ್ಯದಲ್ಲಿ ಬಳಕೆಗೊಂಡಾಗ ಬಹುವಚನ ಪ್ರತ್ಯಯಗಳನ್ನು ಹಚ್ಚಿಕೊಳ್ಳುವುದಿಲ್ಲ, ಕೆಲವು ಸಲ ಏಕವಚನದಲ್ಲೂ ಅವುಗಳನ್ನು ಬಳಸಬಹುದು.

ಉದಾ : ಹಾಲು ಕೆಟ್ಟಿವೆ. ಮಂದಿ ಹೋಗುತ್ತಾರೆ. ರಾಶಿ ಬಿದ್ದಿವೆ. ಜ್ವರ ಬಂದಿದೆ.
ಹಾಲು ಕೆಟ್ಟಿತು. ಮಂದಿ ಬಂತು. ರಾಶಿ ಬಿತ್ತು. ಜ್ವರ ಬಂದಿದೆ.

ಎರಡನೆಯದಾಗಿ ಆನೆ ನೂಂಕಿದವು ಇಂತಹ ಉದಾಹರಣೆಗಳಲ್ಲಿ 'ಗಳು' ಬಹುವಚನಪ್ರತ್ಯಯ ಶೂನ್ಯಸ್ಥಿತಿಯಲ್ಲಿದೆ. (ಆದ್ದರಿಂದ ಶೂನ್ಯ ಪ್ರತ್ಯಯ ϕ ವನ್ನು ಅಲ್ಲಿ ನಾವು ಕಲ್ಪಿಸಬೇಕಾಗುತ್ತದೆ.) ಅಲ್ಲಿ ಬಹುವಚನ ಪ್ರತ್ಯಯ ಕಣ್ಣಿಗೆ ಗೋಚರವಾಗಬೇಕಾಗಿಲ್ಲ. ಪಾಡಿದುದು ತುಂಬಿ ಎಂಬುದರ ಬಗ್ಗೆ ಹೇಳಿದ್ದರಲ್ಲಿ ವಿಶೇಷವೇನೂ ಇಲ್ಲ. ಇಂಥಲ್ಲಿ ತುಂಬಿ, ಆನೆ, ಹಂಸೆ ಜಾತ್ಯಾರ್ಥದಲ್ಲಿ ಬಳಸಲ್ಪಟ್ಟಿಲ್ಲ. ಬಹುವಚನದಲ್ಲಿ ಇವು– ಪಾಡಿದುವು ತುಂಬಿ ϕ, ನಡೆದುವು ಹಂಸೆ ϕ ಎಂದಿಟ್ಟುಕೊಳ್ಳಬಹುದಾಗಿದೆ. ಸಂಖ್ಯೇಯ, ಸಂಖ್ಯೆ, ಭಾವ ಇವುಗಳಲ್ಲಿ ಬಹುವಚನ ಪ್ರತ್ಯಯವನ್ನು ಸೂಚಿಸಲೇಬೇಕೆಂಬ ನಿಯಮವಿಲ್ಲ, ಇಲ್ಲಿಯೂ ಅದು ಐಚ್ಛಿಕವಾಗಿದೆ, ಬಿಟ್ಟರೂ ಅದು ಶೂನ್ಯಸ್ಥಿತಿಯಲ್ಲಿದ್ದೇ ಇರುತ್ತದೆ. ನೇರಿದುವು ಬೆರಲ್ ಮುಂತಾದ ಉದಾಹರಣೆಗಳಲ್ಲಿ ವಿಶೇಷ್ಯ ಏಕವಚನವೇ ಇರಬೇಕೆಂದು ಹೇಳಿರುವುದಕ್ಕೂ ಇದನ್ನೇ (ϕ ಪ್ರತ್ಯಯ) ಅನ್ವಯಿಸಬೇಕು. ಅಲ್ಲಿ ಬಹುವಚನ ಬರಕೂಡದು ಎನ್ನುವುದು ಮಾತ್ರ ದೋಷವಾಗುತ್ತದೆ. ಇಷ್ಟೆಲ್ಲ ಗೊಂದಲಕ್ಕೆ ಕಾರಣವೆಂದರೆ ಕನ್ನಡದಲ್ಲಿ ಕೆಲವು ರೂಪಗಳು ಬಹುವಚನ ಪ್ರತ್ಯಯವನ್ನು (ಅದರಲ್ಲೂ ಅಮಹತ್ ವರ್ಗದ ನಾಮ ಪ್ರಕೃತಿಗಳು) ಐಚ್ಛಿಕವಾಗಿ ಪಡೆಯುತ್ತವೆ ಎಂಬುದರ ಕಲ್ಪನೆ ಇಲ್ಲದಿರುವುದೇ ಆಗಿದೆ. ಪ್ರತ್ಯಯವು ಪ್ರತ್ಯಕ್ಷವಾಗಿ ಗೋಚರಿಸದಿದ್ದರೂ ಅದು ಶೂನ್ಯ ಸ್ಥಿತಿಯಲ್ಲಿದ್ದು ಬಹುವಚನಾರ್ಥ ನೀಡುತ್ತದೆಂಬುದನ್ನು ಮನಗಂಡರೆ ಈ ತೊಡಕು ಸಹಜವಾಗಿ ದೂರವಾಗುತ್ತದೆ. ೧೪೫ನೆಯ ಸೂತ್ರದಲ್ಲಿ 'ವಿಶೇಷ್ಯಮಪ್ಪ ಜಾತಿಗೇಕತ್ವಮಲ್ಲದೆ ಬಹುಮತ್ವಮಿಲ್ಲ' ಎನ್ನುವ ಕೇಶಿರಾಜನ ಹೇಳಿಕೆ ಅಗತ್ಯವಿಲ್ಲ.

ಬಹುವಚನ ಪ್ರತ್ಯಯವು ಕ್ರಿಯಾಪದಕ್ಕೆ ಹತ್ತುವಾಗ ಕ್ರಿಯಾಪದದ ಹಿಂದಿನ ಲಿಂಗವನ್ನು ಅನುಸರಿಸಿ ಬರುತ್ತದೆಂದು (ಸೂ. ೧೫೨) ಹೇಳಿದ್ದು ಸರಿಯಾಗಿದೆ. ಉದಾ : ಸೇನೆಯುಮರಸಿಯುಮರಸನುಂ ಬಂದರ್; ಅರಸನುಂ ಅರಸಿಯುಂ ಚತುರಂಗ ಬಲಮುಂ ಬಂದವು. ಕೇಶಿರಾಜನ ಇನ್ನಿತರ ವಿಚಾರಗಳಿಗೂ ಈ ಮೇಲಿನ ವಿವರಣೆ ಸಾಕಾಗುತ್ತದೆ.೧

---

೧. 'ವಚನ ಪಲ್ಲಟದ ಹೆಚ್ಚಿನ ವಿವರಗಳಿಗೆ ನೋಡಿ : ರಂ. ಶ್ರೀ. ಮುಗಳಿ ವಚನಪಲ್ಲಟ, ಶ್ರೀಕಂಠತೀರ್ಥ (೧೯೭೬) ಪು. ೫೬೪– ೪೪.

6.5 **ವಿಶೇಷಣಗಳು*** :

6.5.1 ತನ್ನ ಮುಂದಿರುವ ನಾಮಪದವನ್ನು ವರ್ಣಿಸುವ ಹಾಗೂ ಲಿಂಗ ವಚನ ಪ್ರತ್ಯಯಗಳನ್ನು ಹಚ್ಚಿಕೊಳ್ಳದೆ ಬಳಕೆಗೊಳ್ಳುವ ರೂಪವೇ ವಿಶೇಷಣ ವೆನಿಸುತ್ತದೆ. ಆದರೆ ಆ ರೂಪವೇ ನಾಮಪದದಂತೆ ಬೇರೆಡೆ ಬಳಕೆಗೊಳ್ಳು ತ್ತಿದ್ದರೆ ಅದನ್ನು ಶುದ್ಧ ವಿಶೇಷಣವೆಂದು ಪರಿಗಣಿಸಲಾಗದು. ಉದಾ : ಬಿರುಗಾಳಿ, ಬಿರುನುಡಿ, ಬಿರುಬಿಸಿಲು ಈ ಶಬ್ದಗಳಲ್ಲಿ 'ಬಿರು' ಶುದ್ಧ ವಿಶೇಷಣ ವೆನಿಸುತ್ತದೆ. ಅದಕ್ಕೆ ಅದರ ಮುಂದಿರುವ ನಾಮಗಳಿಗೆ ಹತ್ತುವಂತೆ ಯಾವ ಪ್ರತ್ಯಯವೂ ಹತ್ತುವುದಿಲ್ಲ ಹಾಗೂ ಇತರೆಡೆಗೆ ಅದು ನಾಮದಂತೆ ವರ್ತಿಸು ವುದೂ ಇಲ್ಲ. 'ಬಿರು' ಇದು ತೀವ್ರ ಎಂಬ ಅರ್ಥವನ್ನು ಕೊಟ್ಟರೂ ಮುಂದಿರುವ ನಾಮಕ್ಕೆ ಆ ವಿಶೇಷಣಾರ್ಥ ಆಧೀನವಾಗಿರುತ್ತದೆ, ತಾನು ನಾಮಪದವನ್ನು ಅನುಸರಿಸುವುದರಿಂದ ಅದು ಎಂತಹದು ಎಂಬ ವಿಶೇಷ ಅರ್ಥ, ವರ್ಣನೆಯನ್ನು ಮಾಡುತ್ತದೆ. ಇಂತಹ ಹಲವಾರು ಶುದ್ಧ ವಿಶೇಷಣಗಳನ್ನು ಕನ್ನಡದಲ್ಲಿ ಪಟ್ಟಿ ಮಾಡಬಹುದು- ಮೆಲ್, ತೆಳ್, ಬಿಸಿ ಬಿಳಿ, ಕರಿ, ತೋರ್, ನುಣ್, ಕೆನ್, ಪಸಿ. ಅಸಿ, ನಲ್. ಬಲ್. ತಣ್, ಬಿಣ್, ನೇರ್, ಕೂರ್, ಕಡು, ನಿಡು, ಇನ್, ಪೆರ್, ಕಿಡು, ಪೊರ, ಒಳ, ಕರಿ, ಕುಡು, ಪಳ, ಪೊಸ, ಎಳ, ದೊಡ್ಡ, ಪುಟ್ಟ, ಚಿಕ್ಕ, ಸಣ್ಣ ಇತ್ಯಾದಿ. ಇವುಗಳ ಅಂತ್ಯದಲ್ಲಿ -'ತು' ಅಥವಾ -'ದು' ಹಚ್ಚುವುದ ರಿಂದ ನಾಮವಾಗುತ್ತವೆಂಬುದನ್ನು ಕೇಶಿರಾಜನು ಹೇಳಿದ್ದಾನೆ (ಸೂ. ೮೭). 'ತು' ಕೆಲವೆಡೆ 'ತ್ತು' ಕೂಡ ಆಗುತ್ತದೆನ್ನುತ್ತಾನೆ. ಒಳ್ಳಿತು, ತೆಳ್ಳಿತು, ಬಟ್ಟಿತು/ ಬಟ್ಟಿತ್ತು, ನೇರಿತು, ಕರಿದು, ಬಿಳಿದು, ಅಸಿದು ಇತ್ಯಾದಿ.

6.5.2 ಮೆಲ್, ತೆಳ್, ಕೆನ್ ಇತ್ಯಾದಿ ತು, ದು ಪ್ರತ್ಯಯರಹಿತವಾದ ರೂಪ ಗಳನ್ನು ಶುದ್ಧ ವಿಶೇಷಣಗಳೆಂದು ಕೆಲವು ವಿದ್ವಾಂಸರು ಒಪ್ಪುವುದಿಲ್ಲ. ಇವು ಬದ್ಧರೂಪಗಳು. ಇವನ್ನು ಸ್ವತಂತ್ರ ನಾಮವರ್ಗದಲ್ಲಿ ಸೇರಿಸಲಾಗದು. ಇವು ವಾಕ್ಯದಲ್ಲಿ ಯಾವ ವರ್ಗಕ್ಕೂ ಸೇರುವುದಿಲ್ಲವಾದ್ದರಿಂದ ಇವನ್ನು ವಿಶೇಷಣ ವೆಂದು ಪರಿಗಣಿಸಲಾಗದು ಎಂದು ಅಭಿಪ್ರಾಯಪಡಲಾಗಿದೆ.

---

* ಸಾಮಾನ್ಯವಾಗಿ ಗುಣವಾಚಕಗಳಿಗೆ ೧. ವಿಶೇಷಣರೂಪ ೨. ಕಾರಕರೂಪ ಎಂಬ ಎರಡು ರೂಪಗಳು. ಆದರೆ ಇಲ್ಲಿ ಈ ಎಲ್ಲಕ್ಕೂ ವಿಶೇಷಣ ಎಂಬ ಪದವನ್ನು ಮಾತ್ರ ಬಳಸಲಾಗಿದೆ.

ಇನ್+ಪು > ಇಂಪು, ತಣ್+ಪು > ತಂಪು, ಕೆನ್+ಪು > ಕೆಂಪು, ಇವುಗಳಲ್ಲಿ ಬದ್ಧರೂಪ ಯಾವುದು ? 'ಪು' ಬದ್ಧರೂಪವಾದರೆ ಇನ್, ತಣ್, ಕೆನ್ ಇವೆಲ್ಲ ನಮ್ಮ ಅಭಿಪ್ರಾಯದಂತೆ- ಪ್ರಾಯಶಃ ಮೂಲರೂಪ (*root*) ಗಳಾಗಿವೆ. ಇಂಪು, ತಂಪು, ಕೆಂಪು ನಾಮಗಳಾಗಿ ಸಿದ್ಧಿಸಿವೆ. ಅವು ಬೇರೆ ನಾಮಗಳ ಹಿಂದೆ ಬಂದಾಗ ವಿಶೇಷಣದ ಕಾರ್ಯ ನಿರ್ವಹಿಸುತ್ತವೆ- ಇಂಪು ಸಂಗೀತ, ತಂಪು ಗಾಳಿ, ಕೆಂಪು ಬಣ್ಣ. ಆದ್ದರಿಂದ ವಿಶೇಷಣಗಳಲ್ಲಿ ಶುದ್ಧ ಹಾಗೂ ಸಾಧಿತ ಎಂದು ಎರಡು ಪ್ರಕಾರಗಳನ್ನಾಗಿ ವಿಂಗಡಿಸಬಹುದು.

6.5.3 ಕೆಲವು ನಾಮಗಳು ಅವು ಬಳಕೆಗೊಳ್ಳುವ ಸ್ಥಾನಬಲದಿಂದಲೆ ವಿಶೇಷಣ ಗಳೆನಿಸುತ್ತವೆ. ಉದಾ : ಹುಡುಗಬುದ್ಧಿ, ಮಂಗಮನಸ್ಸು, ಟೊಪಗಿ ಮಾಸ್ತರ, ಮೂರು ತಿಂಗಳು, ರೇಡಿಯೋ ಗೀತೆಗಳು ಇತ್ಯಾದಿ. ಅನೇಕ ರೂಪಗಳು ವಿಶೇಷಣಗಳಾಗಿ ಬಳಕೆಗೊಳ್ಳುವ ಸಾಮರ್ಥ್ಯ ಪಡೆದಿವೆ. ಇವನ್ನು ಪಟ್ಟಿ ಮಾಡುವುದು ದುಸ್ತರವೇ ಸರಿ. ಇವು ತಮ್ಮ ಅಂತರಾಳದಲ್ಲಿ ಸಹಜವಾಗಿ ವಿಶೇಷಣ ಅರ್ಥವನ್ನು ಹೊಂದಿರುವುದಿಲ್ಲ. ಆದರೆ ಕೆಲವು ವಿಶೇಷಣಗಳು ಅಂಥ ಅರ್ಥಶಕ್ತಿ ಪಡೆದಿವೆ. ಉದಾ : ಒಳ್ಳೆಯ, ದೊಡ್ಡ, ಹಿರಿ, ಕಿರಿ, ಒಣ, ಭಾರಿ, ಸಣ್ಣ, ಬಿಸಿ ಇತ್ಯಾದಿ.

6.5.4 ಸಾಧಿತ ವಿಶೇಷಣಗಳಲ್ಲಿ ನಾಮವಿಶೇಷಣ, ಕ್ರಿಯಾವಿಶೇಷಣ ಎಂದು ಮುಖ್ಯವಾಗಿ ಎರಡು ಪ್ರಕಾರ ಮಾಡಬಹುದು. ಷಷ್ಠೀಪ್ರತ್ಯಯ 'ಅ' ಹಚ್ಚಿ ವಿಶೇಷಣಗಳನ್ನು ರೂಪಿಸಲಾಗುತ್ತದೆ. ಕ್ರಿಯಾವಿಶೇಷಣಗಳೂ ನಾಮಪದ ಗಳನ್ನು ವರ್ಣಿಸಬಹುದು : ಕುಡಿಯುವ ನೀರು, ಆಡಿದ ಆಟ, ಓಡುವ ಎರಳೆ, ಮಲಗುವ ಕೋಣೆ, ಹಾಡುವ ಹುಡುಗಿ. ಆಡುನುಡಿಯಲ್ಲಿ 'ಊ' ಅಥವಾ ಓ ಸ್ವರದ ಬಳಕೆ ಇದೆ- ಆಡೂ/ಆಡೋ ಆಟ, ಬರೋ ಹುಣ್ವಿ.

ಅಗೆ, ಅನ್ನ, ಅನೆ (ಯ) ಪ್ರತ್ಯಯಗಳನ್ನು ಹಚ್ಚಿ ವಿಶೇಷಣ ರೂಪಿಸು ವುದೂ ಉಂಟು.

ಉದಾ : ತಣ್ಣನೆ ಗಾಳಿ, ತಣ್ಣನ್ನ ನೀರು, ಬೆಳ್ಳನೆ ಮುಗಿಲು
ಬೆಚ್ಚನೆ ಮನೆ, ದುಂಡನ್ನ ಚೆಂಡು, ನೂರನೆಯ ಚಿತ್ರ
ಮೂರನೆಯ ಮಗ, ಸಣ್ಣನ್ನ ಬಾಯಿ, ಬೆಳ್ಳಗೆ, ಕರ್‍ರಗೆ, ತಣ್ಣಗೆ.

ಹಳಗನ್ನಡದಲ್ಲಿ ಉಳ್ಳ, ಇಲ್ಲದ, ಅಪ್ಪ (ಅಹ), ಆದ ಪ್ರತ್ಯಯಗಳನ್ನು ಹಚ್ಚಿ ವಿಶೇಷಣಗಳನ್ನು ರೂಪಿಸಲಾಗುತ್ತಿತ್ತು.

ವಿಶೇಷಣಗಳನ್ನು ರೂಪಿಸುವಾಗ 'ಆಗು' ಕ್ರಿಯಾಪದದ ಭೂತಕೃದ್ವಾಚಿ 'ಆದ' ಎಂಬ ರೂಪವನ್ನು ಅನ್ವಯಿಸುವ ವಾಡಿಕೆಯೂ ಇದೆ. ಉದಾ-ಕೆಂಪಾದ, ಚೆಲುವಾದ, ಬೇಕಾದ, ಹುಳಿಯಾದ.

6.5.5 ಕನ್ನಡ ವಿಶೇಷಣಗಳನ್ನು ಒಟ್ಟು ಹತ್ತು ಪ್ರಕಾರಗಳಲ್ಲಿ ವಿಂಗಡಿಸ ಬಹುದು.

೬.5.5.1 ಗುಣವಾಚಕ ವಿಶೇಷಣಗಳು–ಹಳೆಯ, ಹೊಸ, ಮೆತ್ತಗೆ, ಬಿಸಿ, ಬಿರುಸು ತುಂಟ, ಹುಂಬ, ಜಾಣ.

6.5.5.2 ವರ್ಣವಾಚಕ ವಿಶೇಷಣಗಳು–ನೀಲಿ-ಕಂದು, ಬಿಳಿ, ಹಳದಿ, ಕರಿ

6.5.5.3 ಪ್ರಮಾಣವಾಚಕ ವಿಶೇಷಣಗಳು–ಬಹಳ, ಸ್ವಲ್ಪ, ನೂರರಷ್ಟು ಹತ್ತರಷ್ಟು.

6.5.5.4 ಸಂಖ್ಯಾವಾಚಕ ವಿಶೇಷಣಗಳು-ಒಂದನೆಯ, ನೂರನೆಯ, ಇಪ್ಪತ್ತೆರಡನೆಯ.

6.5.5.5 ರುಚಿ ಸೂಚಕ ವಿಶೇಷಣಗಳು-ಹುಳಿ, ಕಹಿ, ಸಿಹಿ, ಒಗರು

6.5.5.6 ಆಕಾರಸೂಚಕ ವಿಶೇಷಣಗಳು :
ದೊಡ್ಡ. ಸಣ್ಣ, ಚಿಕ್ಕ ಪುಟ್ಟ; ಗಿಡ್ಡ
ಉದ್ದ, ಅಗಲ. ತೆಳ್ಳನೆಯ, ದಪ್ಪನೆಯ

6.5.5.7 ನಿರ್ದೇಶನಾ ಸೂಚಕ ವಿಶೇಷಣಗಳು–ಆ, ಈ, ಅಲ್ಲಿಯ, ಇಲ್ಲಿಯ

6.5.5.8 ನಾಮವಾಚಕ ವಿಶೇಷಣಗಳು-**ಹುಡುಗ**ಬುದ್ಧಿ, **ಮನೆಯ**ಬಾಗಿಲು **ಮಣ್ಣಿನ** ಗೊಂಬೆ, **ಕಡ್ಡಿ** ಪೆಟ್ಟಿಗೆ, **ಧಾರವಾಡ** ಕನ್ನಡ.

6.5.5.9 ಅಂತರಸೂಚಕ ವಿಶೇಷಣಗಳು-ದೂರ, ಸನಿಹ, ಮಧ್ಯ

6.5.5.10 ಕ್ರಿಯಾವಾಚಕ ವಿಶೇಷಣಗಳು- **ಹರಿದ** ಅಂಗಿ, **ಮಾತಾಡುವ** ಗಿಳಿ. **ಓಡುವ** ಹುಡುಗ.

6.5.6 ಕೇಶಿರಾಜನು ಹೇಳಿರುವ ಗುಣವಾಚಿಗಳೆಲ್ಲ ನಾಮಗಳೇ ಆಗಿವೆ. ಕೆಲವಾದರೂ ವಿಶೇಷಣಗಳು ನಾಮಪ್ರಕೃತಿಗಳಂತೆ ವಿಭಕ್ತಿ ಪ್ರತ್ಯಯಗಳನ್ನು ಹಚ್ಚಿಕೊಳ್ಳುವುದರಿಂದಲೂ ಕನ್ನಡಭಾಷೆಯು ಮೇಲುರಚನೆಯಮಟ್ಟ (*Surfae structurce*) ದಲ್ಲಿ ಮಾತ್ರ ಅವು ವಿಶೇಷಣಗಳಂತೆ ಬಳಕೆಗೊಳ್ಳುವುದರಿಂದಲೂ ಆಳರಚನೆಯ ಮಟ್ಟದಲ್ಲಿ (*deep structure level*) ಅವುಗಳನ್ನು ನಾಮವರ್ಗದಲ್ಲಿ ಪ್ರತ್ಯೇಕವಾಗಿ ಪರಿಗಣಿಸುವುದು ಸರಿಯಲ್ಲ ಎಂಬ ಅಭಿಪ್ರಾಯ ಸರಿಯೆನಿಸಿದರೂ ಶುದ್ಧ ವಿಶೇಷಣಗಳಿಗೆ ನಾಮಗಳಲ್ಲಿ ತಮ್ಮದೇ ಆದ ವಿಶಿಷ್ಟಸ್ಥಾನ ಕಲ್ಪಿಸುವುದು ಸಮಂಜಸವೆನಿಸುತ್ತದೆ. ಕನ್ನಡದಲ್ಲಿ ತರತಮಭಾವವನ್ನು ಹೇಳುವ ವಿಶೇಷಣಗಳಿಲ್ಲ. ಆದರೆ ವಿಶೇಷಣಗಳ ಹಿಂದಿನ ನಾಮಕ್ಕೆ ಕಿಂತ/ಗಿಂತ, ಒಳಗೆ, ಅಲ್ಲಿ ಈ ಪ್ರತ್ಯಯಗಳನ್ನು ಅನ್ವಯಿಸುವುದರಿಂದ ತರತಮಭಾವವನ್ನು, ತುಲನೆಯನ್ನು ಸೂಚಿಸಲಾಗುತ್ತದೆ—

ಉದಾ : ಅವಳಿಗಿಂತ ಸಣ್ಣವಳು, ಆ ಕಾರಿನಕಿಂತ ಹಳೆಯದು, ಅವರಲ್ಲಿ ಹಿರಿಯನು.

6.6 **ಗುಣವಚನಗಳು :**

ಒಳ್ಳಿತು, ಮೆಲ್ಲಿತು, ಬೆಟ್ಟಿತು, ಬಿಸಿದು, ನಿಡಿದು ಮುಂತಾದ 'ತು' 'ದು' ಅಂತ್ಯವಾಗುಳ್ಳ ನಾಮಗಳನ್ನು ಗುಣವಾಚಿಗಳೆನ್ನಬೇಕು. 'ತು' ಕಾರ ದ್ವಿತ್ವವೂ ಆಗಬಹುದು–ಒಳ್ಳಿತ್ತು, ಮೆಲ್ಲಿತ್ತು, ಬೆಟ್ಟಿತ್ತು ಇತ್ಯಾದಿ. ಕೇಶಿರಾಜನು ಲಿಂಗಗಳನ್ನು ಹೇಳುವಾಗ ಮಧ್ಯ ಗುಣವಚನಗಳನ್ನೇಕೆ ತಂದನೋ ಸ್ಪಷ್ಟವಾಗುವುದಿಲ್ಲ. ಒಳ್. ಮೆಲ್, ಬೆಟ್ ಮುಂತಾದ ಮೂಲರೂಪಗಳಿಂದ ನಿಷ್ಪನ್ನವಾದ ಈ ರೂಪಗಳನ್ನು ಗುಣವಚನ ಎನ್ನಬಹುದೆ ಎಂಬ ಪ್ರಶ್ನೆಯೂ ಇದೆ. ಒಳ್ಳಿತ್ತು ಮುಂತಾದವುಗಳ ಮೂಲರೂಪಗಳನ್ನು– ಒಳ್ಳಿದಂ, ನಿಡುಮೂಗಂ ಎಂದು ಲಿಂಗಗಳನ್ನಾಗಿ ಪರಿವರ್ತಿಸುವ ಸಾಧ್ಯತೆ ಇದೆ. ಈ ಕಾರಣದಿಂದಲೆ ಪ್ರಾಯಃ ಕೇಶಿರಾಜ ಇವನ್ನು ಇಲ್ಲಿ ಹೇಳಿರಬೇಕು.

6.7 **ಸರ್ವನಾಮಗಳು :**

ಗುಣವಚನವಾದೊಡನೆಯೆ ಕೇಶಿರಾಜ ಸರ್ವನಾಮಗಳ ಬಗೆಗೆ ತಿಳಿಸುತ್ತಾನೆ. 'ಅದು, ಇದು, ಉದು, ಆವುದು, ಎಲ್ಲದು, ಪೆಜಿತು, ಪಿನ್, ಪೆಜದು

ಎನಿಪ್ಪ ಶಬ್ದಂಗಳಾದಿಯಾದವು ಸರ್ವನಾಮಂಗಳ್' ಎಂದು ನಿರೂಪಿಸಿದ್ದಾನೆ. ಆದರೆ ರೂಢಿಯಲ್ಲಿರುವ ಸರ್ವನಾಮಗಳನ್ನು ಕೇಶಿರಾಜನು ಪ್ರತ್ಯೇಕವಾಗಿ ವಿವರಿಸಿದಂತೆ ತೋರುವುದಿಲ್ಲ, ನಾಮಪದದ ಬದಲಾಗಿ ಬಳಸುವ ರೂಪವನ್ನೇ ಸರ್ವನಾಮವೆಂದು ಕರೆಯುತ್ತಾರೆ. ಕೇಶಿರಾಜನು ಸರ್ವನಾಮಗಳನ್ನು ೮೮ನೇ ಸೂತ್ರದಲ್ಲಿ ತಪ್ಪದೇ ಸರ್ವನಾಮಗಳಾಗುತ್ತವೆಂದು ಹೇಳಿದವುಗಳು ನಪುಂಸಕ ಲಿಂಗ, ಪ್ರಶ್ನಾರ್ಥಕ ಮುಂತಾದ ಅರ್ಥವನ್ನು ಮಾತ್ರ ನೀಡುತ್ತವೆ. ಹಾಗಾದರೆ ಅವನು, ಅವಳು, ನಾನು, ನೀನು, ತಾನು, ನೀವು, ಅವರು, ಅವು, ತಾವು ಮುಂತಾದ ರೂಢಿಗನುಗುಣವಾದ ಸರ್ವನಾಮಗಳ ಬಗೆಗೆ ಕೇಶಿರಾಜ ಏನಾದರೂ ಹೇಳಿದ್ದಾನೆಯೆ ? ಎಂದು ವಿಚಾರಿಸಿದರೆ ೧೫೪, ೧೫೭, ೧೫೮ ನೆಯ ಸೂತ್ರ ಗಳಲ್ಲಿ ವಚನಗಳನ್ನು ಹೇಳುವಾಗ ಆನುಷಂಗಿಕವಾಗಿ ಸರ್ವನಾಮಗಳ ಬಗೆಗೆ ಹೇಳಿದುದು ತಿಳಿದು ಬರುತ್ತದೆ. ಆದರೆ ಅವುಗಳನ್ನವನು ಸರ್ವನಾಮವೆಂದು ಹೆಸರಿಸಿಲ್ಲ. ನಾಗವರ್ಮ, ಸರ್ವನಾಮ ಎಂಬ ಪದವನ್ನು ಬಳಸದೆ 'ಯುಷ್ಮ ದಸ್ಮದನ್ಯೋಕ್ತಿ' ಎಂದಿದ್ದಾನೆ. ಭಟ್ಟಾಕಳಂಕನೂ ಸರ್ವನಾಮ ಪದವನ್ನು ಪ್ರಸ್ತಾಪಿಸಿಲ್ಲ. ಕನ್ನಡದ ವೈಯಾಕರಣರು ಸರ್ವನಾಮಗಳನ್ನು ಸ್ಪಷ್ಟವಾಗಿ ವಿವರಿಸಿಲ್ಲವೆಂದೇ ಹೇಳಬಹುದು. ರೂಢಿಗತವಾಗಿ ಸರ್ವನಾಮಗಳನ್ನು ಹೀಗೆ ಸೂಚಿಸಬಹುದಾಗಿದೆ—

| | ಏಕವಚನ | ಬಹುವಚನ |
|---|---|---|
| ಉತ್ತಮ ಪುರುಷ | ನಾನ್ /ನಾ | ನಾವ್ |
| ಮಧ್ಯಮ ಪುರುಷ | ನೀನ್ /ನೀ | ನೀವ್ /ತಾವ್ |
| ಪ್ರಥಮ ಪುರುಷ | ಅವನ್ | ಅವರ್ |
| | ಅವಳ್ | |
| | ಅದು | ಅವು |

ಪ್ರಥಮಪುರುಷ ಏಕವಚನದಲ್ಲಿ ಮಾತ್ರ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗ ಬಹುವಚನದಲ್ಲಿ ಮೇಲ್ವರ್ಗ, ಕೆಳವರ್ಗವೆಂಬ ವರ್ಗಾನುಸಾರಿಯಾದ ಲಿಂಗವಿವಕ್ಷೆ ಇದೆ. ಇವುಗಳಿಗೆ ಆರಂಭದಲ್ಲಿ 'ಯಾ' ಅಥವಾ ಆ ಸೇರಿಸಿದರೆ ಯಾವನ್/ ಆವನ್, ಯಾವಳ್/ಆವಳ್, ಯಾವುದು/ಆವುದು, ಯಾರು/ಆರು ಎಂಬ

ಪ್ರಶ್ನಾರ್ಥಕ ಸರ್ವನಾಮಗಳುಂಟಾಗುತ್ತವೆ. ಕೇಶಿರಾಜ ಮುಂತಾದ ವೈಯಾಕರಣರು ಸರ್ವನಾಮಗಳಿಗೆ ಅಷ್ಟಾಗಿ ಮಹತ್ವ ಕೊಡದೆ ಅವುಗಳನ್ನು ನಾಮಲಿಂಗ (ಪ್ರಕೃತಿ) ಗಳಲ್ಲಿಯೇ ಸೇರಿಸಿಬಿಟ್ಟಂತೆ ತೋರುತ್ತದೆ.

## 6.8. ಕನ್ನಡ ವಿಭಕ್ತಿ ಪ್ರತ್ಯಯಗಳು :

6.8.0 ವಿಭಕ್ತಿ ಪ್ರತ್ಯಯಗಳ ಬಹುಮುಖ್ಯ ಕಾರ್ಯವೆಂದರೆ ಅವು ಹತ್ತಿಕೊಂಡಿರುವ ನಾಮಪುಂಜ (*Noun phrase*) ಹಾಗೂ ವಾಕ್ಯದಲ್ಲಿಯ ಕ್ರಿಯಾಪದ ಇವುಗಳ ನಡುವಿನ ಸಂಬಂಧವನ್ನು ಸಂಕೇತಿಸುವುದಾಗಿದೆ. ಆದರೆ ಷಷ್ಠೀ ವಿಭಕ್ತಿ ಪ್ರತ್ಯಯ ಮಾತ್ರ ನೇರವಾಗಿ ನಾಮಪದ ಹಾಗೂ ಕ್ರಿಯಾಪದದ ನಡುವಿನ ಸಂಬಂಧವನ್ನು ವ್ಯಕ್ತಪಡಿಸದೆಯೆ ಎರಡು ನಾಮಪದಗಳ ನಡುವಿನ ಸಂಬಂಧವನ್ನು ಬಾಹ್ಯ ರಚನಾ ಮಟ್ಟದಲ್ಲಿ ವ್ಯಕ್ತಪಡಿಸುವುದು ಅದರ ವೈಶಿಷ್ಟ್ಯ. ನಾಮಪದ ಕ್ರಿಯಾಪದಗಳ ನಡುವಿನ ಸಂಬಂಧವನ್ನು ಕಾರಕ ಎನ್ನುತ್ತಾರೆ ಕಾರಕ ಸಂಬಂಧ ಎಂತಹುದೆಂಬುದನ್ನು ವಿಭಕ್ತಿ ಪ್ರತ್ಯಯಗಳ ಅವತಾರಗಳಿಂದ ತಿಳಿಯಬಹುದು. ಒಂದೊಂದು ವಿಭಕ್ತಿಯೂ ಒಂದೋಂದು ಕಾರಕಾರ್ಥವನ್ನು ಹೊಂದಿರುವುದು. ಅದಕ್ಕನುಗುಣವಾಗಿ ಆ ವಿಭಕ್ತಿಯ ಪ್ರತ್ಯಯಗಳು ಬಳಕೆಯಾಗುತ್ತವೆ.

'ರೂಪಾ ಮನೆಗೆ ಬರುತ್ತಾಳೆ.' ಈ ವಾಕ್ಯದಲ್ಲಿ ಬರುವ ಕ್ರಿಯೆ ರೂಪಾ ಳಿಂದ ನಡೆಯುತ್ತದೆಂಬುದು ಸ್ಪಷ್ಟ. ಇಲ್ಲಿ ಕರ್ತೃಕಾರಕವಿದೆ. ಪ್ರಥಮಾ ಇದನ್ನು ಸಾಮಾನ್ಯವಾಗಿ ಸೂಚಿಸುತ್ತದೆ. (ಕರ್ಮಣಿ ಪ್ರಯೋಗದ ವಾಕ್ಯದಲ್ಲಿ 'ಇಂದ' ಪ್ರತ್ಯಯ ಅದನ್ನು ಸೂಚಿಸುತ್ತದೆ), ಕರ್ಮಕಾರಕವನ್ನು ದ್ವಿತೀಯಾ ವಿಭಕ್ತಿ ಪ್ರತ್ಯಯ ಕಾಣಿಸುತ್ತದೆ. ಕ್ರಿಯೆಯಿಂದ ಯಾವ ವಸ್ತುವಿನ ಮೇಲೆ ಪರಿಣಾಮವಾಗಿದೆಯೆಂಬುದು ಇದರಿಂದ ವ್ಯಕ್ತವಾಗುತ್ತದೆ. ರಾಜೇಶನು ಹೆಂಡತಿಯನ್ನು ಹೊಡೆಯುತ್ತಾನೆ. ಈ ವಾಕ್ಯದಲ್ಲಿ ಹೊಡೆಯುವ ಕ್ರಿಯೆ ಯಾರ ಮೇಲೆ ನಡೆಯುತ್ತದೆ ಅಥವಾ ಹೊಡೆಯುವ ಕ್ರಿಯೆಗೆ ಯಾರು ಒಳಗಾಗಿದ್ದಾರೆನ್ನುವುದನ್ನು 'ಅನ್ನು' ಪ್ರತ್ಯಯ ಸೂಚಿಸುತ್ತದೆ. ತೃತೀಯಾ ವಿಭಕ್ತಿಯು ಕರಣ ಸಂಬಂಧವನ್ನು ಒಳಗೊಂಡಿರುತ್ತದೆ. ಯಾವುದರ ಕಾರಣವಾಗಿ ಕರ್ತೃವು ಕಾರ್ಯವನ್ನು ನಿರ್ವಹಿಸುತ್ತಾನೆ ಎಂಬುದನ್ನು ತೃತೀಯಾ ಸೂಚಿಸುವುದು.

ಕರಗಸದಿಂದ ಕಟ್ಟಿಗೆಯನ್ನು ಕೊಯ್ಯುತ್ತಾರೆ. ಇಲ್ಲಿ ಕೊಯ್ಯುವ ಕ್ರಿಯೆ ಯಾವ ವಸ್ತುವಿನಿಂದ ನಡೆಯುವುದೆಂಬುದನ್ನು 'ಇಂದ' ಪ್ರತ್ಯಯ ಸೂಚಿಸುತ್ತದೆ. ಸಂಪ್ರದಾನ ಸಂಬಂಧವನ್ನು ತೋರಿಸುವ ಚತುರ್ಥಿಯಲ್ಲಿ ಕ್ರಿಯೆಯ ಕಾರ್ಯವನ್ನು ಸ್ವೀಕರಿಸುವವನ ನಿರ್ದೇಶನ ಹೊಂದಿರುತ್ತದೆ. ಉದಾ: ಶಂಕುತಲೆಯು ತನ್ನ ಸರ್ವಸ್ವವನ್ನೆಲ್ಲ ದುಶ್ಯಂತನಿಗೆ ಅರ್ಪಿಸಿದಳು. ಪಂಚಮೀ ವಿಭಕ್ತಿಯಲ್ಲಿ ಅಪಾದಾನ ಸಂಬಂಧವಿರುತ್ತದೆ. ಒಂದು ಸ್ಥಳದಿಂದ ಮತ್ತೊಂದಕ್ಕೆ ಸಾಗುವ ಚಲನೆಯ ಅರ್ಥವನ್ನು ಅದು ನೀಡುತ್ತದೆ, ಉದಾ: ಬಸವರಾಜನ ಮನೆಯಿಂದ ನಾನು ಬಂದೆನು, ಷಷ್ಠೀಯಲ್ಲಿ ನೇರವಾಗಿ ಕ್ರಿಯಾಪದಕ್ಕೆ ಕಾರಕ ಸಂಬಂಧವನ್ನು ನಾಮಪದವು ಉಂಟುಮಾಡುವುದಿಲ್ಲ. ಆದರೂ ವಿಭಕ್ತಿಯ ಕಾರ್ಯವನ್ನದು ನಿರ್ವಹಿಸುತ್ತದೆ. ನಮ್ಮ ಅಳಿಯ ಚೆನ್ನಾಗಿದ್ದಾನೆ. ಅವಳ ಮುಖದ ಬಣ್ಣವೇ ಬದಲಾಗಿದೆ. ಈ ವಾಕ್ಯಗಳಲ್ಲಿ ಮೊದಲನೆಯದರಲ್ಲಿ ಅಳಿಯನು ನಮ್ಮವನು ಎನ್ನುವ ಸಂಬಂಧ. ಎರಡನೆಯದರಲ್ಲಿ ಬಣ್ಣವು ಮುಖದ್ದು ಆ ಮುಖ ಅವಳದು ಎನ್ನುವ ಸಂಬಂಧವನ್ನು ಸೂಚಿಸುತ್ತದೆ, ಕ್ರಿಯಾಪದದೊಡನೆ ಕಾರಕ ಸಂಬಂಧ ಅವುಗಳಿಗಿಲ್ಲ. ಆದ್ದರಿಂದ ಬಾಹ್ಯ ರಚನೆಯ ದೃಷ್ಟಿಯಲ್ಲಿ ಷಷ್ಠೀ ವಿಭಕ್ತಿಯೆನಿಸಲಾರದು.

ಷಷ್ಠೀಯನ್ನೊಳಗೊಂಡ ರೂಪವು ತನಗೆ ನೇರವಾಗಿ ಸಂಬಂಧಿಸಿದ ನಾಮದ ಮೂಲಕ ಕ್ರಿಯಾಪದಕ್ಕೆ ಸಂಬಂಧ ಹೊಂದಿರುತ್ತದೆಯೆ ವಿನಃ ನೇರವಾಗಿ ಅಲ್ಲ ಅಂತೆಯೆ ಕೆಲವು ವಿದ್ವಾಂಸರು ಷಷ್ಠಿಗೂ ***Deep Structure Level*** ನಲ್ಲಿ ಕಾರಕ ಸಂಬಂಧ ಪರೋಕ್ಷವಾಗಿ ಉಂಟು ಎಂದು ಅಭಿಪ್ರಾಯ ಪಡುತ್ತಾರೆ. ಸಪ್ತಮೀಯಲ್ಲಿ ಅಧಿಕರಣ ಕಾರಕ ಸಂಬಂಧ (ಕ್ರಿಯೆಯ ಕಾಲ, ಸ್ಥಳಗಳನ್ನು) ಸೂಚಿಸಲಾಗುತ್ತದೆ. ಉದಾ: ಅವರ ಮನೆಯಲ್ಲಿ ನಾಯಿ ಇದೆ. ಒಂಧು ಗಂಟೆಯಲ್ಲಿ ಬರುತ್ತಾನೆ.

### 6.8.1 ಪ್ರಥಮಾ :

ಹಳಗನ್ನಡದಲ್ಲಿ 'ನ್' 'ಮ್' ಹಾಗೂ ಹೊಸಗನ್ನಡದಲ್ಲಿ 'ಉ' ಇವುಗಳನ್ನು ಪ್ರಥಮಾ ವಿಭಕ್ತಿಪ್ರತ್ಯಯವೆಂದು ಹೇಳಲಾಗುತ್ತಿದ್ದರೂ ನಾಮ

ಪ್ರಕೃತಿ ತನ್ನ ಸಹಜ ಸ್ಥಿತಿಯಲ್ಲಿ ಇಲ್ಲವೆ ಸ್ವರಾಂತಗೊಂಡು ಬಳಕೆಗೊಳ್ಳುವುದರಿಂದ ಪ್ರಥಮಾ ವಿಭಕ್ತಿಗೆ ಪ್ರತ್ಯೇಕ ಪ್ರತ್ಯಯ ಸೂಚನೆ ಇಲ್ಲವೆನಿಸುತ್ತದೆ.೧ ಉದಾಹರಣೆಗೆ- ಭಾರತಿ ಓಡುತ್ತ ಬಂದಳು, ರವೀಂದ್ರ ನಡೆಯುತ್ತ ಹೋದನು. ಕಲ್ಲು ಬೀಳುತ್ತವೆ. ರಾಜಕಾರಣಿ ಒದರುತ್ತಾನೆ. ಪ್ರಮೀಳೆ ಸುಂದರಿಯಾಗಿದ್ದಾಳೆ. ಮುಂತಾದ ಅನೇಕ ವಾಕ್ಯಗಳಲ್ಲಿ ಭಾರತಿ, ರವೀಂದ್ರ, ಕಲ್ಲು, ರಾಜಕಾರಣಿ, ಪ್ರಮೀಳೆ ಇವುಗಳಿಗೆ ಯಾವ ವಿಭಕ್ತಿ ಪ್ರತ್ಯಯ ಹತ್ತಿವೆ. ? ಆದರೆ ಆ ಕರ್ತೃಗಳ ಕಾರಕ ಸಂಬಂಧ ಸ್ಪಷ್ಟವಿದೆ. ಆದುದರಿಂದ ಇಲ್ಲಿ ಆಳ ರಚನಾ ಮಟ್ಟ *Deep Structure Level* ದಲ್ಲಿ ವಿಭಕ್ತಿ ಇದೆ. ಆದರೆ ಹೊರಗೆ ಪ್ರತ್ಯಯ ಕಾಣುವುದಿಲ್ಲ. ಪ್ರತ್ಯಯ ಶೂನ್ಯ ಸ್ಥಿತಿಯಲ್ಲಿದ್ದು ಭಾಷೆಯ ರಚನೆಯ ಕಾರ್ಯವನ್ನು ನಿರ್ವಹಿಸುತ್ತದೆ.

### 6,8.2 ದ್ವಿತೀಯಾ :

ಹೊಸಗನ್ನಡದಲ್ಲಿ- 'ಅನ್ನು' ಪ್ರತ್ಯಯ ದ್ವಿತೀಯಾ ವಿಭಕ್ತಿಯನ್ನು ಸೂಚಿಸುತ್ತದೆ. ಉದಾ : ರಾಮನನ್ನು, ಕೊಡಲಿಯನ್ನು. ಆಕಾಶವನ್ನು ಇತ್ಯಾದಿ. ಮಾನವೇತರ ನಾಮಗಳಿಗೆ ಪ್ರತ್ಯಯವು ಕೆಲವೆಡೆ ಐಚ್ಛಿಕವಾಗಿದೆ. ಆಡುನುಡಿಯಲ್ಲಿದನ್ನು ಹೆಚ್ಚಾಗಿ ಗುರುತಿಸಬಹುದು. ಉದಾ : ಪುಸ್ತಕ ತಂದೆನು, ತತ್ತಿ ತಿನ್ನಬೇಡ. ಬಸ್ಸು ಓಡಿಸುತ್ತಿದ್ದಾನೆ. ಬ್ಯಾಂಕ ದರೋಡೆ ಮಾಡಿದರು, ಹೆಣ್ಣು ನೋಡಲು ಬರುವವರಿದ್ದಾರೆ. ಇಂತಹ ಪ್ರಯೋಗಗಳಲ್ಲಿ ದ್ವಿತೀಯಾವಿಭಕ್ತಿ ಶೂನ್ಯಸ್ಥಿತಿಯಲ್ಲಿರುತ್ತದೆ. ಅಪ್ಪ, ಅಮ್ಮ, ಅಣ್ಣ, ತಂಗಿ. ತಮ್ಮ ಇಂತಹ

---

೧ ಕೈಪಿಡಿಕಾರರು ಈ ಕುರಿತು ೧೯೩೬ ರಷ್ಟು ಹಿಂದೆಯೇ ಚರ್ಚಿಸಿದ್ದರೂ ಅವರ ಅಭಿಪ್ರಾಯ ಸ್ಪಷ್ಟವಾಗಿಲ್ಲ. ಸ್ವತಂತ್ರ ಅಕಾರಾಂತ ನಾಮಗಳ ಅಂತ್ಯದಲ್ಲಿ ಬಿಂದುವನ್ನು ಸಂಸ್ಕೃತದ ಪ್ರಭಾವದಿಂದ ಪ್ರಾಚೀನ ಕನ್ನಡದಲ್ಲಿ ಬರೆಯುವ ರೂಢಿ ಬೆಳೆದು ಬಂದಿತು. ಫಲಂ. ದಿವಾಕರಂ, ಗಗನಂ ಇವು ಕನ್ನಡಕ್ಕೆ ಬಂದಾಗ ಫಲ, ದಿವಾಕರ, ಗಗನ ಆಗುವುದೊತ್ತಟ್ಟಿಗಿರಲಿ ಆಟಂ, ನೆಲಂ. ಎಂಬುದಾಗಿ ಸಂಸ್ಕೃತದ ಮಾದರಿಯಲ್ಲಿ ಬರೆಯುವ ರೂಢಿ ಬೆಳೆದು ಬಂದಂತೆ ತೋರುತ್ತದೆ. ಈ ಸ್ಥಾನದಲ್ಲಿ ಬಿಂದುವಿನ ಉಚ್ಚಾರ ಮ್ ಆಗಿದ್ದು ಆ ಮ್ ವನ್ನು ಪ್ರಥಮಾ ವಿಭಕ್ತಿ ಪ್ರತ್ಯಯವೆಂದು ಭಾವಿಸಲಾಯಿತು.

ಸಂಬಂಧವಾಚಿನಾಮಗಳಿಗೆ ಆಡುನುಡಿಯಲ್ಲಿ ಅನ್ನು ಪ್ರತ್ಯಯದ ಸಂಕ್ಷೇಪರೂಪ 'ನ್ನ' ಬಳಕೆಗೊಳ್ಳುತ್ತದೆ. ಉದಾ : ಅಪ್ಪನ್ನ ಮನಿಗಿ ಕಳಿಸು. ಅಮ್ಮನ್ನ ಮಸ್ಯಾಗ ಇಟಕೊ, ಅಣ್ಣನ್ನ ಕರಿ. ತಂಗಿನ್ನ ಛಲೊ ವರಗ ಕೊಡು. ತಮ್ಮನ್ನ ಪರೀಕ್ಷಾಕ ಕುಂಡುರ್ಸು. ಹಳಗನ್ನಡದಲ್ಲಿ 'ಅಂ' ಪ್ರತ್ಯಯವನ್ನು ದ್ವಿತಿಯೆಗೆ ಹೇಳಿದೆ ಆದರೆ ಅದನ್ನು 'ಅನ್' ಎಂದು ಗುರುತಿಸುವುದು ಸೂಕ್ತವೆನಿಸುತ್ತದೆ.

### 6.8.3 ತೃತೀಯಾ ವಿಭಕ್ತಿ :

ಹಳಗನ್ನಡದಲ್ಲಿ 'ಇಂ'. 'ಇಂದೆ', 'ಇಂದಂ' ಹಾಗೂ ಹೊಸಗನ್ನಡದಲ್ಲಿ ತೃತೀಯಾವಿಭಕ್ತಿ 'ಇಂದ' ಎಂಬ ಪ್ರತ್ಯಯದಿಂದ ಸೂಚಿಸಲ್ಪಡುತ್ತದೆ, ಕಲ್ಲಿನಿಂದ ಹೊಡೆದು ಕೊಂದನು. ರಾಮಪ್ಪನಿಂದ ಈ ಮನೆ ಕಟ್ಟಲ್ಪಟ್ಟಿದೆ. ಮಗಳಿಂದ ಅವನಿಗೆ ಕೀರ್ತಿ ಲಭಿಸಿತು. ಪೆನ್ನಿನಿಂದ ಗೀಚಿದ್ದಾನೆ, ಅವನಿಂದ ಕೆಲಸವಾಗಬಹುದು.

ಮೂಲ ದ್ರಾವಿಡಭಾಷೆಯಲ್ಲಿದ್ದ ಇನ್ನೊಂದು ಪ್ರತ್ಯಯ 'ಅಲ್'ದ ಛಾಯೆ (ಅಲ್ >ಅಲಿ)ಯನ್ನು ಮೈಸೂರು ಭಾಗದ ಕನ್ನಡದ ಆಡುನುಡಿಯಲ್ಲಿ ಕಾಣುತ್ತೇವೆ. ಉದಾ : ಪೆನ್ನಲಿ ಬರೆದನು, ಕಾಲಿಲಿ ಒದ್ದ, ಅವನ ಕೈಲಿ ಕೆಲಸ ಆಗಬ್ಹೋದು.

ಆದರೆ ಇದು ಮಾನವೇತರ ನಾಮಗಳಿದ್ದಾಗ ಅದೂ ಕೆಲವು ವಿಶಿಷ್ಟ ನಾಮಗಳಲ್ಲಿ ಮಾತ್ರ ಬಳಕೆಯಲ್ಲಿದ್ದಂತೆ ತೋರುತ್ತದೆ. ತೃತೀಯಾ ವಿಭಕ್ತಿ ಪ್ರತ್ಯಯ ಇಲ್ಲವೆ ಪದೋತ್ತರರೂಪದಿಂದ ಆ ಅರ್ಥವನ್ನು ವ್ಯಕ್ತಪಡಿಸುವ ಪ್ರಯೋಗಗಳೂ ಇವೆ, ಉದಾ : ಚಾಕು ತಕ್ಕೊಂಡು ಹೊಡೆದನು. (ತಕ್ಕೊಂಡು)

### 6.8.4 ಚತುರ್ಥಿ ವಿಭಕ್ತಿ :

'ಕೆ', 'ಕ್ಕೆ', 'ಗೆ' ಹಳಗನ್ನಡ ಹಾಗೂ ಹೊಸಗನ್ನಡ ಎರಡರಲ್ಲೂ ಇವೆ, ಚತುರ್ಥಿ ವಿಭಕ್ತಿ ಪ್ರತ್ಯಯ 'ಕ್ಕೆ' ಇದು ನಪುಂಸಕ ಏಕವಚನ ನಾಮಗಳಿಗೆ ('ಅ' ಸ್ವರಾಂತಗಳಿದ್ದಾಗ ಮಾತ್ರ) ಹಾಗೂ (ಕೋಟಿ ಪದವನ್ನುಳಿದು) ಸಂಖ್ಯಾವಾಚಕಗಳಿಗೆ ಹತ್ತುತ್ತದೆ. ಉಳಿದೆಡೆ– 'ಗೆ' ಪ್ರತ್ಯಯ ಹತ್ತುತ್ತದೆ. 'ಕ್ಕೆ'

ಇದಕ್ಕೆ ಕೆ, ಕ, ಹಾಗೆಯೆ 'ಗೆ' ಇದಕ್ಕೆ -ಇಗೆ, ಗ್ ಮುಂತಾದ ಉಪ ಪ್ರತ್ಯಯಗಳೂ ಇವೆ. ಅವು ಪರಸ್ಪರ ಪೂರಕಪ್ರಸಾರದಲ್ಲಿರುತ್ತವೆ. ಬಹು ವಚನ ಪ್ರತ್ಯಯದ ನಂತರ 'ಗೆ' ಪ್ರತ್ಯಯವೇ ಬಳಕೆಯಾಗುತ್ತದೆ. ಉದಾ : ಮರಕ್ಕೆ. ಹತ್ತಕ್ಕೆ, ಸಾವಿರಕ್ಕೆ (ಕ್ಕೆ), ಕೋಟಿಗೆ, ತೆರೆಗೆ (ಗೆ), ಹೆಣ್ಣಿಗೆ (ಇಗೆ) ಉತ್ತರ ಕರ್ನಾಟಕದ ಆಡುನುಡಿಯಲ್ಲಿ ಕ್ಕ್, ಗ್ಗ/ಗಿ ಎಂಬ ಪ್ರತ್ಯಯಗಳು ಬಳಕೆಯಾಗುತ್ತವೆ ಗಿಡಕ್ಕ್, ಹುಡುಗ್ಗ, ಅವ್ನಿಗಿ.

ಚತುರ್ಥಿ ವಿಭಕ್ತಿ ಸಾಮಾನ್ಯವಾಗಿ ನಿರ್ದೇಶನಾರ್ಥವನ್ನು ಹೊಂದಿದ್ದರೂ ಉದ್ದೇಶ, ಹೋಲಿಕೆ ಇವುಗಳ ಅರ್ಥವನ್ನೂ ಕೆಲವೆಡೆ ವ್ಯಕ್ತಪಡಿಸುತ್ತದೆ. ಸ್ಥಳ, ಸಂಬಂಧವಾಚಕ, ಕಾಲಸೂಚಕ ನಾಮಗಳೊಡನೆ ಬಂದಾಗ ಕೆಲವು ಸಲ ಷಷ್ಠೀ ಅರ್ಥವನ್ನೂ ಹೊಂದಿರುತ್ತದೆ. ಕೆಲವೆಡೆ ತೃತೀಯಾ ವಿಭಕ್ತ್ಯರ್ಥ ವನ್ನೂ ಹೊರಗೆಡಹುತ್ತದೆ. ಉದಾ– ಮನೆಗೆ ಹೋಗು (ದರ್ಶಕ); ತಿನ್ನಲಿಕ್ಕೆ ಕುಳಿತಿದ್ದಾನೆ (ಉದ್ದೇಶ): ಅವಳಿಗೆ ಗಿಡ್ಡನಾಗುತ್ತಾನೆ (ಹೋಲಿಕೆ); ಹೆಂಡತಿಗೆ ಗಂಡನು ದೇವರು (ತುಲನೆ); ಹೆಂಗಸರಿಗೆ ಜವಾಬ್ದಾರಿ ಹೆಚ್ಚು (ಷಷ್ಠಿ): ಅವಳಿಗೆ ಸಮಾಧಾನ ಗುಣವಿಲ್ಲ (ಸಪ್ತಮಿ).

### 6.8.5 ಪಂಚಮೀ ವಿಭಕ್ತಿ :

6.8.5.1 ಕನ್ನಡದಲ್ಲಿ **'ಇಂದ'** ಪ್ರತ್ಯಯ, ಪಂಚಮೀ ವಿಭಕ್ತಿಯ ಅವತಾರ ವಾಗಿದೆ. ಇದೇ ಪ್ರತ್ಯಯ ತೃತೀಯೆಗೂ ಉಪಯೋಗಿಸಲ್ಪಡುವುದರಿಂದ ಪಂಚಮೀ ವಿಭಕ್ತಿ ಇಲ್ಲವೆಂದು ಕೆಲವರು ಅಭಿಪ್ರಾಯಿಸುತ್ತಾರೆ.೧ ಕಾಲ್ಡ್‌ವೆಲ್ಲರು ದ್ರಾವಿಡಭಾಷೆಗಳಲ್ಲಿ ಪಂಚಮೀ ವಿಭಕ್ತಿ ಇಲ್ಲವೆಂದೂ ಸಪ್ತಮೀ ಹಾಗೂ ತೃತೀಯಾ ವಿಭಕ್ತಿ ಪ್ರತ್ಯಯಗಳೇ ಪಂಚಮಿಯ ಕಾರ್ಯವನ್ನು ನಿರ್ವಹಿಸುತ್ತವೆ ಯೆಂದೂ ನಿರ್ಣಯಿಸಿದ್ದಾರೆ. ಪಂಚಮೀ ಅರ್ಥವನ್ನು ಬೇರೆ ಬೇರೆ ಪ್ರತ್ಯಯ ಗಳೂ ನಿರ್ವಹಿಸುತ್ತವೆ.

ಗಿಡದಿಂದ ಬಿದ್ದು ಕಾಲು ಮುರಿದುಕೊಂಡನು (–ಇಂದ)

ಗಿಡವನ್ನಿಳಿದು ಬಂದನು (–ಅನ್ನು)

---

೧. **ಪಂಚಮೀ** ವಿಭಕ್ತಿ ಕನ್ನಡದಲ್ಲಿ ಸಹಜವಾಗಿ ಇಲ್ಲ... ಕನ್ನಡ ಕೈಪಿಡಿ ೧೯೭೧ **ಪುಟ ೩೫೮.**

ಪಂಚಮೀ ವಿಭಕ್ತಿಗೆ ತನ್ನದೇ ಆದ ಪ್ರತ್ಯೇಕ ರೂಪವುಳ್ಳ ಪ್ರತ್ಯಯವಿಲ್ಲ ಅಷ್ಟೇ. ಆದರೆ ಪಂಚಮೀ ವಿಭಕ್ತಿಯೇ ಇಲ್ಲ ಎನ್ನಲು ಸಾಧ್ಯವಿಲ್ಲ. ಸಪ್ತಮೀ ವಿಭಕ್ತಿ ಪ್ರತ್ಯಯ 'ಅಲ್ಲಿ' ಎಂಬುದೂ ಕೆಲವೆಡೆ ಪಂಚಮೀ ವಿಭಕ್ತಿಯನ್ನು ಸೂಚಿಸುತ್ತದೆಂದು ಭಾಸವಾಗುತ್ತದೆ; ಉದಾ : ೧. ಬಾವಿ ನೀರಿನಲ್ಲಿ ಹೆಣ ಎದ್ದಿತು. ೨. ಬಾವಿ ನೀರಿನಿಂದ ಹೆಣ ಎದ್ದಿತು. ೩. ಕಣ್ಣಲ್ಲಿ ನೀರು ಸುರಿಯಿತು ೪. ಕಣ್ಣಿಂದ ನೀರು ಸುರಿಯಿತು ೫. ಬಸ್ಸಿನಲ್ಲಿ ಜನರು ಬಂದರು ೬. ಬಸ್ಸಿನಿಂದ ಜನರು ಬಂದರು.

ಇಂಥಲ್ಲಿ ವಿಭಕ್ತಿಯನ್ನು ನಿರ್ಧರಿಸುವ ಅಂಶಗಳು ಪ್ರತ್ಯಯಗಳಿಗಿಂತ ಸಂದರ್ಭ ಹಾಗೂ ಕಾರಕ ಸಂಬಂಧ ಮುಖ್ಯವಾಗುತ್ತವೆ. ಆದುದರಿಂದ ಪಂಚಮೀಯಲ್ಲಿ ಆಳ ರಚನಾಮಟ್ಟವನ್ನು ಪರಿಗಣಿಸುವುದೇ ಹೆಚ್ಚು ಸೂಕ್ತ.

6.8.5.2 ಪ್ರಾಚೀನ ಕನ್ನಡ ವೈಯಾಕರಣರು 'ಅತ್ತಣಿಂ' ಎಂಬ ಪ್ರತ್ಯಯವನ್ನು ಪಂಚಮಿಗೆ ನೀಡಿದ್ದಾರೆ. ಆದರೆ ಅತ್ತಣ ಎಂಬುದು, ಪ್ರತ್ಯಯವಾಗದೆ ಪ್ರಾತಿಪದಿಕ ರಚಕವಾಗಿ ಕಾರ್ಯನಿರ್ವಹಿಸುತ್ತದೆ. ಇಲ್ಲಿ 'ಇಂ' ಎಂಬುದೇ ಪಂಚಮೀ ಪ್ರತ್ಯಯ.

ಉದಾ : ನಂಟರ್+ಅತ್ತಣ+ಇಂ=ನಂಟರತ್ತಣ+ಇಂ

ಕೆಜೆ+ಅತ್ತಣ+ಇಂ=ಕೆಜೆಯತ್ತಣ+ಇಂ

ಇಲ್ಲಿ 'ಅತ್ತಣ' ರೂಪವನ್ನು ಕೇಶಿರಾಜನು 'ಅತ್' ಎಂದು ತಪ್ಪಾಗಿ ವಿವರಿಸಿದ್ದಾನೆ(ಸೂ, ೧೨೬) ಹೊಸಗನ್ನಡದಲ್ಲಿ 'ಅತ್ತಣ' ಕ್ಕೆ ಸಮವಾಗಿ 'ಕಡೆ' ಎಂಬುದು ಬಳಕೆಯಾಗುವುದುಂಟು–ಬೀಗರಕಡೆಂದ/ಬೀಗರಕಡಿಂದ, 'ದೆಸೆ' ಎಂಬ ರೂಪವನ್ನು ಕೆಲವರು ಹೇಳಿದರೂ ಅದು ಪಂಚಮಿಗಿಂತ ಕಾರಣಿತ ವಿಭಕ್ತಿ (*Causative*) ಗೆ ಸರಿ ಹೊಂದುತ್ತದೆ,— ಅಪ್ಪನದಸಿಂದ (ಅಪ್ಪನ ದೆಸೆಯಿಂದ) ಹೊಲದ್ದಸಿಂದ (ಹೊಲದದೆಸೆಯಿಂದ)

ಒಟ್ಟಿನಲ್ಲಿ ನಾವು ನಿರ್ಧರಿಸುವುದಿಷ್ಟು : ಪಂಚಮೀ ವಿಭಕ್ತಿ ಕನ್ನಡದಲ್ಲಿದೆ. ಅದರ ಪ್ರತ್ಯಯ ಹಳಗನ್ನಡದಲ್ಲಿ 'ಇಂ' ಹೊಸಗನ್ನಡದಲ್ಲಿ 'ಇಂದ' ಆಗಿವೆ. ಹಳಗನ್ನಡದ 'ಅತ್ತಣ' ಹೊಸಗನ್ನಡದ 'ದೆಸೆ' ವಿಭಕ್ತಿ ಪ್ರತ್ಯಯಗಳಲ್ಲ.

### 6.8.6 ಷಷ್ಠೀ ವಿಭಕ್ತಿ :

ಷಷ್ಠೀ ವಿಭಕ್ತಿಗೆ ಕಾರಕಸಂಬಂಧವಿಲ್ಲವಾದ್ದರಿಂದ ಕ್ರಿಯಾಪದಕ್ಕೂ ನಾಮಪದಕ್ಕೂ ನೇರ ಸಂಬಂಧ ಇಲ್ಲಿ ಏರ್ಪಡುವುದಿಲ್ಲ. ಈ ಕಾರಣದಿಂದ ವಾಸ್ತವವಾಗಿ ಷಷ್ಠೀ ವಿಭಕ್ತಿ ಇಲ್ಲ ಎಂದು ಹೇಳಲಾಗುತ್ತದೆ ಆದರೆ ಆಳ ರಚನಾ ಮಟ್ಟದಲ್ಲಿ ಕ್ರಿಯಾಪದಕ್ಕೆ ಸಂಬಂಧವೇರ್ಪಟ್ಟಿರುವ ನಾಮದ ವಿಶೇಷಣ ರೂಪವನ್ನೂ ನಿರ್ಮಿಸುವ ವಿಶಿಷ್ಟಕಾರ್ಯವನ್ನು ಷಷ್ಠೀ ನಿರ್ವಹಿಸುತ್ತದೆ. ಷಷ್ಠೀ ವಿಭಕ್ತಿ ಇಲ್ಲ ಎನ್ನುವುದಕ್ಕೆ ಇನ್ನೊಂದು ಕಾರಣವೆಂದರೆ ಷಷ್ಠೀವಿಭಕ್ತಿ ಇಲ್ಲದೆ ಅರ್ಥಕ್ಕೆ ಬಾಧೆ ಬರದ ರೀತಿಯಲ್ಲಿ ವಾಕ್ಯರಚನೆ ಸಾಧ್ಯವಿರುವುದೇ ಆಗಿದೆ.

ಉದಾ : ಇವರು ನನ್ನ ತಂದೆ (ಷಷ್ಠೀ)>ನನ್ನನ್ನು ಹುಟ್ಟಿಸಿದ ತಂದೆ ಇವರು.
ಇದು ನಮ್ಮ ಹೊಲ(ಷಷ್ಠೀ)>ಇದು ನಾವು ತೆಗೆದುಕೊಂಡ ಹೊಲ.

ಆದರೆ ಇದು ಎಲ್ಲ ಕಡೆಗೂ ಸಾಧ್ಯವಿಲ್ಲ,

ಉದಾ : ಹೂವಿನ ತೋಟದಲ್ಲಿ ಹಾವಿದೆ (ಷಷ್ಠೀ)> ?
ಗಿಡದ ಮೇಲೆ ಮಂಗ ಕೂತಿದೆ (")> ?
ಅವಳ ಕಣ್ಣು ಆಕರ್ಷಕವಾಗಿವೆ (")> ?

ಇಂತಹ ಉದಾಹರಣೆಗಳು ಸಾಕಷ್ಟು ಸಿಗುತ್ತವೆ. ಇವುಗಳಲ್ಲಿ ಷಷ್ಠೀ ಪ್ರತ್ಯಯ ವಲ್ಲದೆ ಬೇರೆ ಯಾವ ಪ್ರತ್ಯಯವೂ ಅನ್ವಯವಾಗುವುದಿಲ್ಲ. ಆದುದರಿಂದ ಷಷ್ಠಿಗೆ ಕನ್ನಡದಲ್ಲಿ ತನ್ನದೇ ಆದ ವಿಶಿಷ್ಟ ಅಸ್ತಿತ್ವವಿದೆ. ತೃತೀಯಾ, ಸಪ್ತಮೀ, ಸಹತ್ವ ಮುಂತಾದ ವಿಭಕ್ತಿಗಳನ್ನು ಸೂಚಿಸುವ ಪದೋತ್ತರ ರೂಪಗಳು ಹತ್ತುವಾಗ ಆ ಪದೋತ್ತರ ರೂಪಗಳ ಹಿಂದಿನ ನಾಮಪದವು ಷಷ್ಠಿಯಲ್ಲಿರುತ್ತದೆ. ಉದಾ: ಅಣ್ಣನ ಕಡೆಯಿಂದ, ಬಾಗಿಲ ಕೆಳಗೆ, ಹುಡುಗಿಯ ಕೊರಳಲ್ಲಿ, ಬಾವಿಯ ಒಳಗೆ.

'ಎಲ್ಲಾ ವಿಭಕ್ತಿಗಳುಂ ಷಷ್ಠೀಗತಮಾದುದಾಗಿ ಸಂಬಂಧಮೆಂಬರ್' ಎಂಬ ಕೇಶಿರಾಜನ ಮಾತನ್ನು ಗಮನಿಸಬೇಕು. ತೆಕ್ಕುಂಜ ಗೋಪಾಲಕೃಷ್ಣಭಟ್ಟರು– ರಾಮನ ಗೆಲುವು, ರಾವಣನ ಕೊಲೆ, ಗದೆಯ ಹೊಡೆತ, ನಿಮ್ಮ ಮೈಸೂರಿನ ಪಯಣ, ಯಕ್ಷನಿಗೆ ಪತ್ನಿಯ ಅಗಲಿಕೆ, ನಮ್ಮ ಮನೆಯ ಮದುವೆಗೆ– ಈ ಉದಾಹರಣೆಗಳನ್ನು ನೀಡಿ ಎಲ್ಲ ವಿಭಕ್ತಿಗಳೂ ಹೇಗೆ ಷಷ್ಠಿಗತವಾಗಬಹುದೆಂಬು

ವನ್ನು ಸಿದ್ಧಮಾಡಿ ಅದು ಎಲ್ಲ ಬಗೆಯ ಕಾರಕಗಳನ್ನು ಹೊಂದಿರುತ್ತದೆಂದು ತೋರಿಸಿಕೊಟ್ಟಿದ್ದಾರೆ.೧ ಒಟ್ಟಿನಲ್ಲಿ ಷಷ್ಠಿಗೆ ಕಾರಕ ಸಂಬಂಧ ವಿಶಿಷ್ಟವಾಗಿದೆ.

### 6.8.7 ಸಪ್ತಮೀ ವಿಭಕ್ತಿ :

ಹಳಗನ್ನಡಕ್ಕೆ ಅಲ್ ಹಾಗೂ ಒಳ್ ಪ್ರತ್ಯಯ ಹೇಳಲಾಗಿದೆ. ಹೊಸಗನ್ನಡದಲ್ಲಿ ಸಪ್ತಮಿ ವಿಭಕ್ತಿಗೆ ಸಾಮಾನ್ಯವಾಗಿ 'ಅಲ್ಲಿ' ಎಂಬ ಪ್ರತ್ಯಯ ಅನ್ವಯವಾಗುತ್ತದೆ. 'ಅಲ್ಲಿ' ಇದು ಸ್ವತಂತ್ರ ಪದವೂ ಹೌದು. ಇದರಂತೆ ಇನ್ನೂ ಕೆಲವು ಪದೋತ್ತರ ರೂಪಗಳು ಸಪ್ತಮಿಯನ್ನು ಸೂಚಿಸಲು ಬಳಸಲ್ಪಡುತ್ತವೆ. ಒಳಗೆ, ಇಲ್ಲಿ, ಹತ್ತಿರ, ಕಡೆಗೆ, ಅತ್ತ, ಇತ್ತ, ಮುಂದೆ, ಕೆಳಗೆ ಇತ್ಯಾದಿ. ಇವೆಲ್ಲ 'ಅಲ್ಲಿ' ರೂಪದಂತೆ ಸ್ವತಂತ್ರಪದಗಳೂ ಆಗಿವೆ.

ಉದಾ : ಮನೆಯೊಳಗೆ ಬಾ, ಕುರ್ಚಿಯಲ್ಲಿ ಕೂಡ್ರು, ನನ್ನ ಹತ್ತಿರ ಹಣವಿಲ್ಲ, ನನ್ನವಳ ಹತ್ತಿರ ಇರಬಹುದು, ಅವಳ ಕಡೆಗೆ ಇದ್ದರೆ ಕೊಡುತ್ತಾಳೆ, ಅವಳತ್ತ ಹೋಗೋಣ, ನನ್ನ ಹಿಂದೆ ಬರುತ್ತಿಯಾ ? ಅವಳ ಮುಂದೆ ನಾಚ ಬೇಡ, ತಲೆದಿಂಬಿನ ಕೆಳಗೆ ಹಣ ಇಟ್ಟಿರುತ್ತಾಳೆ, ಅವಳ ಪಕ್ಕದಲ್ಲಿ ನಿಲ್ಲು, ನಿನ್ನ ಕೈಯಲ್ಲಿ ಕೊಡುತ್ತಾಳೆ.

ಈ ಎಲ್ಲ ವಾಕ್ಯಗಳಲ್ಲೂ ಸಪ್ತಮಿ ಅರ್ಥ ಒಳಗೊಂಡಿರುವುದನ್ನು ಗಮನಿಸ ಬೇಕು.

ಪಂಚಮೀ ವಿಭಕ್ತಿಯದೇ ಒಂದು ಪ್ರಕಾರ, ಈ ಸಪ್ತಮೀ ವಿಭಕ್ತಿ. ಅದಕ್ಕೆ ಸ್ವತಂತ್ರ ಅಸ್ತಿತ್ವವಿಲ್ಲ ಎಂದು ಕಾಲ್ಡವೆಲ್‌ರ ಅಭಿಪ್ರಾಯ. ಇದನ್ನು ಒಪ್ಪುವುದಕ್ಕೆ ಆಗುವುದಿಲ್ಲ. ಪಂಚಮೀ ವಿಭಕ್ತಿ ತೌಲನಿಕ, ಹೋಲಿಕೆಯ ಅರ್ಥ ವನ್ನು ವ್ಯಕ್ತಪಡಿಸುವಂತೆ ಸಪ್ತಮೀ ವ್ಯಕ್ತಪಡಿಸಲಾರದು. ಇದಲ್ಲದೆ ಕಾಲಸೂಚಕ ನಾಮಗಳು ಬಂದಾಗ ಪಂಚಮೀ ಹಾಗೂ ಸಪ್ತಮೀ ವಿಭಕ್ತಿಗಳಲ್ಲಿಯ ಅಂತರ ಸ್ಪಷ್ಟವಾಗಿ ವೇದ್ಯವಾಗುತ್ತದೆ.

ಉದಾ : ಅವಳಿಂದ ಸಣ್ಣವನು. ಬೇಸಿಗೆ ತಿಂಗಳಿಂದ ಮಳೆ ಬರುತ್ತದೆ.
ಕಲಬುರ್ಗಿಯಿಂದ ಬರುತ್ತಾನೆ.

---

೧. ತೆಕ್ಕುಂಜ ಗೋಪಾಲಕೃಷ್ಣಭಟ್ಟ— "ಷಷ್ಠೀಗತ ವಿಭಕ್ತಿ" ರತ್ನಮಂಜೂಷ– ಅಖಿಲ ಭಾರತ ೫೭ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಸಂಚಿಕೆ ಧರ್ಮಸ್ಥಳ (೧೯೭೫).

ಈ ವಾಕ್ಯಗಳಲ್ಲಿರುವ ಪಂಚಮೀ ಅರ್ಥವನ್ನೇ ಸಪ್ತಮೀ ಪೂರೈಸಲಾರದು. ಕಾರಣ ಪಂಚಮೀ ಮತ್ತು ಸಪ್ತಮೀ ಬೇರೆಬೇರೆಯೆಂದೇ ಪರಿಗಣಿಸುವುದು ಸೂಕ್ತ.

### 6.8.8 ಸಹತ್ವ ವಿಭಕ್ತಿ :

ಕರ್ತೃವಿನ ಜೊತೆಗೆ ಇರುವಿಕೆಯ ಸಹತ್ವವನ್ನು ಸೂಚಿಸುವ ವಿಶಿಷ್ಟ ಅರ್ಥವನ್ನು ನೀಡುವ ವಿಭಕ್ತಿಯನ್ನು ಪ್ರತ್ಯೇಕವಾಗಿ ಗುರುತಿಸಬಹುದು. ದ್ರಾವಿಡ ಭಾಷೆಗಳಲ್ಲಿ ಸಹತ್ವ ವಿಭಕ್ತಿಯನ್ನು ಪ್ರತ್ಯೇಕವೆಂದೇ ಪರಿಗಣಿಸಲಾಗಿದೆ.೧ ಕೆಲವರು ತೃತೀಯಾದಲ್ಲಿ ಇದನ್ನು ಸೇರಿಸುವರಾದರೂ ಸಹತ್ವಕ್ಕೂ ತೃತೀಯೆಗೂ ಸಾಕಷ್ಟು ಭಿನ್ನತೆ ಇರುವುದು ಸ್ಪಷ್ಟವಾಗಿದೆ. ಒಡನೆ, ಒಂದಿಗೆ, ಒಟ್ಟಿಗೆ, ಜೊತೆಗೆ, ಕೂಡ ಇಂತಹ ಪದೋತ್ತರ ರೂಪಗಳು ಸಹತ್ವ ವಿಭಕ್ತಿಯನ್ನು ಸೂಚಿಸುತ್ತವೆ.

ಉದಾ : ನನ್ನೊಡನೆ ಅವಳು ಓದುತ್ತಿದ್ದಾಳೆ.
ಮಗುವಿನೊಂದಿಗೆ ಅವರು ಬಂದರು.
ಪತ್ನಿಯ ಜೊತೆಗೆ ಸಿನಿಮಾಕ್ಕೆ ಹೋದನು.
ರಾಮನೊಟ್ಟಿಗೆ ಸೀತೆ ಕಾಡಿಗೆ ಹೋದಳು.

### 6.8.9 ಸಂಬೋಧನಾ ವಿಭಕ್ತಿ :

ಸಹಜನಾಮವಾಗಲಿ ಇಲ್ಲದೆ ನಾಮಪದಾಂತ್ಯಸ್ವರ ದೀರ್ಘೀಕರಣವಾಗಲಿ ಸಂಬೋಧನೆಯ ಅರ್ಥವನ್ನು ನೀಡುತ್ತದೆ. ಸಂಬೋಧನೆ ನಿಜವಾಗಿ ವಿಭಕ್ತಿಯಲ್ಲ, ಪ್ರಯೋಗಶರಣರಾದ ವ್ಯಾಕರಣಕಾರರು ಇವನ್ನು ವಿಭಕ್ತಿಯ ಪಟ್ಟಿಯಲ್ಲಿ ಸೇರಿಸುತ್ತಾರೆ. ಇದಕ್ಕೆ ವಿಭಕ್ತಿಯ ಸ್ಥಾನವನ್ನು ಯಾಕೆ ಕೊಡಬೇಕೆಂಬುವಕ್ಕೆ ಸಬಲ ಆಧಾರಗಳನ್ನೇ ಯಾರೂ ನೀಡುವುದಿಲ್ಲ. ಕೆಲವರು (ಕುಶಾಲಪ್ಪ ಗೌಡ, ಪ್ರ. ಗೋ. ಕುಲಕರ್ಣಿ, ಹಾ. ಮಾ. ನಾಯಕ. ಮುಂ.) ಇದನ್ನು

೧ ನೋಡಿ- ದ್ರಾವಿಡ ಭಾಷಾಭ್ಯಾಸಂಗ- ಸವದತ್ತಿಮಠ ಸಂಗಮೇಶ ನಾಲ್ಕನೆಯ ಆವೃತ್ತಿ ಪು. ೧೩೪-೧೩೭

ವಿಭಕ್ತಿಯೆಂದು ಒಪ್ಪಿಕೊಳ್ಳುವುದಿಲ್ಲ. ವಿಲ್ಯಂ ಮಾಡ್ತ ಅವರ– "ಸಂಬೋಧ ನೆಯು ಕಾರಕವೂ ಅಲ್ಲ, ವಿಭಕ್ತಿಯೂ ಅಲ್ಲ. ಯಾಕೆಂದರೆ ಇದು ಕ್ರಿಯಾಪದ ದೊಡನೆ ನಾಮಪದದ ಯಾವ ಅರ್ಥಸಂಬಂಧವನ್ನು ಸ್ಪಷ್ಟಪಡಿಸುವುದಿಲ್ಲ. ಆದ್ದರಿಂದ ಸಂಬೋಧನೆ ಕೇವಲ ಲಕ್ಷ್ಯ ಸೆಳೆಯುವುದಕ್ಕಿದೆ ಅಷ್ಟೇ"೨ ಎಂಬ ಅಭಿಪ್ರಾಯ ಸಮಂಜಸವಾಗಿವೆ.

6.8.10 ಈ ವರೆಗೆ ವಿವರಿಸಲ್ಪಟ್ಟ ವಿಭಕ್ತಿಗಳಲ್ಲದೆ ಕೆಲವು ವಿದ್ವಾಂಸರು ನಿರ್ದೇಶಿತ (*Directive*), ಉದ್ದೇಶಿತ (*Purposive*), ಕಾರಣಿತ (*Causative*) ಐಂದ್ರಿತ (*Sensory*), ಪರಿಣಾಮಿತ (*Effective*) ಮುಂತಾದ ಇನ್ನೂ ಅನೇಕ ಹೊಸ ವಿಭಕ್ತಿಗಳನ್ನು ಸೂಚಿಸಿದ್ದಾರೆ. ಅವುಗಳನ್ನು ಸ್ವತಂತ್ರ ವಿಭಕ್ತಿಗಳೆಂದು ಅನುಮಾನವಿಲ್ಲದೆ ಒಪ್ಪಿಕೊಳ್ಳುವುದಕ್ಕೆ ಬಲವಾದ ಆಧಾರಗಳು ದೊರೆಯಬೇಕು.

ಕನ್ನಡದಲ್ಲಿ ಪ್ರಥಮಾದಿಂದ ಸಪ್ತಮೀ ವರೆಗೆ ಏಳು ಹಾಗೂ ಸಹತ್ವ ಹೀಗೆ ಒಟ್ಟು ಎಂಟು ವಿಭಕ್ತಿಗಳನ್ನು ಸದ್ಯಕ್ಕೆ ಇಟ್ಟುಕೊಳ್ಳಬಹುದಾಗಿದೆ.

### 6.8.11 ವಿಭಕ್ತಿ ಪಲ್ಲಟ:

ಒಂದು ವಿಭಕ್ತಿ ಬೇರೊಂದು ವಿಭಕ್ತಿ ಪ್ರತ್ಯಯದ ಮೂಲಕ ಸೂಚಿಸಲ್ಪಟ್ಟರೆ ವಿಭಕ್ತಿ ಪಲ್ಲಟವಾಗುತ್ತದೆಂದು ಪ್ರಾಚೀನ ವೈಯಾಕರಣರ ಅಭಿಪ್ರಾಯ. ಪ್ರತ್ಯಯಗಳ ಮೇಲಿಂದ ವಿಭಕ್ತಿ ಗುರುತಿಸುವುದು ಕೆಲವು ಸಲ ಕಠಿಣವೇ ಆಗುತ್ತದೆ, ಉದಾ: ನೀರಿಗೆ ಹೋಗುವಳು, ಮನೆಗೆ ಹೋಗುವಳು ಇವುಗಳಲ್ಲಿ ವ್ಯತ್ಯಾಸವಿದೆ. ಮೊದಲನೆಯದು ಉದ್ದೇಶಿತ (ನೀರಿಗಾಗಿ) ಎಂದೂ ಎರಡನೆಯದು ನಿರ್ದೇಶಿತವೆಂದೂ ವಿವರಿಸಬಹುದು, ಎಮ್ಮೆ ಹುಡುಕಬೇಕು, ಎಮ್ಮೆ ಹಾಲು ಚೆನ್ನಾಗಿರುವುದಿಲ್ಲ; ಈ ವಾಕ್ಯಗಳಲ್ಲಿ ಬೇರೆ ಬೇರೆ ವಿಭಕ್ತಿಗಳಿವೆ. ಆದರೂ ಪ್ರತ್ಯಯವಿಲ್ಲ. ಆದುದರಿಂದ ಪ್ರತ್ಯಯ ಕೆಲವೆಡೆ ಮುಖ್ಯವಲ್ಲವೆನಿಸುತ್ತದೆ. ನಳದಿಂದ ನೀರು ಬಂತು, ನಳದಲ್ಲಿ ನೀರು, ಹಿರಿಯರನ್ನು ನಮಸ್ಕ

---

೨ ನೋಡಿ Madtha William- Case System of Kannada (Dravidian Case System 1976) p. 142

ರಿಸು, ಹಿರಿಯರಿಗೆ ನಮಸ್ಕರಿಸು, ಮದುವೆ ಮಾಡುವವರಿಗೆ ಏನೆಂದು ಹೇಳಬೇಕು? ಮದುವೆ ಮಾಡುವವರನ್ನು ಏನೆಂದು ಹೇಳಬೇಕು? ಅವನು ಮಾತಿನಲ್ಲಿ ಕುಳಿತರೆ ತೀರಿತು, ಅವನು ಮಾತಿಗೆ ಕುಳಿತರೆ ತೀರಿತು; ಮಾವಿನ ಗಿಡದ ತೊಗಟೆ ಬಿರುಸು. ಮಾವಿನ ಗಿಡಕ್ಕೆ ತೊಗಟೆ ಬಿರುಸು— ಇಂತಹ ಅನೇಕ ವಾಕ್ಯಗಳಲ್ಲಿ ಪ್ರತ್ಯಯಗಳು ಬೇರೆಯಾಗಿದ್ದರೂ ಅರ್ಥ ಮಾತ್ರ ಒಂದೇ ಆಗಿರುವು ದನ್ನು ಗಮನಿಸಬೇಕು. ಒಂದೇ ವಿಭಕ್ತಿಪ್ರತ್ಯಯರೂಪವು ಬೇರೆ ಬೇರೆ ವಿಭಕ್ತಿ ಅರ್ಥಗಳನ್ನೂ ವ್ಯಕ್ತಪಡಿಸಬಹುದು, ಉದಾ: ಕಾಲಲ್ಲಿ ಒದೆಯುತ್ತಾನೆ, ಕಾಲಲ್ಲಿ ಹುಣ್ಣು ಇದೆ. ಮಂದಿಗಿ ಹೊಡಿ, ಮಂದಿಗಿ ಬುದ್ಧಿಯಿಲ್ಲ,ನಾವು ಮನೀಲೆ ಕೆಲಸ ಮಾಡಿಕೋತೀವಿ (ನಾವು ಮನೆಯಲ್ಲಿ ಕೆಲಸ ಮಾಡಿಕೊಳ್ಳುತ್ತೇವೆ). ನಾವು ಮನೀಲೆ ಹೊಲ ಮಾಡ್ಸತೀವಿ (ನಾವು ಮನೆಯ ಜನರಿಂದ ಹೊಲ ಮಾಡಿಸುತ್ತೇವೆ).

ಹೀಗೆ ವಿಭಕ್ತಿಪಲ್ಲಟ ಕನ್ನಡದಲ್ಲಿ ವಿಶಿಷ್ಟವಾಗಿ ನಿಲ್ಲುತ್ತದೆ. ವಿಭಕ್ತಿ ಪಲ್ಲಟಕ್ಕೆ ಅನ್ಯಭಾಷಾಪ್ರಭಾವ, ಕನ್ನಡ ರಚನೆಯಲ್ಲಿಯೇ ಒಂದು ರೂಪಿನ ಪ್ರಭಾವ ಮತ್ತೊಂದಕ್ಕೆ, ಪ್ರಾದೇಶಿಕ ಭಿನ್ನತೆ ಇತ್ಯಾದಿ ನಾನಾ ಕಾರಣಗಳಿರಬಹುದು. ಈ ನಿಟ್ಟಿನಲ್ಲಿ ಆಳವಾದ ಅಧ್ಯಯನ ನಡೆಯುವವರೆಗೂ ವಿಭಕ್ತಿ ಪಲ್ಲಟದ ರಹಸ್ಯ ಬಿಡಿಸಲಾಗದು.

### 6.8 12 ಕೇಶಿರಾಜನ ವಿಭಕ್ತಿ ವಿಚಾರಗಳು :

ಪದದ ಅರ್ಥವನ್ನು ವಿಭಾಗಿಸುವುದೇ ವಿಭಕ್ತಿ. ಇವನ್ನೇ ವಿಭಕ್ತಿ ಪ್ರತ್ಯಯವೂ ಅನ್ನಬಹುದು. ಆ ವಿಭಕ್ತಿ ಪ್ರತ್ಯಯಗಳ ಹಿಂದೆ ಇರುವ ಲಿಂಗ ಅಥವಾ ಧಾತುವೇ ಪ್ರಕೃತಿ, ಪ್ರಕೃತಿ ಪ್ರತ್ಯಯಗಳು ಸೇರಿದಾಗ ಪದವಾಗುತ್ತದೆ ಎಂಬುದಾಗಿ ವಿಭಕ್ತಿಯನ್ನು ಕೇಶಿರಾಜ ವಿವರಿಸಿದ್ದಾನೆ (ಸೂ. ೬೫).

ಅವನು ಏಳು ವಿಭಕ್ತಿಗಳನ್ನೂ ಅವುಗಳ ಪ್ರತ್ಯಯಗಳನ್ನೂ (ಸೂ. ೧೦೩) ಹೀಗೆ ಹೇಳಿದ್ದಾನೆ :

6.8.12.1 ಪ್ರಥಮೆ –ಮ್, ದ್ವಿತೀಯೆ –ಅಮ್, ತೃತೀಯೆ –ಇಮ್, ಚತುರ್ಥಿ –ಕೆ, ಪಂಚಮಿ –ಅತ್, ಷಷ್ಠಿ –ಅದ್, ಸಪ್ತಮಿ –ಒಳ್.

ಪ್ರಥಮಾ ವಿಭಕ್ತಿಯಲ್ಲಿ ಅಕಾರಾಂತಕ್ಕೆ ಬಿಂದು ಬರುತ್ತದೆಂದೂ, ಅಕಾರಾಂತವಿಲ್ಲದೆಡೆ ಪ್ರಥಮಾ ವಿಭಕ್ತಿಗೆ ಲೋಪವಿದೆಯೆಂದೂ ಅಕಾರಾಂತ ಪುಲ್ಲಿಂಗವಿದ್ದು ಸ್ವರಪರವಾದರೆ 'ನ್' ಕಾರ ಆಗಮವಾಗುತ್ತದೆಂದೂ ಹೇಳುತ್ತಾನೆ (ಸೂ, ೧೧೫). ಉದಾ : ವೇದವಿದಂ, ಕರಡಿ, ಅವನಂ.

'ಮ್' ಪ್ರತ್ಯಯವೆಂದು ಅವನು ಹೇಳಿದ್ದರೂ ಇದು ಎಲ್ಲೆಡೆ ಇದ್ದಂತಿಲ್ಲ. ಅರಸ ಇದು ಅರಸಂ ಆಗುವುದಿಲ್ಲ. ಅಳಿಯ ಇದು ಅಳಿಯಂ ಆಗುವುದಿಲ್ಲ. ಕನ್ನಡದಲ್ಲಿ ಪ್ರಥಮಾವಿಭಕ್ತಿಪ್ರತ್ಯಯ ಶೂನ್ಯವಾಗಿದೆ. ಕೇಶಿರಾಜನು ಅದನ್ನು ಸ್ಥಾಪಿಸಲು ಪ್ರಯತ್ನಿಸಿರುವನಷ್ಟೇ (ನೋಡಿ– ಕನ್ನಡ ಕೈಪಿಡಿ ಪು. ೩೬೩ [೧೯೬೯]). ಲಿಂಗ, ಅರ್ಥ, ವಚನ ಹಾಗೂ ಸಂಬೋಧನೆಯಲ್ಲಿ ಪ್ರಥಮಾ ಇರುತ್ತದೆ (ಸೂ. ೧೩೭). ಲಿಂಗವೆಂದರೆ ವಸ್ತುವಿನ ಕುರುಹು, ಅರ್ಥ -ಭಾವ ವಿಶೇಷ, ವಚನ–ಗಣನೆ, ಸಂಬೋಧನೆ ಅಭಿಮುಖೀಕರಣಗೊಳಿಸುವಿಕೆ.

6.8.12.2 ದ್ವಿತೀಯಾ ವಿಭಕ್ತಿಯಲ್ಲಿ ಅಕಾರಾಂತ ನಪುಸಕಲಿಂಗಕ್ಕೆ ಮ್, ನ್ ಕಾರಗಳು ಬರುತ್ತವೆ. ಸಂಸ್ಕೃತದಲ್ಲಿ 'ಮ್' ಮಾತ್ರ ಬರುತ್ತದೆ (ಸೂ.೧೧೬) ಎನ್ನುತ್ತಾನೆ. ಉದಾ : ಬೆಟ್ಟಮಂ, ಬಳಗಮಂ, ಪೊಲನಂ, ನೆಲನಂ, ಸಂಸ್ಕೃತಕ್ಕೆ ಕುಲಮಂ, ಜಲಮಂ, ದ್ವಿತೀಯಾವಿಭಕ್ತಿ –ಕರ್ಮ, ನಿರ್ವರ್ತ್ಯ, ವಿಕಾರ್ಯ. ಪ್ರಾಪ್ಯ ಹಾಗೂ ವೈಷಯಿಕ– ಹೀಗೆ ಐದು ಬಗೆಯ ಅರ್ಥಗಳಲ್ಲಿ ಬರುತ್ತದೆ (ಸೂ. ೧೩೮). ಉದಾ : ೧. ತುಡಿಗೆಯುಂ, ತೊಟ್ಟಂ, ೨. ಮನೆಯಂ ಮಾಡಿದಂ. ೩. ಕಾಯಂ ಪೋೞ್ದಂ, ೪. ಮನೆಯಂ ಸಾರ್ದಂ. ೫. ನಲ್ಲಳನಪ್ಪಿದಂ. ಇದಲ್ಲದೆ ಇಷ್ಟ, ಅನಿಷ್ಟ, ಕಾಲಪಥ ಈ ಅರ್ಥವಿದ್ದಾಗಲೂ ದ್ವಿತೀಯೆ ಬಳಕೆಗೊಳ್ಳುತ್ತದೆ (ಸೂ. ೧೩೯). ಉದಾ : ನೇವಳವಂ ತೆಗೆದಂ, ಪಾಪಂ ದಾಂಟಿದಂ, ಅಱುದಿಂಗಳಂ ತಳ್ವಿದಂ, ಮೂಗಾವುದಮಂ ನಡೆದಂ.

ಕೇಶಿರಾಜನು 'ಅಮ್' ಪ್ರತ್ಯಯವನ್ನು ದ್ವಿತೀಯೆಗೆ ಹೇಳಿದ್ದರೂ ಪ್ರಾಯಶಃ ಅನು ಅನ್ ದಿಂದ ರೂಪುಗೊಂಡಿರಬಹುದಾಗಿದೆ (ನೋಡಿ ಕನ್ನಡ ಕೈಪಿಡಿ ಪು. ೩೬೪ [೧೯೬೯]).

6.8.12.3 ತೃತೀಯಾವಿಭಕ್ತಿ ಕರ್ತೃಕರಣ ಹಾಗೂ ಹೇತುವಿನಲ್ಲಿ ಬರುತ್ತದೆ (ಸೂ. ೧೩೯). ಉದಾ : ಕಾವ್ಯಮೆನ್ನಿಂ ಪೇೞಿಸಿಪಟ್ಟುದು, ಕೊಡಲಿಯಿಂ

ಕಡಿದಂ, ಓಲಗದಿಂ ಪಡೆದಂ. 'ಇಮ್' ಪ್ರತ್ಯಯವಲ್ಲದೆ ಇಂದಂ ಇಂದೆ ಎಂಬ ಪ್ರತ್ಯಯಗಳೂ ತೃತೀಯಾಕ್ಕಿವೆ (ಸೂ. ೧೧೭). ಉದಾ : ಭಯದಿಂದೆ, ಅಳ್ಳಿಗಳಿಂದೆ. ಇವುಗಳಿಗೆ ಎಕಾರಾದೇಶವೂ ಆಗಬಹುದು. ಕ್ರಮದೆ, ನಯದೆ ಇತ್ಯಾದಿ, ಆದರೆ ಈ 'ಎ' ಯನ್ನು ಕೆಲವರು ಸಪ್ತಮಿಯಲ್ಲಿ (ಕ. ಕೈ. ಪು. ೩೬೫) ಸೇರಿಸಿದ್ದಾರೆ. ತೃತೀಯಾವಿಭಕ್ತಿಗೆ 'ಇನ್' ಪ್ರತ್ಯಯವು (ಹೆಚ್ಚಾಗಿ ಸ್ವರದ ಪರಿಸರದಲ್ಲಿ) ದೊರೆಯುತ್ತದೆ. 'ಇಮ್' ಕ್ಕಿಂತ 'ಇನ್' ಇಟ್ಟುಕೊಳ್ಳುವುದೇ ಉಚಿತವೆಂದು ಕೈಪಿಡಿಕಾರರು ಅಭಿಪ್ರಾಯಿಸಿದ್ದಾರೆ. ಕೇಶಿರಾಜನು ಉ, ಋ, ಎ, ಔ, ಸ್ವರಗಳಿದ್ದಾಗ 'ಇನ್' ಆಗಮವೆಂದು ಪ್ರತ್ಯೇಕವಾಗಿ ಹೇಳಿದ್ದಾನೆ (ಸೂ. ೧೧೮). ಉದಾ : ತಳಿರ್ವಾಸಿನಿಂದೆ, ಪಿತೃವಿನ, ಮತ್ತಿನ, ಗೌವಿನ, ಇನಾಗಮದ ಬಗೆಗೆ ಅವನು ಹೇಳಿದ ಇತರ ವಿಷಯಗಳು ತೃತೀಯೆಗೆ ನೇರವಾಗಿ ಸಂಬಂಧಿಸಿರುವುದಿಲ್ಲ.

6.8.12.4 ಚತುರ್ಥಿವಿಭಕ್ತಿ ಸಂಪ್ರದಾನಕಾರಕಾರ್ಥದಲ್ಲಿ ರುಚಿ, ಈರ್ಷೆ, ಮತ್ಸರ, ಹಿತ, ಭೀತಿ, ಉನ್ನತಿ, ಸ್ವಭಾವ, ಕಾರಣ, ನಮಸ್ಕಾರ, ಅನಾದರ, ನೆನಹು, ಅನಿಷ್ಟ, ಸಾದೃಶ್ಯ, ಪ್ರತಿನಿಧಿ ಇಷ್ಟ— ಈ ಅರ್ಥವುಳ್ಳ ಶಬ್ದಗಳಲ್ಲಿ ಬಳಕೆಗೊಳ್ಳುತ್ತದೆ (ಸೂ. ೧೪೧). ಉದಾ : ಬ್ರಾಹ್ಮಣಂಗೆ, ಕೂಸಿಂಗೆ, ಕವಿಗೆ, ಸವತಿಗೆ, ಪಶುವಿಂಗೆ, ಪಾಪಕ್ಕೆ ಪುಲಿಗೆ, ಲೋಕಕ್ಕೆ, ಜಗಕ್ಕೆ, ಸಿಂಹಕ್ಕೆ, ಮುಕ್ಕಿಗೆ, ದೇವರ್ಗೆ, ಪುಲ್ಗೆ, ಆತಂಗೆ, ತುಪ್ಪಕ್ಕೆ, ಕೆಳೆಯಂಗೆ.

ಕೇಶಿರಾಜನು ಇವುಗಳ ಮುಂದಿರುವ ವಾಕ್ಯಭಾಗದ ಅರ್ಥವನ್ನನುಸರಿಸಿ ಹೀಗೆ ೧೫-೧೬ ಬಗೆಯಲ್ಲಿ ಚತುರ್ಥಿಯನ್ನು ವರ್ಗೀಕರಿಸಿರುವುದು ಸಮಂಜಸವಲ್ಲ.

ಅಕಾರಾಂತ ಪುಲ್ಲಿಂಗವಿದ್ದರೆ ಚತುರ್ಥಿ 'ಗೆ' ಪ್ರತ್ಯಯಕ್ಕೆ ಮುನ್ನ ಬಿಂದು ಬರುತ್ತದೆ. ಅಕಾರಾಂತ ನಪುಂಸಕಲಿಂಗವಿದ್ದರೆ (ವಿಕಲ್ಪವಾಗಿ) ಪ್ರತ್ಯಯವು ದ್ವಿತ್ವವಾಗುತ್ತದೆ. ಅಕಾರಾಂತವಿಲ್ಲದ ಸ್ವರ ಹಾಗೂ ವ್ಯಂಜನಾಂತಗಳಿಗೆ ಚತುರ್ಥಿ ಪ್ರತ್ಯಯ ಲಿಂಗ-ವಚನ ಪರಿಗಣನೆಯಿಲ್ಲದೆಯೆ 'ಗೆ' ಎಂದಾಗುತ್ತದೆ. ಉದಾ : ಅರಸಂಗೆ, ಕವಿಗೆ, ಆಕೆಗೆ, ನಿನಗೆ, ಕಿವಿಗಳ್ಗೆ.

ಸಂಸ್ಕೃತದ ಪುಂ, ಸ್ತ್ರೀಲಿಂಗದ ಬಹುವಚನಗಳಿಗೆ ಪ್ರತ್ಯಯ ದ್ವಿತ್ವವಾಗುವಿಕೆ ವಿಕಲ್ಪವೆಂದು (ಸೂ. ೧೨೫) ಹೇಳಿರುವುದರಲ್ಲಿ ಅರ್ಥವಿಲ್ಲ. ಕೇಶಿರಾಜನು

ಕೆ (ಕ್ಕೆ), ಗೆ (ಗ್ಗೆ). ಜ್‌ಗೆ ಎಂಬುವುಗಳನ್ನು ಚತುರ್ಥಿಗೆ ಪ್ರತ್ಯಯವೆಂದು ಹೇಳಿರುವನು.

6.8.12.5 ಅಪಾದಾನ ಕಾರಕದಲ್ಲಿ ಪಂಚಮೀ ಬರುತ್ತದೆ. ಭಯ ಸ್ವೀಕಾರ ಇಷ್ಟಾನಿಷ್ಟ, ಹೇತು. ಉದಯ, ಗುರುತ್ವದಲ್ಲಿ ಇದು ವರ್ತಿಸುತ್ತದೆ (ಸೂ.೧೪೨). ಇದಕ್ಕೆ 'ಅತ್ತಣಿಂ' ಪ್ರತ್ಯಯವಿದೆ. ಮತ್ತೊಂದೆಡೆ (ಸೂ. ೧೨೬) 'ಅಲ್' ಎಂಬ ಪಂಚಮೀ ಪ್ರತ್ಯಯವನ್ನು 'ಅತ್ತಣಿಂ' ಎಂದು ನಿರ್ಮಿಸುವರೆಂದು ಹೇಳಿದ್ದಾನೆ. 'ಅತ್ತಣಿಂ' ಅತ್ತಣಿಂದ, ಅತ್ತಣಿಂದೆ ಎಂದು ತೃತೀಯಾವನ್ನಾಗಿ ಮಾಡಿ ಪ್ರಯೋಗಿಸುತ್ತಾರೆನ್ನುತ್ತಾನೆ. ಇಲ್ಲಿ 'ಅತ್ತಣ್'ಕ್ಕಿಂತ 'ಇಂದ' ಪ್ರತ್ಯಯವೇ ಮುಖ್ಯವಾಗಿದೆ. ತೃತೀಯಾ ಪಂಚಮೀ ಒಂದೇ ಪ್ರತ್ಯಯದಿಂದ ವರ್ತಿಸುತ್ತವೆ. ವಾಸ್ತವವಾಗಿ ಪಂಚಮೀ ಹಾಗೂ ತೃತೀಯಾಗಳಿಗೆ ಬೇರೆಬೇರೆ ಕಾರಕಾರ್ಥ ಇರುವುದರಿಂದ ಅವೆರಡನ್ನೂ ಪ್ರತ್ಯೇಕವಾಗಿಯೇ ಪರಿಗಣಿಸತಕ್ಕದ್ದು. ಪಂಚಮೀ ವಿಭಕ್ತಿ ಇಲ್ಲ ಎನ್ನುವುದು ತಪ್ಪಾಗುತ್ತದೆ. ಕೇಶಿರಾಜ ಕೊಟ್ಟಿರುವ ಅಲ್ ಅಥವಾ ಇಂದ ಪ್ರತ್ಯಯಗಳೇ ಪಂಚಮೀ ಅರ್ಥದಲ್ಲಿ ವರ್ತಿಸುತ್ತವೆ. ಸಂದರ್ಭ, ಅರ್ಥ ತಿಳಿದುಕೊಂಡು ವಿಭಕ್ತಿಯನ್ನು ನಿರ್ಧರಿಸಬೇಕು. ಒಂದೇ ರೂಪವುಳ್ಳ ಭಿನ್ನ ಬದ್ಧ ಆಕೃತಿಮಾಗಳು ಇವಾಗಿವೆ.

6.8.12.6 ಷಷ್ಠೀ :

ಸಂಬಂಧದಲ್ಲಿ ಷಷ್ಠೀ ಬರುತ್ತದೆ. ಅದು ಸ್ವಾಮಿ, ಕುಲ. ಜಾತಿ, ಅವಯವ, ಲಕ್ಷಣ. ಸನ್ನಿಧಾನ, ಸಂಸ್ಪರ್ಶ, ಸಂಬಂಧ ಇತ್ಯಾದಿ ಯಾವುದೇ ಸಂಬಂಧವಿರಬಹುದು. ಉದಾ : ಊರೊಡೆಯ, ಎಮ್ಮ, ಸೊಮ್ಮು, ಗಿಳಿಯ ಪಿಂಡು, ಕೊಡೆಯ ಕಾವು, ಸಿಂದದ ಕುದುರೆ, ಊರುಮುಂದು, ತೋಳಬಂದಿ, ನೊಸಲಕಣ್ಣದೇವಂ.

ಕೆಲವರು ಷಷ್ಠೀ 'ಅ' ಪ್ರತ್ಯಯವನ್ನು ದೀರ್ಘಿಸುತ್ತಾರೆ. ಆ ದೀರ್ಘ ಖೇದದಲ್ಲಿ ಸಂಭ್ರಮದಲ್ಲಿ ಪ್ರಯೋಗಿಸಲ್ಪಡುತ್ತದೆ. ಉದಾ : ಮೃಡನಾ, ಗಂಗಾಧರನಾ... ಬೇಡಗಡಾ. ಇಲ್ಲಿ ಖೇದ ಸಂಭ್ರಮದಲ್ಲಿ ಪ್ರಯೋಗಿಸುವ 'ಅ' ಷಷ್ಠೀ ಆಗುತ್ತದೆಯೆ ? ಎಂಬುದು ಸಂದೇಹ.

6.8.12.7 **ಸಪ್ತಮೀ :**

ಅಧಿಕರಣಕಾರಕದಲ್ಲಿ ಸಪ್ತಮೀ, ಇದು ನಿರ್ಧಾರಣ. ವಿಷಯ, ವ್ಯಾಪಕ, ವ್ಯವಹಾರ ಕಾಲ, ಸತ್ಯರ್ಥಗಳಲ್ಲಿ ವರ್ತಿಸುತ್ತದೆ (ಸೂ. ೧೪೪). 'ಅಲ್ಲಿ' 'ಒಳ' ಪ್ರತ್ಯಯಗಳು ಇದಕ್ಕೆ ಇವೆ. ದ್ವಿಗ್ವಾಚಿಯಾದ ಅಕಾರಾಂತದ ಮೇಲೆ ಒಮ್ಮೊಮ್ಮೆ 'ಅಲ್' ಹಾಗೂ ಉಕಾರಾಂತ ದ್ವಿಗ್ವಾಚಿಗಳಿಗೆ 'ಎ' ತ್ವವು ಬರುತ್ತದೆ. ಉದಾ : ಕೊಳದೊಳ್, ಕೊಳದಲ್ಲಿ, ಮೂಡತೆಂಕಬಡಗ, ಪೊಡವಿಪತಿಗಳಲ್ಲ-ನಲ್...... (ಮೂಡಲ್, ತೆಂಕಲ್... ಇತ್ಯಾದಿ ವಿಕಲ್ಪ), ಒಳಗು-ಒಳಗೆ, ಪೊಱಗು-ಪೊಱಗೆ.

6.8.12.8 ನಾಗವರ್ಮನು ಹೇಳದ ಸತಿ ಸಪ್ತಮಿಯ ಬಗ್ಗೆ ಕೇಶಿರಾಜ ನಾಲ್ಕು ಸೂತ್ರಗಳಲ್ಲಿ ವಿಶೇಷವಾಗಿ ಹೇಳಿ ಅದು ಕನ್ನಡದ ಅಸಾಧಾರಣ ಲಕ್ಷಣಗಳ ಲ್ಲೊಂದು ಎಂದಿರುವನು. ಆದರೆ ಸಪ್ತಮೀ 'ಅಲ್' ಪ್ರತ್ಯಯ ಸತ್ಯರ್ಥದಲ್ಲಿ ಬಳಕೆಗೊಳ್ಳುವಾಗ ಕ್ರಿಯಾಪದಕ್ಕೆ ಅನ್ವಯವಾಗುತ್ತದೆ. ಅಲ್ಲದೆ ಅದು ಬಳಕೆ ಯಾದ ವಾಕ್ಯದಲ್ಲಿ ಎರಡು ಕರ್ತೃಗಳಿರುತ್ತವೆ. ಕ್ರಿಯಾಪದಕ್ಕೆ ಯಾವುದು ಅನ್ವಯವಾಗುತ್ತದೆಯೋ ಅದು ಆಖ್ಯಾತಪ್ರತ್ಯಯವೆನಿಸುತ್ತದೆ. ವಿಭಕ್ತಿ ಪ್ರತ್ಯಯವೆನಿಸುವುದಿಲ್ಲ. ಇದಲ್ಲದೆ 'ಅಲ್' ಪ್ರತ್ಯಯ ಅನ್ವಯವಾದ ವಾಕ್ಯಖಂಡವು ಇಡೀ ವಾಕ್ಯದಲ್ಲಿ ಮುಖ್ಯವಾಗಿರುವುದಿಲ್ಲ. ಮುಖ್ಯ ವಾಕ್ಯದ ಕರ್ತೃವಿಗೆ 'ಅಲ್' ಹತ್ತುವುದಿಲ್ಲ. ಉದಾ : ಪಾವಸೆ ಕಿಡಲ್ ನೀರ್ ತಿಳಿದುದು, (ಇಲ್ಲಿ ಕಿಡಲೊಂಡಂ ಬಳಸುವುದು ಸೂಕ್ತವೆಂಬುದು ಕೇಶಿ ರಾಜನ ಅಭಿಮತ, ಆದರೆ ಅದಕ್ಕೆ ಮಹತ್ವವಿಲ್ಲ.) ಇಲ್ಲಿ ನೀರ್ ತಿಳಿದುದು ಮುಖ್ಯವಾಕ್ಯ.

'ಅಲು' 'ರೆ', 'ಒಡನೆ' 'ಎ', 'ಅಷ್ಟರಲ್ಲಿ' 'ವರೆಗೆ' ಮುಂತಾದವು ಸಬದ್ಧ *(conditioned)* ಕ್ರಿಯಾ ರೂಪಗಳನ್ನು ರೂಪಿಸಿರುವ ಬದ್ಧರೂಪಗಳಾಗುತ್ತವೆ. ಉದಾ : ನೀನು ಬರಲು ಅವಳು ಎದ್ದಳು. ನೀನು ಬಂದರೆ ಅವಳು ಬಂದಾಳು. ನೀನು ಬಂದೊಡನೆ ಅವಳು ಹಾಡುತ್ತಾಳೆ. ಅವಂ ಬರೆ ಅವಳ್ ಪಾಡಿದಳ್, ನೀನು ಬರುವಷ್ಟರಲ್ಲಿ ಅವಳು ಬರುತ್ತಾಳೆ. ನೀನು ಬರುವವರೆಗೆ ಅವಳು ಬಾರಳು ಇತ್ಯಾದಿ. ಇಂತಹವು ಯಾವುದೇ ಭಾಷೆಯಲ್ಲಿ ಇರಬಹುದಾದ

ರೂಪಗಳು. ಆದ್ದರಿಂದ ಇವುಗಳನ್ನು ಕನ್ನಡದ ಅಸಾಧಾರಣ ಲಕ್ಷಣ ಎಂದೆನ್ನಲು ನಮ್ಮ ಸಮ್ಮತವಿಲ್ಲ.

**6.8.12.9 ಸಂಬೋಧನ :**

ಸಾಮಾನ್ಯವಾಗಿ ಪ್ರಥಮಾ ಏಕವಚನ ಲೋಪವಾಗಿ ಸಂಬೋಧನವಾಗುತ್ತದೆ. ಹ್ರಸ್ವ, ದೀರ್ಘಗಳೂ ಬಳಕೆಗೊಳ್ಳಬಹುದು. ಉದಾ : ಕೇಳ ಮಾಧವ. ಎಲೆ ಗಣಪ, ಜಿನೇಂದ್ರಾ, ಏ ಅಥವಾ ಎ ಸಂಬೋಧನೆಗೆ ಬಳಕೆಯಾಗುತ್ತದೆ. ಅಕಾರಂತವಿದ್ದಲ್ಲಿ ಬಿಂದು ಬರುತ್ತದೆ. ಉದಾ : ಕೊಳನೇ. ಏಕವಚನದಲ್ಲಿ ಒಮ್ಮೊಮ್ಮೆ ದೀರ್ಘವಿಲ್ಲ. ಉದಾ : ಎಲೆತುಂಬಿ,

ಸಂಬೋಧನ ವಿಭಕ್ತಿಗೆ ಕಾರಕವಿಲ್ಲ, ಆದ್ದರಿಂದ ಇದು ವಿಭಕ್ತಿಯಲ್ಲ.

# ೭

## ಸಮಾಸ

7,0 ಸಮಾಸ ಎಂದರೆ ಸಮಸ್ತಪದ, ಕೂಡುನುಡಿ. ಎರಡು ಅಥವಾ ಹೆಚ್ಚು ಪದಗಳನ್ನು ಒಂದು ವಿಶಿಷ್ಟಾರ್ಥವುಂಟಾಗುವಂತೆ ಕೂಡಿಸಿ ರಚಿಸಿದರೆ ಸಮಾಸವಾಗುತ್ತದೆ. 'ನಾಮಪದಂ ಅರ್ಥಾನುಗಂ ಆಗೆಬಗೆಗೆ ಸಮಾಸಂನೆಗಳ್ಗುಂ' ಎಂದು ಕೇಶಿರಾಜನು ಸಮಾಸದ ಲಕ್ಷಣವನ್ನು ಹೇಳಿದ್ದಾನೆ. ಸಮಾಸ ಘಟಿಸುವಾಗ ಮಧ್ಯದಲ್ಲಿರುವ ವಿಭಕ್ತಿಗಳು ಲೋಪವಾಗುತ್ತವೆಂದೂ ಹೇಳುತ್ತಾನೆ. ಲೋಪ ಆಗಮ ಆದೇಶಗಳು ಆಗಬಹುದಾದರೂ ಸಮಾಸದಲ್ಲಿ ರೂಪಬದಲಾವಣೆಗಿಂತ ಅರ್ಥವೈಶಿಷ್ಟ್ಯಗಳ ಕಡೆಗೆ ಪ್ರಾಧಾನ್ಯವಿರುವುದರಿಂದ ಅವು ಗೌಣವೆನಿಸುತ್ತವೆ. ಸಮಾಸವನ್ನು ಬೇರೆ ಬೇರೆ ರೀತಿಯಲ್ಲಿ ವಿಗ್ರಹಿಸಬಹುದು. ಹೀಗೆ ವಿಗ್ರಹ ಮಾಡಿದಾಗ ಬೇರೆ ಬೇರೆ ಅರ್ಥಪ್ರಾಧಾನ್ಯ ಉಂಟಾಗಬಹುದು. ಅರ್ಥ ಪ್ರಾಧಾನ್ಯ ಬೇರೆ ಬೇರೆ ಆದಂತೆ ಅದಕ್ಕನುಗುಣವಾಗಿ ಬೇರೆ ಬೇರೆ ಸಮಾಸಗಳಾಗಬಹುದು. ಅಂತೆಯೆ ಅನೇಕ ವೇಳೆ ವಿಗ್ರಹವೇ ಮುಖ್ಯವಾಗುತ್ತದೆ. ಉದಾಹರಣೆಗೆ ಮುಂಗಾಲ್ ಇದನ್ನು ಮುಂದಣಕಾಲ್ ಎಂದು ವಿಗ್ರಹಮಾಡಿದರೆ ತತ್ಪುರುಷ, ಕಾಲಮುಂದು ಎಂದು ವಿಗ್ರಹಿಸಿದರೆ ಅಂಶೀ ಸಮಾಸವಾಗುತ್ತದೆ. ಇಷ್ಟಿದ್ದರೂ ವಿಗ್ರಹದ ಪೂರ್ವಪದ ಸಾಮಾನ್ಯವಾಗಿ ಪ್ರಕೃತಿರೂಪದಲ್ಲಿರುತ್ತದೆ. ಇಲ್ಲಿ ಸಂಧಿಯಾವಾಗಲೂ ನಡೆಯುತ್ತದೆಂದು ಹೇಳಲುಬಾರದು.

7.1. ಕೇಶಿರಾಜ ಸಮಾಸಗಳನ್ನು ಎಂಟು ವಿಧವಾಗಿ ವಿಂಗಡಿಸುತ್ತಾನೆ. ೧. ತತ್ಪುರುಷ ೨. ಕರ್ಮಧಾರಯ ೩, ದ್ವಿಗು ೪. ಬಹುವ್ರೀಹಿ ೫. ದ್ವಂದ್ವ ೬. ಅವ್ಯಯೀಭಾವ (ಅಂಶೀ) ೭. ಕ್ರಿಯಾ ಮತ್ತು ೮. ಗಮಕ.

ಇವುಗಳಲ್ಲಿ ಮೊದಲ ಮೂರು ಉತ್ತರ ಪದಾರ್ಥ ಪ್ರಧಾನ, (ಕರ್ಮಧಾರಯ ತತ್ಪುರುಷದ ಭೇದವಾದರೆ ದ್ವಿಗು ಕರ್ಮಧಾರಯದ ಭೇದವಾಗುತ್ತದೆ) ಅಂಶೀ ಸಮಾಸ ಪೂರ್ವಪದಾರ್ಥ ಪ್ರಧಾನವಾದರೆ, ದ್ವಂದ್ವ ಉಭಯ ಅಥವಾ ಸರ್ವ

ಪದಾರ್ಥಪ್ರಧಾನವಾಗಿದೆ. ಬಹುವ್ರೀಹಿ ಅನ್ಯ ಪದಾರ್ಥಪ್ರಧಾನ ಸಮಾಸ. ಮೊದಲಿನವಾರು ಸಂಸ್ಕೃತದವು ಕೊನೆಯ ಕ್ರಿಯಾ ಮತ್ತು ಗಮಕ ಸಮಾಸಗಳು ಕನ್ನಡದವು.

ಉದಾಹರಣೆಗಳು:–

7.1.1 **ತತ್ಪುರುಷ:** ಮಲ್ಲಿಗೆಯ + ನನೆ > ಮಲ್ಲಿಗೆನನೆ (ಷಷ್ಠೀ)
ಕನ್ನಡದ + ಪಕ್ಕಿ > ಕನ್ನಡಪಕ್ಕಿ ,,
ಅರಸನ + ಮನೆ > ಅರಮನೆ ,,
ಮೈಯಿಂ + ಕಲಿ > ಮೆಯ್ಗಲಿ (ತೃತೀಯಾ)
ಕಣ್ಣಿಂ + ಕುರುಡ > ಕಣ್ಗುರುಡ ,,
ಕೂವಲಿಂಗೆ + ಎಣ್ಣೆ > ಕೂವಲೆಣ್ಣೆ (ಚತುರ್ಥಿ)
ಪುಲಿಯಿಂದೆ + ಅಳ್ಕು > ಪುಲಿಯಳ್ಕು (ಪಂಚಮೀ)
ಕಣ್ಣಿನೊಳ್ + ಉರಿ > ಕಣ್ಣುರಿ (ಸಪ್ತಮಿ)
ವಾಕ್ಕಿನೊಳ್ + ಪಟು > ವಾಕ್ಪಟು ,,

ಮೇಲೆ ಸೂಚಿಸಿರುವಂತೆ ವಿಗ್ರಹಮಾಡುವಾಗ ವಿಭಕ್ತಿಯ ಸಂಬಂಧವನ್ನು ಕಲ್ಪಿಸುವುದು ಸರಿಯಲ್ಲವೆಂದು ಕುಶಾಲಪ್ಪಗೌಡ ಅಭಿಪ್ರಾಯಪಡುತ್ತಾರೆ. ಅವರು ಒಂದು ಪ್ರಕೃತಿ ಅಥವಾ ಧಾತು ಇನ್ನೊಂದು ಪದದೊಡನೆ ಸಂಯೋಜನೆಯಾಗುವುದನ್ನು ಪದರಚನಾ ವಿನ್ಯಾಸಕ್ಕೆ ಅನುಗುಣವಾಗಿ ವಿಭಜಿಸುವುದು ಸಾಧ್ಯವಿಲ್ಲವೆ ? ಎಂದೆನ್ನುತ್ತಾರೆ. ಮಲ್ಲಿಗೆನನೆ ಗುಲಾಬಿಹೂ ಇವುಗಳನ್ನು ಮಲ್ಲಿಗೆಯ ಗುಲಾಬಿಯ ಎಂದು ಬಿಡಿಸುವುದಾದರೆ ಕುಶಾಲಪ್ಪಗೌಡ ನರಸಿಂಹಾಚಾರ್ಯ ಮುಂತಾದವುಗಳನ್ನು ಕುಶಾಲಪ್ಪನ, ನರಸಿಂಹನ ಎಂದೆಲ್ಲ ಬಿಡಿಸುವುದಾದರೆ ಹಾಸ್ಯಾಸ್ಪದವಾದೀತು. ಒಳಕೋಂಟೆ ಇದನ್ನು ಒಳಗಣ+ಕೋಂಟೆ, ಒಳ+ಕೋಂಟೆ, ಒಳಗು+ಕೋಂಟೆ ಎಂದು ಬೇರೆ ಬೇರೆ ಬಗೆಯಲ್ಲಿ ವಿಗ್ರಹಮಾಡಲಾಗಿದೆ. ಆದ್ದರಿಂದ ಸಹಜನಾಮಗಳನ್ನು ಮಲ್ಲಿಗೆ+ನನೆ. ಒಳ+ಕೋಂಟೆ ಇತ್ಯಾದಿಯಾಗಿ ಬಿಡಿಸುವುದೇ ಹೆಚ್ಚು ಸೂಕ್ತವೆಂದು ಅವರು ಅಭಿಪ್ರಾಯಪಡುತ್ತಾರೆ.೧ ಕೇಶಿರಾಜನೂ ಇದನ್ನು ಗಮನಿಸಿದಂತಿದೆ. ಅಲರಂತಪ್ಪಕಣ್ ಎಂದು ಬಿಡಿಸುವುದಕ್ಕಿಂತ ಅಲರ್+ಕಣ್ ಎನ್ನುವುದೇ ಸೂಕ್ತವೆನ್ನುತ್ತಾನೆ (ಸೂ. ೧೮೯).

೧. ಕುಶಾಲಪ್ಪಗೌಡ (1986) ಪು ೨೧೨–೨೧೩

7.1.2 **ಕರ್ಮಧಾರಯ :**

ಉತ್ತರಪದದಲ್ಲಿ ಅರ್ಥಪ್ರಾಧಾನ್ಯವಿದ್ದು ಎರಡೂ ಪದಗಳು ಏಕಾಶ್ರಯ ವಸ್ತು (ಒಂದೇ ವಿಭಕ್ತಿ) ಹೊಂದಿರಬೇಕು. ತತ್ಪುರುಷದಂತೆಯೇ ಇದೂ ಇರುವುದಾದರೂ ಏಕಾಶ್ರಯವಾಗಿರುವುದರಿಂದ ಪ್ರತ್ಯೇಕ ಸಮಾಸವೆನಿಸಿತು.

ಉದಾ– ಪಚ್ಚನೆ+ತಲೆ > ಪಂದಲೆ, ಕೆಚ್ಚನೆ+ಜಡೆ > ಕೆಂಜಡೆ,
ಬಿಸು+ನೆತ್ತರ್ > ಬಿಸುನೆತ್ತರ್. ಬಿಱು+ಗಾಳಿ > ಬಿಱುಗಾಳಿ
ತೆಳ್ಳಿತ್ತು (ತೆಳ್)+ಬಸಿಱ್ > ತೆಳ್ವಸಿಱ್, ಮೆಲ್ಲಿತ್ತು+ಅಡಿ > ಮೆಲ್ಲಡಿ
ಪಿಂದು (ಪೆರ್)+ಪೊಲೆ > ಪೆರ್ವೊಲೆ, ಇನಿದು (ಇನ್) + ಮಾವು > ಇಮ್ಮಾವು
ನಡು (ನಟ್)+ಇರುಳ್ > ನಟ್ಟಿರುಳು,

ಕೇಶಿರಾಜನು ಸಮಾಸಗಳನ್ನು ಹೇಳುವಾಗ, ಸಮಾಸಕ್ರಿಯೆ ನಡೆಯುವಲ್ಲಿ ಉಂಟಾಗುವ ಧ್ವನಿ ಬದಲಾವಣೆಗೆ (ಸಂಧಿ) ಯ ಕಡೆಗೆ ಗಮನಹರಿಸಲು ಹೋಗಿ ಕೆಲವು ತಪ್ಪು ಉದಾಹರಣೆಗಳನ್ನೂ ನೀಡಿ ಎಡವಿದ್ದಾನೆ. ಉದಾಹರಣೆಗೆ ಕರ್ಮಧಾರಯಕ್ಕೆ ಎರಡು+ಐದು > ಈರೆಯ್ದು ಮುಂತಾದವನ್ನು ನೀಡಿದ್ದಾನೆ. ಇವು ಕರ್ಮಧಾರಯಗಳಾಗವುದಿಲ್ಲ.

7.1.3 **ದ್ವಿಗು :** ಪೂರ್ವಪದದಲ್ಲಿ ಸಂಖ್ಯಾವಾಚಕವಿದ್ದರೆ ದ್ವಿಗು ಆಗುತ್ತದೆ.

ಉದಾ– ಎರಡು+ಮಾತು > ಎರಡ್ಮಾತು. ಒಂದು (ಒರ್)+ಕಣ್ಣು > ಒಕ್ಕಣ್ಣು
ಒಂದು+ಕೂಟ > ಒಕ್ಕೂಟ, ಮೂರು+ಪತ್ತು > ಮೂವತ್ತು.

7.1.4 **ದ್ವಂದ್ವ :** ಎಲ್ಲ ಪದಗಳು ಪ್ರಧಾನವಾಗಿದ್ದು ಒಂದೇ ನಾಮದಂತೆ ಕಾರ್ಯ ನಿರ್ವಹಿಸುತ್ತಿದ್ದರೆ ದ್ವಂದ್ವ ಸಮಾಸವಾಗುತ್ತದೆ.

ಉದಾ– ರಾಮಲಕ್ಷ್ಮಣಸೀತೆಯರ್, ಮರಗಿಡಬಳ್ಳಿ, ಪುಲ್ಪೊದಱುಪಕ್ಕಿ–ಮಿಗಂಗಳ್, ಆಟಪಾಟಕೂಟಂಗಳ್.

7.1.5 **ಬಹುವ್ರೀಹಿ :** ಪೂರ್ವೋತ್ತರವೆರಡೂ ಪದಗಳು ಅನ್ಯಪದಾರ್ಥವನ್ನು ಸೂಚಿಸುತ್ತಿದ್ದರೆ ಬಹುವ್ರೀಹಿ.

ಉದಾ– ನಿಡುಮೂಗಿ, (ನಿಡಿದಾದ ಮೂಗುಳ್ಳವ)
ಹಣೆಗಣ್ಣ (ಹಣೆಯಲ್ಲಿ ಕಣ್ಣುಳ್ಳವ)

ಬಹುವ್ರೀಹಿಯಲ್ಲಿ ಬೇರೆ ಪ್ರಭೇದಗಳೂ ಉಂಟು.

ಪಣಾಹಣಿ, ದಂಡಾದಂಡಿ, ಖಡ್ಗಾಖಡ್ಗಿ, ಕೇಶಾಕೇಶಿ-(ಹೊಡೆದಾಟಕ್ಕೆ)

ಐದಾರು, ಹತ್ತೆಂಟು, ಏಳೆಂಟು-(ಸಂಖ್ಯಾ ಅನಿರ್ದಿಷ್ಟಕ್ಕೆ.)

7.1,6 **ಅವ್ಯಯೀಭಾವ (ಅಂಶೀ)**— ಪೂರ್ವಪದ ಅವ್ಯಯವಾಗಿದ್ದು ಸಮಾಸಪದವೂ ಅವ್ಯಯವಾಗುತ್ತಿದ್ದರೆ ಅವ್ಯಯೀಭಾವಸಮಾಸವೆಂದು ಸಂಸ್ಕೃತದಲ್ಲಿರುವ ವ್ಯಾಖ್ಯೆ. ಆದರೆ ಕನ್ನಡ ವ್ಯಾಕರಣಕಾರರೆಲ್ಲ ಪೂರ್ವಪದ ಪ್ರಾಧಾನ್ಯವೆಂದಿಷ್ಟೇ ಹೇಳಿದ್ದಾರೆ. (ಶ.ಮ.ದ. ೧೭೬) ಇದಕ್ಕೆ ಭಟ್ಟಾಕಳಂಕನು ಅಂಶೀ ಸಮಾಸವೆನ್ನುತ್ತಾನೆ. ಇದೇ ಸಮಂಜಸವೆನಿಸುತ್ತದೆ.

ಉದಾ– ಮುಂಗಾಲ್ < ಕಾಲಿನ ಮುಂದು. ಪಿಂದಲೆ < ಹಿಂದಿನ ತಲೆ ಪಿಂತಿಲ್ < ಇಲ್ಲ ಪಿಂತು (ಮನೆಯ ಹಿಂದು)

7.1.7. **ಕ್ರಿಯಾ** : ಉತ್ತರಪದ ಅಥವಾ ಪೂರ್ವಪದದಲ್ಲಿ ಕ್ರಿಯಾ ಸೂಚಕ ಪದವಿದ್ದರೆ ಕ್ರಿಯಾಸಮಾಸವೆನಿಸುತ್ತದೆ. "ಮೊದಲೊಳ್ ಕಾರಕಮುಂ ಆಗ್ರದೊಳ್ ಕ್ರಿಯೆಯುಂ ಅರ್ಥವ್ಯಕ್ತಿಯಿಂ ಕೂಡೆ ಕ್ರಿಯಾಸಮಾಸಂ" ಎಂದು ಕೇಶಿರಾಜ ಹೇಳಿದ್ದಾನೆ, ಆದರೆ ಬಳೆದೊಟ್ಟಂ, ಧನಂಬಡೆದಂ ಮುಂತಾದ ಉದಾಹರಣೆಗಳನ್ನು ಗಮನಿಸಿದರೆ ಕರ್ಮಧಾರಯವೋ ತತ್ಪುರುಷವೋ ಎನಿಸು ತ್ತವೆ. ಕಾರಣ ಕ್ರಿಯಾರ್ಥ ಪದ ಇಲ್ಲಿ ಮುಖ್ಯ. ಅದಿದ್ದರೆ ಸಾಕು ಅದನ್ನು ಹೇಗೆ ವಿಗ್ರಹಿಸಿದರೂ ಕ್ರಿಯಾಸಮಾಸವೆನ್ನಬೇಕಾಗುತ್ತದೆ.

ಉದಾ : ಬಳೆಯುಂ ತೊಟ್ಟ > ಬಳೆದೊಟ್ಟಂ,

ಮಱೆಯುಂ ಪೊಕ್ಕಂ > ಮಱೆವೊಕ್ಕಂ.

7.1.8 ಸಮಾಸಗಳು ಮೂಲತಃ ನಾಮಪದವರ್ಗದಲ್ಲಿ ಸೇರತಕ್ಕವು. ಮೊಗಂ ನೋಡಿದಂ. ಪ್ರಿಯಂನುಡಿದಂ ಇತ್ಯಾದಿ ಉದಾಹರಣೆಗಳನ್ನು ನಾಮಪದ ಎಂದು ಹೇಗೆನ್ನಬೇಕು ಎಂಬ ಪ್ರಶ್ನೆ ಇದೆ. ಆದರೆ ನಾಮಪದವೂ ಈ ಸಮಸ್ತ ಪದಗಳಲ್ಲಿರುವುದರಿಂದ ಈ ಸಮಾಸವನ್ನು ಹೇಳಲಾಗಿದೆ ಎಂದಿಟ್ಟುಕೊಳ್ಳ ಬಹುದು. ಕ್ರಿಯೆ+ಕ್ರಿಯೆ ಸೇರಿದ (ಸಂಯುಕ್ತ ಕ್ರಿಯೆಯುಳ್ಳ)ಕೂಡುನುಡಿಗಳೂ ಕನ್ನಡದಲ್ಲಿವೆ— 'ಕೂಡಾಡು' 'ಬಿದ್ದಾಡು' 'ಒದ್ದಾಡು' 'ಮುಗಿಬೀಳು' 'ಹಿಡಿದಿಡು' ಇತ್ಯಾದಿ. ಇಂಥವುಗಳು ಕೇಶಿರಾಜನ ಅಥವಾ ಇತರ ಕನ್ನಡ

ವೈಯಾಕರಣರ ಗಮನಕ್ಕೆ ಏಕೆ ಬರಲಿಲ್ಲವೋ ಆಶ್ಚರ್ಯ! ಇನ್ನು ಸಮಾಸದಲ್ಲಿನ ಬಿಂದುವಿನ ಬಗೆಗೆ ಹೇಳಿದ ವಿಚಾರ. ಆಧುನಿಕ ಕನ್ನಡದಲ್ಲಿ ಬಿಂದು ಮಾಯವಾಗಿರುವುದರಿಂದ ಈಗ ಅದು ಅಪ್ರಸ್ತುತವೆನಿಸುತ್ತದೆ.

7,1.9. **ಗಮಕ ಸಮಾಸ :** ಕೇಶಿರಾಜ ಮಾತ್ರ ಈ ಸಮಾಸವನ್ನು ಹೇಳಿ ಕನ್ನಡದ ಅಸಾಧಾರಣ ಲಕ್ಷಣದಲ್ಲಿ ಸೇರಿಸಿದ್ದಾನೆ. 'ಸಂಖ್ಯಾಸರ್ವನಾಮ ಗುಣವಚನ ಕೃತ್ತು ಪೂರ್ವಂ ಗಮಕಂ ತನಗತ್ತಂ ಪೆಜಗಿತ್ವಂ ತನಗರಿಪದನಿಲ್ಲಿ ಕರ್ಮಧಾರಯಮದುವುಂ. ಎಂಬುದು ಅವನ ವ್ಯಾಖ್ಯೆ 'ಗಮಕ' ಎಂಬ ಹೆಸರನ್ನು ನೀಡಿದವನೂ ಕೇಶಿರಾಜನೇ. 'ಗಮಕ' ಎಂದರೆ ಸ್ಪಷ್ಟಪಡಿಸು, ವ್ಯಕ್ತಗೊಳಿಸು ಎಂಬರ್ಥ.

ಪೂರ್ವಪದದಲ್ಲಿ ಸಂಖ್ಯೆ/ಸರ್ವನಾಮ/ಗುಣವಚನ/ಕೃದಂತ ಇದ್ದು ಉತ್ತರಪದ ಕಾರಕವಾಗಿದ್ದರೆ 'ಗಮಕ' ಸಮಾಸವಾಗುತ್ತದೆ. ಗಮಕದಲ್ಲಿ ಇನ್ನೂ ಕೆಲ ವಿಶೇಷತೆಗಳಿವೆ,

೧, ಅಂತರಾಳದಲ್ಲಿ ಇ ಕಾರ ಇರುವ ಗುಣವಚನಗಳ ಮುಂದೆ 'ಅ'ಕಾರ ಬರುತ್ತದೆ.

೨, ಪೂರ್ವಪದದಲ್ಲಿ ಅದು, ಇದು, ಉದು ಇದ್ದರೆ ಅವುಗಳಿಗೆ ಅ, ಈ, ಊ, ಆದೇಶವಾಗುತ್ತವೆ.

೩. ಅರಿಸಮಾಸ ದೋಷ ಇದಕ್ಕೆ ಅನ್ವಯಿಸುವುದಿಲ್ಲ

೪. ಇದು ಕರ್ಮಧಾರಯದ್ದೇ ಆದ ಒಂದು ಪ್ರಭೇದವಾಗಿದೆ.

೫. ಪೂರ್ವಪದದ ಮುಂದೆ ಬರುವ 'ಅ'ಕಾರ ಎಲ್ಲೆಡೆ ಸಾಮಾನ್ಯವಾಗಿದೆ.

೬. ಉಳಿದ ಸಮಾಸ ಪದಗಳಲ್ಲಿ ಪೂರ್ವೋತ್ತರ ಪದಗಳು ಮಧ್ಯಗತ ವಿಭಕ್ತಿ ಲೋಪದಿಂದಾಗಿ ಒಂದೇ ನಾಮ ಘಟಕದಂತೆ ತೋರಿದರೆ ಗಮಕದಲ್ಲಿ ಪೂರ್ವೋತ್ತರ ಪದಗಳು ಬಿಡಿಬಿಡಿಯಾಗಿ ಸ್ಪಷ್ಟವಾಗಿ ಇರುತ್ತವೆ. ಒಂದೇ ನಾಮ ಘಟಕದಂತೆ ಒತ್ತಾಗಿ ತೋರುವುದಿಲ್ಲ.

ಗಮಕ ಸಮಾಸ, ಸಮಾಸವೇ ಅಲ್ಲವೆಂಬ ವಾದಗಳೂ ಇವೆ. ಈ ಬಗ್ಗೆ ಸಾಕಷ್ಟು ಚರ್ಚೆಯಾಗಿ ಕೆಲವರು ಪರವಾಗಿಯೂ ಕೆಲವರು ವಿರೋಧವಾಗಿಯೂ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಕನ್ನಡ ವೈಯಾಕರಣರು ಸಂಸ್ಕೃತದ ಸಮಾಸಗಳ ಮಾದರಿಯನ್ನೆ ಕನ್ನಡಕ್ಕೆ ಅನ್ವಯಿಸಿದ್ದಾರೆ. ಸಂಸ್ಕೃತದಲ್ಲಿ 'ಅಲುಕ್' ಎಂಬ ಸಮಾಸವು ಇದ್ದು ಅದು ಕನ್ನಡದ ಗಮಕವನ್ನು ಬಹಳಷ್ಟು ಹೋಲುತ್ತದೆ. ಸಮಾಸದಲ್ಲಿ ಎರಡು ಅಥವಾ ಹೆಚ್ಚು ಪದಗಳು ಒಟ್ಟಾಗಿ ಯಾವ ಅರ್ಥ ನೀಡುತ್ತವೆಯೆಂಬುದು ಮುಖ್ಯವೇ ಹೊರತು ಆ ಪದಗಳ ನಡುವೆ ವಿಭಕ್ತಿ ಲೋಪವಾಗುತ್ತವೆಯೋ, ಸಂಧಿ ಕಾರ್ಯ ನಡೆಯುತ್ತದೆಯೋ ಎಂಬುದು ಮುಖ್ಯವಲ್ಲ, ಸಮಾಸದ ಒರೆಗಲ್ಲೆಂದರೆ 'ಏಕಾರ್ಥಭಾವದ ಅರ್ಥಾನುಗಮ್ಯತ್ವ'. ಗಮಕದಲ್ಲಿ ಬಿಡಿ ಬಿಡಿ ಪದಗಳ ಮೂಲಕ ಒಂದು ಪದದಿಂದ ಇನ್ನೊಂದು ಪದಕ್ಕೆ ಅರ್ಥ ಗಮಿಸುತ್ತ ಎಲ್ಲ ಪದಗಳೂ ಸೇರಿ ಒಟ್ಟಾರ್ಥವನ್ನು ನೀಡುತ್ತವೆ. ಗಮಕ ಸಮಾಸದಲ್ಲಿ ಸಂಧಿ ಕಾರ್ಯಕ್ಕೆ ಎಡೆ ಇಲ್ಲ. ಉದಾ : ಮುಖತಾವರೆ (ಮುಖದಾವರೆಯಲ್ಲ), ಬೆಸೆಕೋಲ್ (ಬೆಸೆಗೋಲ್ ಅಲ್ಲ) ಸಂಸ್ಕೃತದಲ್ಲೂ ಅಷ್ಟೇ. ಉದಾ– ದೇವಾನಾಂ ಪ್ರಿಯ, ಮನಸಾ ಗುಪ್ತಾ, ಆತ್ಮನೇಪದಂ. ಕಾರಣ ಸಂಸ್ಕೃತದ ಅಲುಕ್ ಸಮಾಸವನ್ನು ಗಮನದಲ್ಲಿಟ್ಟುಕೊಂಡೇ ಪದಗಳಲ್ಲಿ ಅರ್ಥ ಗಮಿಸುತ್ತ ಸಾಗುವ ಗಮಕ ಸಮಾಸವನ್ನು ಕನ್ನಡದಲ್ಲಿ ಕೇಶಿರಾಜ ಗುರುತಿಸಿದ್ದಾನೆ.

ಇಷ್ಟು ಹಿನ್ನೆಲೆಯಲ್ಲಿ ಡಾ. ಪಿ. ಕೃಷ್ಣಭಟ್ಟರು ಗಮಕ ಸಮಾಸವನ್ನು ಒಪ್ಪಿಕೊಳ್ಳಲು ನಾಲ್ಕು ಅಂಶಗಳನ್ನು ಮುಂದಿಟ್ಟಿದ್ದಾರೆ೧—

೧. ಉಳಿದ ಸಮಾಸಗಳ ಬಗ್ಗೆ ಸಾಂಪ್ರದಾಯಿಕ ಲಕ್ಷಣಗಳನ್ನು ಒಪ್ಪಿಕೊಳ್ಳುವುದಾದರೆ ಗಮಕವನ್ನೊಂದು ಸಮಾಸವೆಂದು ಸ್ವೀಕರಿಸಬಹುದು. ಉಳಿದ ಸಮಾಸಗಳ ಬಗ್ಗೆ ಸಾಂಪ್ರದಾಯಿಕ ದೃಷ್ಟಿಕೋನ, ಗಮಕದ ಬಗ್ಗೆ ನವೀನ ದೃಷ್ಟಿಕೋನ ಈ ತಾರತಮ್ಯ ಸರಿಯಲ್ಲ.

೨. ಪೂರ್ವಪದ ವಿಶೇಷಣವಾಗಿರುವ (ಸರ್ವನಾಮ ಗುಣವಚನ, ಕೃದಂತ) ಮತ್ತು ಪರಪದ ನಾಮಪದವಾಗಿರುವ ಸಮಾಸವೇ ಗಮಕ, ಸಂಸ್ಕೃತ ಸಮಾಸ ಲಕ್ಷಣಗಳ ದೃಷ್ಟಿಯಿಂದ ನೋಡಿದರೆ ಅದು ಕರ್ಮಧಾರಯ.

---

೧. ಪಿ. ಕೃಷ್ಣಭಟ್–ಕನ್ನಡ ವ್ಯಾಕರಣ ಪರಂಪರೆಯ ಮೇಲೆ ಸಂಸ್ಕೃತದ ಪ್ರಭಾವ. (೧೯೮೯) ಪು. ೨೮೧.

ಪೂರ್ವಪದದ ವಿಭಕ್ತಿಗಳು ಲೋಪವಾಗದಿರುವ ಹಾಗೂ ಪೂರ್ವೋತ್ತರ ಪದಗಳು ವ್ಯಸ್ತವಾಗಿರುವ ದೃಷ್ಟಿಯಿಂದ ಅದು ಅಲುಕ್-ಸಮಾಸ.

೩. ಪೂರ್ವಪದ ಸಂಖ್ಯಾವಾಚಕವಾಗಿದ್ದಾಗ ಲಕ್ಷಣದಲ್ಲಿ ಅದು ತತ್ಪುರುಷ ವನ್ನು ಹೋಲುತ್ತದೆ. ಆದರೆ ನಿಷ್ಪನ್ನರೂಪದಲ್ಲಿ ತತ್ಪುರುಷಕ್ಕಿಂತ ಭಿನ್ನವಾಗಿರುತ್ತದೆ.

೪. ಗಮಕ ಸಮಾಸವನ್ನು ಹೋಲುವ ರೂಪಗಳು ಇಂದಿನ ಕನ್ನಡದಲ್ಲೂ ಇವೆ. ಉದಾ– ಓದೋ ಹುಡುಗ, ಕರೆಯೋದನ ಇತ್ಯಾದಿ.

### 7.1.10 ಅರಿಸಮಾಸ

ಅಚ್ಚಕನ್ನಡ ಪದಗಳೊಂದಿಗೆ ಸಂಸ್ಕೃತ ಪದಗಳನ್ನು ಸೇರಿಸಿ ಮಾಡುವ ಸಮಾಸವು ಕನ್ನಡಕ್ಕೆ ಸಹಜವಲ್ಲವೆಂದು ಅದು ಅರಿಸಮಾಸ ದೋಷವೆಂದು ಕೇಶಿರಾಜನು ಪರಿಗಣಿಸಿದ್ದಾನೆ. ಆದರೂ ಮಂಗಳಾರತಿ, ಪೂಮಾಲೆ, ಪಟ ಮಾನಿಸ, ಜೊನ್ನವಕ್ಕಿ ಮುಂತಾದ ಸಮಾಸಗಳನ್ನು ಒಪ್ಪಿಕೊಂಡಿದ್ದಾನೆ. ಮಣಿ ಮಂಚ ಮುಂತಾದ ೨೧ ತತ್ಸಮ ಪದಗಳನ್ನು ಕನ್ನಡ ಸಮಾಸದಲ್ಲಿ ಬಳಸಬಹು ದೆನ್ನುತ್ತಾನೆ. ಆದರೆ ಭಾಷೆ ಬೆಳವಣಿಗೆಗಾಗಿ ತನ್ನ ರಚನೆಯ ಚೌಕಟ್ಟಿನಲ್ಲಿ ಏನು ಬೇಕಾದರೂ ಸ್ವೀಕರಿಸುತ್ತದೆ ಎಂಬುದನ್ನು ಕನ್ನಡಭಾಷೆ ತೋರಿಸಿಕೊಟ್ಟಿದೆ. ಕೇಶಿರಾಜನು ಭಾಷಾಮಿಶ್ರಣವನ್ನು ಎಷ್ಟೇ ತಡೆಯಲು ಯತ್ನಿಸಿದರೂ ಅದು ನಿರಂತರವಾಗಿ ಮುಂದುವರಿಯಿತು. ಸಂಸ್ಕೃತವಲ್ಲದೆ ಅನೇಕ ಅನ್ಯಭಾಷಾಪದ ಗಳನ್ನು ಕೂಡಿಸಿಕೊಂಡೂ ಕನ್ನಡ ಪದಗಳು ಮುನ್ನಡೆದಿವೆ. ಕಡ್ಡಿಪೆನ್ನು, ರೈಲುಗಾಡಿ, ಬಸ್ ನಿಲ್ದಾಣ, ಇಂತಹ ಹಲವಾರು ಪದಗಳೇ ಸಾಕ್ಷಿಯಾಗಿವೆ.

ಆಧುನಿಕ ಭಾಷಾವಿಜ್ಞಾನಿಗಳು ಸಮಾಸವನ್ನು ಎರಡು ಬಗೆಯಾಗಿ ವಿಂಗಡಿಸಿ ವಿವರಿಸುತ್ತಾರೆ. ೧) ಅಂತಃಕೇಂದ್ರೀಯ (*Endocentric*)
೨) ಬಹಿಃಕೇಂದ್ರೀಯ (*Exocentric*).

### 7.2 ಅಂತಃಕೇಂದ್ರೀಯ ಸಮಾಸ :

ಪೂರ್ವಪದ ಇಲ್ಲವೆ ಉತ್ತರ ಪದಗಳಲ್ಲಿಯೆ ಅರ್ಥವು ಅಡಕಗೊಂಡು ಕೇಂದ್ರೀಕೃತವಾಗಿದ್ದರೆ ಅಂತಃಕೇಂದ್ರೀಯ ಸಮಾಸವೆನಿಸುವುದು, ಅರ್ಥದಂತೆ

ಭಾಷಿಕ ಕಾರ್ಯದ ದೃಷ್ಟಿಯಿಂದಲೂ ಸಮಾಸದಲ್ಲಿ ಸೇರಿರುವ ಪದಗಳಲ್ಲಿಯ ಯಾವುದಾದರೊಂದು ಪದದ ಕಾರ್ಯವನ್ನೇ ಸಮಸ್ತಪದ ನಿರ್ವಹಿಸುತ್ತದೆ. ಉದಾಹರಣೆಗೆ 'ಹುರಿಗಡಲೆ' ಎಂಬ ಸಮಾಸ ಹುರಿಯಲಾಗಿರುವ ಕಡಲೆ ಎಂಬ ಅರ್ಥವನ್ನೇ ಹೊಂದಿದೆ. ಅಂದರೆ ಹುರಿ, ಕಡಲೆ ಎಂಬ ಅರ್ಥಗಳನ್ನು ಬಿಟ್ಟು ಬೇರೊಂದು ಅರ್ಥ ಇಲ್ಲಿ ಇಲ್ಲ. ಹುರಿದ+ಕಡಲೆ ಎಂದು ಸಮಾಸವನ್ನು ವಿಗ್ರಹಿಸಬಹುದು. ಪೂರ್ವಪದ ಕೃದಂತವೂ ಉತ್ತರಪದವು ನಾಮವೂ ಆಗಿದೆ. 'ಹುರಿಗಡಲೆ' ಏಕೀಕೃತ ಸಮಸ್ತಪದವು ನಾಮಪದದ ಕಾರ್ಯವನ್ನು ನಿರ್ವಹಿಸುತ್ತದೆ.

ಅಂತಃಕೇಂದ್ರೀಯ ಸಮಾಸದಲ್ಲಿ—

7.2.1 ನಾಮಪದ+ನಾಮಪದ= ನಾಮಪದವಾಗಬಹುದು.

ಉದಾ : ಹಿರಿಯನು+ಕಿರಿಯನು= ಹಿರಿಕಿರಿಯರು
ರಾಮನು+ಲಕ್ಷ್ಮಣನು= ರಾಮಲಕ್ಷ್ಮಣರು
ಕಸ+ಕಡ್ಡಿ= ಕಸಕಡ್ಡಿ
ಮಳೆ+ಕಾಲ= ಮಳೆಗಾಲ

7.2.2 ವಿಶೇಷಣ + ನಾಮಪದ = ನಾಮಪದವಾಗಬಹುದು.
ಇಲ್ಲವೆ ಗುಣವಾಚಿ + ನಾಮಪದ = ನಾಮಪದವಾಗಬಹುದು.

ಉದಾ : ತಣ್ಣನೆ+ಕೊಳು= ತಂಗೊಳು
ಹೊಸ+ಕನ್ನಡ= ಹೊಸಗನ್ನಡ
ಹಿರಿ+ಹಾವು= ಹೆಬ್ಬಾವು
ಹಿರಿಯ+ಮನೆ= ಹಿರಿಮನೆ
ಕೆಂಪು+ಮಣ್ಣು= ಕೆಮ್ಮಣ್ಣು
ಕಿರು+ನಾಲಗೆ= ಕಿರುನಾಲಗೆ
ಎಳೆ+ಕರು=ಎಳಗರು
ಮೆಲ್ಲಿತು+ನುಡಿ= ಮೆಲ್ನುಡಿ
ಬಿರು+ಗಾಳಿ= ಬಿರುಗಾಳಿ

7.2.3 ಕರ್ಮಪದ + ಕೃದಂತ = ಕೃದಂತವಾಗಬಹುದು.

ಉದಾ : ಬಳೆಯಂ+ತೊಟ್ಟ= ಬಳೆದೊಟ್ಟಂ

ಕೈಯನ್ನು+ಹಿಡಿದ= ಕೈವಿಡಿದ

ಮನವನು+ಸೆಳೆದ= ಮನಸೆಳೆದ

7.2.4 ಕೃದಂತ + ನಾಮಪದ= ನಾಮಪದವಾಗಬಹುದು

ಉದಾ : ಸಿಡಿಯುವ+ಮದ್ದು= ಸಿಡಿಮದ್ದು

ಕಡೆಯುವ+ಕೋಲು= ಕಡೆಗೋಲು

ಹರಿಯುವ+ನದಿ= ಹರಿವನದಿ

7.2.5 ಸಂಖ್ಯಾವಾಚಕ + ನಾಮ = ನಾಮಪದವಾಗಬಹುದು

ಉದಾ : ಐದು+ಮೂಲಿ= ಐಮೂಲಿ

ಷಟ್+ಕೋನ= ಷಟ್ಕೋನ

ಮೂರು+ಹುರಿ= ಮುಪ್ಪುರಿ

7.2.6 ಸಂಖ್ಯಾವಾಚಕ + ಸಂಖ್ಯಾವಾಚಕ = ಸಂಖ್ಯಾವಾಚಕ

ಉದಾ : ಇರ್+ಪತ್ತು= ಇಪ್ಪತ್ತು

ಮೂರು+ಪತ್ತು= ಮೂವತ್ತು

ಇರ್+ಸಾಸಿರ= ಇಚ್ಛಾಸಿರ

## 7.3 ಬಹಿಃಕೇಂದ್ರೀಯ ಸಮಾಸ :

ಬಹಿಃಕೇಂದ್ರೀಯ ಸಮಾಸದಲ್ಲಿ ಪೂರ್ವಪದ ಹಾಗೂ ಉತ್ತರಪದಗಳಲ್ಲಿ ಯಾವುದರಲ್ಲೂ ಅರ್ಥವು ಕೇಂದ್ರೀಕೃತವಾಗಿರುವುದಿಲ್ಲ. ಕೇಶಿರಾಜ ಹೇಳುವ ಬಹುವ್ರೀಹಿ ಸಮಾಸವೇ ಇದಾಗಿದೆ. 'ಪದನೆರಡು ಪಲವುಂ ಮೇಣ್ ಪರ ಪದಾರ್ಥಮಂ ಬಯಸುತಿರೆ' ಎಂದು ಅವನು ಹೇಳಿದುದನ್ನೇ ಬಹಿಃಕೇಂದ್ರೀಯಕ್ಕೆ ಹೇಳಬಹುದು.

ಉದಾ : ಹಣೆ+ಕಣ್ಣ= ಹಣೆಗಣ್ಣ (ಶಿವ)

ನೀಲ+ಕಂಠ= ನೀಲಕಂಠ (ಶಿವ)

ಚತುರ್+ಮುಖ (ಉಳ್ಳವ)= ಚತುರ್ಮುಖ (ಬ್ರಹ್ಮ)

೮

# ತದ್ಧಿತ ಹಾಗೂ ಕೃತ್ ಪ್ರತ್ಯಯಗಳು

## (*Derivative Suffixes*)

ಪ್ರತ್ಯಯವನ್ನು ಅಂಟಿಸಿ ನಾಮಪ್ರಕೃತಿಯನ್ನು ನಾಮಪದವಾಗಿ ರೂಪಿಸುವುದನ್ನು 'ತದ್ಧಿತ' ಹೆಸರಿನಿಂದ ಕರೆಯುತ್ತಾರೆ. ಸಾಧಿತ ರೂಪಗಳಿಗೆ ಬಳಸಲಾಗುವ ಪ್ರತ್ಯಯಗಳೇ ತದ್ಧಿತ ಪ್ರತ್ಯಯಗಳು. ಕ್ರಿಯಾಧಾತುಗಳಿಂದ ಕೂಡ ನಾಮಪದಗಳನ್ನು ರೂಪಿಸಬಹುದು ಹಾಗೆ ರೂಪಿಸಲು ಬಳಸಲಾಗುವ ಪ್ರತ್ಯಯಗಳನ್ನು ಕೃತ್ ಪ್ರತ್ಯಯಗಳೆನ್ನುತ್ತಾರೆ. ರೂಪಿತವಾದ ನಾಮಕ್ಕೆ ಕೃನ್ನಾಮವೆನ್ನುತ್ತಾರೆ. ಕೇಶಿರಾಜನು ೧೯ ಸೂತ್ರಗಳಲ್ಲಿ ಇಂತಹ ಪ್ರತ್ಯಯಗಳನ್ನು ವಿವರಿಸಿದ್ದಾನೆ. ಅವು ಹೀಗಿವೆ :

**8.1 ಪುಲ್ಲಿಂಗ ತದ್ಧಿತ ಪ್ರತ್ಯಯಗಳು :**

8.1.1 –ಇಗ

ಕಬ್ಬಿಗ, ತೋಂಟಿಗ, ಸಿಂಗರಿಗ (ನಿರ್ಮಿಸುವವ ಎಂಬರ್ಥ)
ತಂಬುಲಿಗ, ಗಂಧಿಗ (ಮಾರುವವ ಎಂಬರ್ಥ)
ಹಡಪಿಗ, ಚಾಮರಿಗ (ವೃತ್ತಿಮಾಡುವವ ಎಂಬರ್ಥ)
ಲೆಕ್ಕಿಗ, ಜೋಯಿಸಿಗ (ಬಲ್ಲವ ಎಂಬರ್ಥ)
ಪುಸಿಗ, ಅಟಮಟಿಗ (ಸುಳ್ಳು ಹೇಳುವವ), ಸಾಲಿಗ (ಸಾಲುಳ್ಳವ)
ಹಂಗಿಗ (ಹಂಗಿನಲ್ಲಿರುವವ), ಅಕ್ಕರಿಗ (ಸುಶಿಕ್ಷಿತ),
ದೇಗುಲಿಗ (ಪೂಜಾರಿ), ಚಿಪ್ಪಿಗ (ಶಿಲ್ಪಿ).

8.1.2 –ವಳ್ಳ/ –ವಳ, –ವಡಿಗ, –ಅಯ್ತ (ನಡೆಯಿಸುವವ ಎಂಬರ್ಥ)

ಅಡಪವಳಂ, ಮಡಿವಳ, ಆಡುವಳ್ಳ
ಸೂಟಾಯ್ತರ್, ಡಂಗಾಯ್ತರ್,
ಕುಂಚವಡಿಗಂ, ಪುಲ್ಲವಡಿಗ.

8.1.3 –ಗಾಱ (ಇದರೊಳಗೆ ವ್ಯವಹರಿಸುವವ ಎಂಬರ್ಥ)
–ಗಾಱ (ಇದನ್ನು ಮಾಡುವವ ಎಂಬರ್ಥ)
ಬೇಹುಕಾಱಂ, ಬಂದಿಕಾಱಂ, ಮೂಲೆಗಾಱಂ, ಬಳೆಗಾಱಂ,
ಮಣಿಗಾಱಂ.

8.1.4 –ಇಜ (ಅಲ್ಲಿ ಜನಿಸಿದವ-ಬೆಳೆದವ ಎಂಬರ್ಥ)
ಪೊಟಲಿಜಂ, ಆಲರಿಜಂ

8.1.5 –ಕುಟಿಗ, –ಗ, -ಉಳಿಗ (ಇದರಲ್ಲಿ ಹೆಚ್ಚಾಗಿ ವರ್ತಿಸುವವ)
ಕಲ್ಕುಟಿಗಂ, ನೀರ್ಕುಟಿಗಂ, ಮಾತುಗ, ಬೀದಿಗಂ, ಮಣ್ಣುಳಿಗಂ,
ದಂಡುಳಿಗಂ.

8.1.6 –ಗುಳಿ. –ಉಣಿ (ಶೀಲಕ್ಕೆ ಸಂಬಂಧಿಸಿದ ಅರ್ಥ)
ಲಂಚಂಗುಳಿ, ಸಾಲಂಗುಳಿ, ತುಡುಗುಣಿ, ಕಳ್ಳುಣಿ,

8.1.7 –ಉಕ/ಕುಳಿ/ಆಳಿ/ಆಡಿಗ/ಇಕ (ಶೀಲಕ್ಕೆ ಸಂಬಂಧಿಸಿದ ಅರ್ಥ)
ಸಣ್ಣುಕಂ, ಜೋಡುಕಂ. ಓಡುಕುಳಿ, ಮಱುಕುಳಿ, ಓದಾಳಿ, ಜೂದಾಳಿ,
ಪೂವಡಿಗಂ, ದೇವಡಿಗಂ, ಕರಿಕಂ, ಹುಸಿಕಂ.

8.1.8 –ಉಗ, –ಅಟಿಗ, (ವ್ಯವಹರಿಸುವವ/ವರ್ತಿಸುವವ ಅರ್ಥ)
ಊರುಗಂ, ಹೆಣ್ಣುಗಂ, ನೇಣುಗಂ, ಮಾವಟಿಗಂ. ದೀವಟಿಗಂ.

8.1.9 –ಕ, –ಇಲ (ವ್ಯಕ್ತಿಸೂಚಿ)
ಒಡಕಂ, ಕಿಡುಕಂ, ಸಿಡುಕಂ, ಗಾಪಿಲಂ, ಪಚ್ಚೆಯಿಲಂ.

8.1.10 –ಉಳ್ಳ, –ಒಡೆಯ, –ವಂತ (ಇಲ್ಲಿ ಈ ವಸ್ತು ಇದೆ ಎಂಬರ್ಥ)
ಓದುಳ್ಳಂ, ಗುಣಮುಳ್ಳಂ, ಚಾಗದೊಡೆಯಂ, ಕೊಡೆಯೊಡೆಯಂ,
ಸಿರಿವಂತಂ, ಪುಣ್ಯವಂತಂ.

8.1.11 –ವಣಿಗ (ಊಟವೆ ಜೀವಿತವೆಂದು ಬಾಳುವವ)
ಕೂಟ್ವಣಿಗಂ,. ಲಂಚವಣಿಗಂ.

8.1.12 –ಅನೆಯ, –ಮೆ (ಸಂಖ್ಯೆಯಲ್ಲಿ
ಒಂದನೆಯಂ, ಸೂಱನೆಯಂ, ಒಮ್ಮೆ, ಪಲವೇ.

## 8.2 ಸ್ತ್ರೀ ಸೂಚಕ ಪ್ರತ್ಯಯಗಳು

8.2.1 -ಇತಿ, -ಗಿತಿ, -ತಿ, -ಅಳ್, -ಎ
ಚಾಮರಗಿತಿ, ಮದ್ದಳಿಗಿತಿ, ಒಕ್ಕಲಿತಿ, ಕನ್ನಡತಿ, ಪೊಲತಿ, ಅವಳ್, ಇವಳ್, ಉವಳ್, ಕಿಱಿಯಳ್, ಇನಿಯಳ್, ಚದುರೆ, ಜೋಡೆ.

8.2.2 -ಲಿ (ಪುಂ, ಸ್ತ್ರೀ. ಎರಡಕ್ಕೂ ಬಳಕೆ, ಸ್ವಭಾವ ಸೂಚಿ)
ನಾಣಿಲಿ

## 8.3 ನಪುಂಸಕ ಸೂಚಕ ಪ್ರತ್ಯಯಗಳು

8.3.1 -ವ್, -ತ್
ಮಱವೆ, ಅಳವಿ, ಬಳವಿ, ನಿಲವು, ಇರವು, ಕಳವು, ಉಱುವು, ತಿಳಿವು, ಉರಿತ, ಕಡಿತ, ನೆಗಟ್ತೆ, ಪುಗುತೆ.

9.3.2 -ಇಕೆ, -ತನ, -ಉಮೆ (ಚೇತನ ಭಾವದಲ್ಲಿ)
ಉನ್ನತಿಕೆ, ಉದ್ಧತಿಕೆ, ದೂಸರಿಕೆ, ಕಲಿತನಂ, ಮರುಳ್ತನಂ, ಪೆಣ್ತನಂ, ತಕ್ಕುಮೆ, ತೀರಮೆ, ಅಟ್ಕುಮೆ.

8.3.3 -ಗೆ, -ಕೆ, -ಮೆ, -ಪು, -ಪಿ, -ಉ (ಇತರೆಡೆಗಳಲ್ಲಿ)
ಉಡುಗೆ, ಬಿಸುಗೆ, ಮಡಿಕೆ, ಕಾಣ್ಕೆ, ಒಲ್ಮೆ, ಜಾಣ್ಮೆ, ಕೆಂಪು, ಕಡುಪು, ತಣ್ಪು, ಕಲ್ಪಿ, ನೋಂಪಿ, ಸಿಗ್ಗು, ಕಿವುಡು, ಕೆಂಚು.

## 8.4 ಧಾತುರೂಪ ವ್ಯತ್ಯಾಸದಿಂದಾಗುವ ತದ್ಧಿತನಾಮಗಳು

8.4.1 ಇ>ಎ/ಏ ಸ್ವರ ವ್ಯತ್ಯಾಸ
ಕಿಡು > ಕೆಡು > ಕೇಡು

8.4.2 ಉ>ಒ/ಓ ಸ್ವರ ವ್ಯತ್ಯಾಸ
ತುಡು > ತೊಡು > ತೋಡು

8.4.3 ದೀರ್ಘ ಸ್ವರ ಆಗುವುದಕ್ಕೆ
ಇಡು > ಈಡು, ಬಿಡು > ಬೀಡು, ಪಡು > ಪಾಡು.

8.4.4 -ಡ್ > -ಟ್ ಪರಿವರ್ತನೆ
ಕೂಡು > ಕೂಟ, ಓಡು > ಓಟ, ಮಾಡು > ಮಾಟ.

8.4.5 ಯಾವ ವ್ಯತ್ಯಾಸವಿಲ್ಲದೆ ಧಾತುವೇ ನಾಮದಂತೆ ವರ್ತಿಸುವುದು,
ತಡೆ, ನಡೆ, ಬಿಸು, ಉರ್ಕ್ಕು, ಸೊರ್ಕ್ಕು, ದಾಂಟು.

8.4.6 ಆಯಿಲ
ಆಡ್ಡಾಯಿಲಂ, ರೇಖಾಯಿಲಂ.

## 8.5 ಕೃತ್ ಪ್ರತ್ಯಯಗಳು

8.5.1 ಉ — ಉಗ್+ಉ> ಉಗ್ಗು
8.5.2 ಮೆ — ಒಲ್+ಮೆ> ಒಲ್ಮೆ
8.5.3 ಅ — ಸೋಲ್+ಅ> ಸೋಲಂ
8.5.4 ವಿ — ಬಳೆ+ವಿ> ಬಳವಿ
8.5.5 ಅವು — ನಿಲ್+ಅವು> ನಿಲವು
8.5.6 ಅವೆ — ಮರೆ+ಅವೆ> ಮರವೆ
8.5.7 ತ — ಕಡಿ+ತ> ಕಡಿತ
8.5.8 ತೆ — ಪುಗು+ತೆ> ಪುಗುತೆ
8.5.9 ಅಮೆ — ತೀರ್+ಅಮೆ> ತೀರಮೆ
8.5.10 ಪು — ಪಡೆ+ಪು>ಪಡೆಪು
8.5.11 ಪಿ — ಕಲಿ+ಪಿ> ಕಲ್ಪಿ
8.5.12 ಕ — ಉಡು+ಕ> ಉಡುಕುಂ

8.5.13 ಕೃತ್ ಪ್ರತ್ಯಯವೆಂಬ ಪದವನ್ನು ಸಂಸ್ಕೃತ ವ್ಯಾಕರಣಗಳಲ್ಲಿ–ನ್ಯೂನ ಕ್ರಿಯೆಗಳನ್ನು ಹೇಳುವಲ್ಲಿ ಧಾತುವಿಗೆ ಸೇರುವ ಪ್ರತ್ಯಯಗಳಿಗೆ ಬಳಸಲಾಗುತ್ತದೆ. ಆದರೆ ಕನ್ನಡ ವ್ಯಾಕರಣಗಳು ಅದನ್ನು ಆಖ್ಯಾತ ಪ್ರಕರಣದಲ್ಲಿ ನಿರೂಪಿಸಿವೆ. ದು, ಇ, ಉತುಂ, ಉತ್ತುಂ, ಉತೆ, ಉತ್ತೆ, ಅಲ್, ಅಲ್ಕೆ, ಒಡೆ ಇತ್ಯಾದಿ ಪ್ರತ್ಯಯಗಳು ಸೇರಿದರೆ ಧಾತುಗಳು ಅವ್ಯಯಗಳಾಗಿ ಮಾರ್ಪಡುತ್ತವೆಯಾದ್ದರಿಂದ ಅವುಗಳನ್ನು ಕೃದಂತಾವ್ಯಯಗಳೆಂದು ಆಧುನಿಕ ವೈಯಾಕರಣರು ಹೇಳುತ್ತಾರೆ (ಕ. ವ್ಯಾ. ಪಂ. ಸಂ. ಪ್ರ. ಪು. 319).

೯

# ಕ್ರಿಯಾಪದ ಶಾಸ್ತ್ರ

9.0 ಕ್ರಿಯಾಪದಗಳು ಕ್ರಿಯೆಯನ್ನು ಸೂಚಿಸುವಂತಹವು. ಧಾತುವಿಗೆ ಆಖ್ಯಾತ ವಿಭಕ್ತಿಗಳು ಸೇರುವುದರ ಮೂಲಕ ಕ್ರಿಯಾಪದಗಳು ರಚನೆಯಾಗುತ್ತವೆ. ಪೂರ್ಣಕ್ರಿಯಾಪದ ಅಪೂರ್ಣ ಕ್ರಿಯಾಪದ ಎಂದು ಕ್ರಿಯಾಪದಗಳಲ್ಲಿ ಎರಡು ಪ್ರಕಾರಗಳು. ಪೂರ್ಣಕ್ರಿಯಾಪದಗಳಲ್ಲಿ ಕರ್ತೃವಿನ ಪುರುಷ, ಲಿಂಗ, ವಚನ ಗಳನ್ನು ಸೂಚಿಸುವ ಆಖ್ಯಾತ ಪ್ರತ್ಯಯಗಳು ಇರುತ್ತವೆ. ಇವುಗಳನ್ನು ಸರ್ವ ನಾಮ ಪ್ರತ್ಯಯಗಳೆಂದೂ ಕರೆಯುತ್ತಾರೆ. ಕ್ರಿಯಾಪದಕ್ಕೆ ಸಂಬಂಧಿಸಿದ ಪ್ರಕ ರಣವನ್ನು ಕೇಶಿರಾಜನು ಆಖ್ಯಾತ ಪ್ರಕರಣಂ ಎಂದು ಕರೆದಿದ್ದಾನೆ.

ವಾಕ್ಯದಲ್ಲಿ ಕ್ರಿಯಾಪದ ಬಹುಮುಖ್ಯವಾದ ಘಟಕವಾಗಿದೆ. 'ಧಾತು' ವನ್ನು ಕೇಶಿರಾಜನು 'ಕ್ರಿಯಾರ್ಥದ ಮೂಲವೂ ಪ್ರತ್ಯಯರಹಿತವೂ ಆಗಿರುವುದು ಧಾತು ಇದನ್ನು ನಿಷೇಧರೂಪದಿಂದ ಗುರುತಿಸುತ್ತಾರೆ ಎನ್ನುತ್ತಾನೆ'. ಸಾಂಪ್ರ ದಾಯಕ ವ್ಯಾಕರಣಗಳಲ್ಲಿ ಸಾಮಾನ್ಯವಾಗಿ ಕ್ರಿಯಾಮೂಲವಾದುದನ್ನು 'ಧಾತು' ಎಂಬುದಾಗಿ ನಾಮಮೂಲವಾದುದನ್ನು 'ಪ್ರಕೃತಿ' ಎಂಬುದಾಗಿ ಗುರುತಿಸ ಲಾಗಿದೆ. ಧಾತುವಿಗೆ ಪ್ರೇರಣಾರ್ಥಕ, ಕಾಲವಾಚಕ, ಸರ್ವನಾಮ, ಮುಂತಾದ ಪ್ರತ್ಯಯಗಳು ಅನ್ವಯವಾಗಿ ಕ್ರಿಯಾಪದ ಸಿದ್ಧಿಸುತ್ತದೆ.

9.1 ಕೇಶಿರಾಜನು "ಅಮರಯಿರೆನೆವುಗಳಕ್ಕುಂ" ಎಂದು ಒಟ್ಟು ಆರು ಆಖ್ಯಾತ ಪ್ರತ್ಯಯಗಳನ್ನು ಹೇಳುತ್ತಾನೆ (ಅಮ್, ಆರ್, ಅಯ್, ಇರ್, ಎನ್, ಉವು ಎಂಬುವೇ ಅವು)

ಉದಾ : ಅಂ–ಎಸೆದಂ, ಬಗೆದಂ, ನಡೆದಂ

ಅರ್–ಆಡಿದರ್, ಕಟ್ಟಿದರ್, ಮೆಟ್ಟಿದರ್

ಅಯ್–ನೋಡಿದಯ್, ತೆಗೆದಯ್, ಪೊರ್ದಿದಯ್
ಇರ್–ಪೊರ್ದುವಿರ್, ತಿರ್ದುವಿರ್, ಪಳಿಪಿರ್
ಎನ್–ನಿಮಿರ್ಚಿದೆನ್, ಒಡರ್ಚಿದೆನ್, ಬಣ್ಣಿಪೆನ್
ಎವು–ಉಸಿರ್ದೆವು, ಕೇಳ್ದೆವು,

ಕೇಶಿರಾಜನು ಆಖ್ಯಾತ ಪ್ರಕರಣದಲ್ಲಿ ಧಾತು ವಿಚಾರ; ಆಖ್ಯಾತ ವಿಭಕ್ತಿಗಳ ವಿವರಣೆ; ಕೆಲವು ವಿಶಿಷ್ಟ ಧಾತು ವಿಚಾರ; ಕಾಲವಾಚಕ, ಪುರುಷವಾಚಕ ಪ್ರತ್ಯಯಗಳ ವಿಚಾರ ಹೀಗೆ ಅಸ್ತವ್ಯಸ್ತವಾಗಿ ಒಟ್ಟು ಕ್ರಿಯಾಪದ ವಿಚಾರಗಳನ್ನು ಸಂದರ್ಭಕ್ಕನುಗುಣವಾಗಿ ಹೇಳುತ್ತ ಸಾಗಿದ್ದಾನೆ.

ಕೇಶಿರಾಜನು ಧಾತುಗಳನ್ನು ಸ್ವರಧಾತು, ಕಾಂತ, ಗಾಂತ, ಇಸು ಪ್ರತ್ಯಯಾಂತವಾಗಿರುವ ಸ್ವಯಂಕರ್ತೃಕ ಧಾತುಗಳೆಂದು ವರ್ಗೀಕರಣ ಮಾಡಿದ್ದಾನೆ. ಇದನ್ನು ಬೇರೆ ತೆರನಾಗಿಯೂ ಮಾಡಬಹುದು,: ಏಕಾಕ್ಷರ ಧಾತುಗಳು, ಈರಕ್ಕರ ಧಾತುಗಳು ಮೂರಕ್ಷರದಧಾತುಗಳು. ಸಂಯುಕ್ತಧಾತುಗಳು, ಕ್ರಿಯಾಸಮಾಸವಾಗಿರುವ ಧಾತುಗಳು, ಇಸು ಪ್ರತ್ಯಯಾಂತ ಧಾತುಗಳು ಎಂದು ವಿಂಗಡಿಸುವುದು ಸೌಕರ್ಯದೃಷ್ಟಿಯಿಂದ ಲೇಸು ಎಂಬ ಅಭಿಪ್ರಾಯವೂ ಇದೆ.

ಆಖ್ಯಾತ ಪ್ರತ್ಯಯಗಳು ಹತ್ತುವ ಸಂದರ್ಭಗಳಲ್ಲಿ ಅನೇಕ ಧ್ವನಿ ಬದಲಾವಣೆಗಳಾಗುತ್ತವೆ, ಉದಾಹರಣೆಗೆ ಇ>ಎ. ಉ>ಒ, ಅ>ಆ ಇತ್ಯಾದಿ ವ್ಯತ್ಯಾಸಗಳು : ಬಿಸು>ಬೆಜ್ಜ, ಪುಗು>ಪೊಕ್ಕ, ತರ್>ತಾರ್ ಇವುಗಳಿಗೆ ಅಪವಾದಗಳೂ ಉಂಟು ಅವನ್ನೂ ಹೇಳುತ್ತಾನೆ ಹೀಗೆಯೆ ದೀರ್ಘಸ್ವರ ಹ್ರಸ್ವವಾಗುವುದು, ಗ್, ಡ್, ದ್, ಸ್ ಗಳು ಕ್ ಟ್, ತ್, ಜ್ ಗಳಾಗುವುದು,

ಭೂತಕಾಲದ 'ದ್', ವರ್ತಮಾನಕಾಲದ 'ದಪ' ಪ್ರತ್ಯಯಗಳು ಸೇರಿದಾಗ ಧಾತುವಿನ ಅಂತ್ಯದ ಯ್, ೞ ಗಳಿಗೆ 'ತ್' ಕಾರ ಆದೇಶವಾಗುವುದು ಹೀಗೆಯೆ ಅನೇಕ ಧ್ವನಿ ಬದಲಾವಣೆಗಳನ್ನು ಉದ್ದಕ್ಕೂ ಪಟ್ಟಿ ಮಾಡುತ್ತ ಸಾಗಿದ್ದಾನೆ. ಇಲ್ಲಿ ಕ್ರಮಬದ್ಧತೆ ಇಲ್ಲ. ಈ ಎಲ್ಲ ಧ್ವನಿ ಬದಲಾವಣೆಗಳನ್ನು ಸಂಧಿ ಪ್ರಕರಣದಲ್ಲಿ ಸೇರಿಸಿಬಿಡಬಹುದಿತ್ತು. ಈ ರೀತಿಯ ವಿಚಾರಗಳಾದ

ಮೇಲೆ ಧಾತು ಪ್ರಕರಣದಲ್ಲಿ ಧಾತುಗಳ ಅಂತ್ಯಾಕ್ಷರ ಕ್ರಮದಲ್ಲಿ ೯೮೫ ಧಾತುಗಳ ಪಟ್ಟಿಯೊಂದನ್ನು ಕೇಶಿರಾಜ ನೀಡಿದ್ದಾನೆ.

### 9.1.1. ಕಾಲವಾಚಕ ಪ್ರತ್ಯಯಗಳು :

ಕನ್ನಡದಲ್ಲಿ ಭೂತ. ವರ್ತಮಾನ. ಭವಿಷ್ಯತ್ ಕಾಲಗಳನ್ನು ಹೇಳಲಾಗುತ್ತದೆ. ಹಳಗನ್ನಡದಲ್ಲಿ ದ್, ದಪ ಮತ್ತು ವ ಗಳು ಈ ಮೂರು ಕಾಲಗಳನ್ನು ಅನುಕ್ರಮವಾಗಿ ರೂಪಿಸಲು ಬಳಸಲಾಗುವ ಪ್ರಮುಖ ಪ್ರತ್ಯಯಗಳು. ಉದಾಹರಣೆಗಳು ಕೆಳಗಿನಂತಿವೆ :

### 9.1.1.1 ಭೂತಕಾಲ :

೧. 'ದ' > ಪಡೆದಂ. ಇಡಿದಂ, ಕಡಿದಂ, ಕೇಳ್ದಂ, ಇದ್ದ, ಗೆದ್ದ, ಕೊಯ್ದ, ಬಂದ,

೨. ಧಾತುಗಳಲ್ಲಿದ್ದ ಕ, ಚ, ಟ, ತ, ಪ, ಗಳು ಭೂತಕಾಲದಲ್ಲಿ ವ್ಯತ್ಯಾಸಗೊಂಡು ಆದೇಶವಾಗುತ್ತವೆ– ಮಿಗು > ಮಿಕ್ಕ, ಪೋಗು > ಪೋಕ್ಕ. ನಗು > ನಕ್ಕ; ಬೆಸು > ಬೆಚ್ಚ, ಎಸು > ಎಚ್ಚ; ತೊಡು > ತೊಟ್ಟ. ಬಿಡು > ಬಿಟ್ಟ. ಕೊಡು > ಕೊಟ್ಟ; ಪೆಱು > ಪೆತ್ತ. ತೆಱು > ತೆತ್ತ. ಪೊಱು > ಪೊತ್ತ

೩. ಉ, ಇ. ಗಳು ಭೂತಕಾಲ ಧಾತುಗಳಿಗೆ ಸೇರುತ್ತವೆ
ಉ > ಕುಸಿದು, ಒಸೆದು, ಬಂದು
ಇ > ಮುತ್ತಿ, ನೆಚ್ಚಿ, ಮೆಟ್ಟಿ

### 9.1.1.2 ವರ್ತಮಾನ ಕಾಲ ;

ಹಳಗನ್ನಡದಲ್ಲಿ 'ದಪ' ಎಂಬುದು ವರ್ತಮಾನಕಾಲ ಸೂಚಕ ಪ್ರತ್ಯಯವಾಗಿದೆ. ಇದು ದ+ಪ (ಅಪ್ಪ>ಅಪ) ಎಂಬ ಎರಡು ಪ್ರತ್ಯಯಗಳು ಸೇರಿದ ಸಂಯುಕ್ತ ಪ್ರತ್ಯಯವೆಂದು ಹೇಳಲಾಗುತ್ತದೆ. 'ಪ' ಎಂದರೆ "ಅಪ್ಪ" (ಇರು) ಎಂಬ ರೂಪದ ಸಂಕ್ಷೇಪರೂಪ ಆಗಿರಬೇಕು.

ಉದಾಹರಣೆ— ಎತ್ತಿದಪಂ, ಒತ್ತಿದಪಂ ಮಾಡಿದಪಂ, ಕರೆದಪ್ಪಂ, ಇರಿಸಿದಪ್ಪಂ, ನೊಂದಪಂ,

## 9.1.1.3 ಭವಿಷ್ಯತ್ಕಾಲ

'ವ' ಭವಿಷ್ಯತ್ಕಾಲವಾಚಕ ಪ್ರತ್ಯಯ. ಪ್ರಾಯಃ ಮೊದಲು 'ಪ' ವಾಗಿದ್ದು ಅನಂತರದ ಕಾಲದಲ್ಲಿ 'ವ' ಆಗಿರಬೇಕೆಂದು ಊಹಿಸಿದ್ದಾರೆ (ಕ. ಭಾ. ವ್ಯಾ. ಅ. ಪುಟ ೩೧೦).

ಉದಾಹರಣೆಗಳು– ಕುಡುವಂ, ಉಡುವಂ, ಪಡೆವಂ, ನಡೆವಂ,
ತರ್ಪಂ, ತೋರ್ಪಂ. ಮಾಟ್ಪಂ, ಪೋಪಂ,
ತರಿಪಂ, ತಿಂಬಂ. ಕಾಣ್ಬಂ (ಪ್>ಬ್)

ದ್ರಾವಿಡ ಭಾಷೆಗಳಲ್ಲಿ ಭೂತಕಾಲ, ಭೂತೇತರ (ವರ್ತಮಾನ/ಭವಿಷ್ಯತ್) ಕಾಲ ಎಂದು ಎರಡೇ ಕಾಲಗಳಿರಬೇಕೆಂಬ ಅಭಿಪ್ರಾಯವಿದೆ. ಕನ್ನಡವೂ ಇದಕ್ಕೆ ಹೊರತಾಗಿಲ್ಲ. ನಾನು ಬರುತ್ತೇನೆ ಎಂದರೆ ವರ್ತಮಾನವೂ ಆಗಬಹುದು ಭವಿಷ್ಯತ್‌ಕಾಲವೂ ಆಗಬಹುದು.

## 9.2 ಸರ್ವನಾಮ ಪ್ರತ್ಯಯಗಳು

ಕ್ರಿಯಾಪದಗಳಲ್ಲಿ ಸರ್ವನಾಮ ಪ್ರತ್ಯಯಗಳೂ ಅನ್ವಯವಾಗಿರುತ್ತವೆ. ಸರ್ವನಾಮ ಪ್ರತ್ಯಯಗಳಲ್ಲಿ ವಚನ, ಲಿಂಗ, ಪುರುಷಗಳಿಗೆ ಸಂಬಂಧಿಸಿದ ಬೇರೆ ಬೇರೆ ರೂಪಗಳಿವೆ.

ಉದಾ– ಉತ್ತಮ ಪುರುಷದಲ್ಲಿ ಎನ್, ಎವು
ಮಧ್ಯಮ ಪುರುಷದಲ್ಲಿ ಅಯ್, ಇರ್
ಪ್ರಥಮ ಪುರುಷದಲ್ಲಿ ಪುಲ್ಲಿಂಗಕ್ಕೆ ಅಂ, ಅರ್ ಸ್ತ್ರೀಲಿಂಗಕ್ಕೆ ಅಳ್
ನಪುಂಸಕಲಿಂಗಕ್ಕೆ ಇತು, ಉವು, ಇತ್ತು, ಅತ್ತು, ಉದು.
ಎಸೆದೆನ್, ಎಸೆದೆವು, ಎಸೆದಯ್, ಎಸೆದಿರ್, ಎಸೆದಂ, ಎಸೆದರ್, ಎಸೆದಳ್, ಎಸೆಯಿತು, ಹೀಗೆ ಪ್ರಯೋಗ.

ಹೊಸಗನ್ನಡದಲ್ಲಿ ಎಸೆಯುತ್ತೇನೆ (ಏನೆ), ಎಸೆಯುತ್ತೇವೆ (ಏವೆ), ಎಸೆಯುತ್ತಿ (ಇ), ಎಸೆಯುತ್ತೀರಿ (ಈರಿ), ಎಸೆಯುತ್ತಾನೆ (ಆನೆ). ಎಸೆಯುತ್ತಾಳೆ (ಆಳೆ), ಎಸೆಯುತ್ತದೆ (ಅದೆ) ಎಂಬ ರೂಪಗಳು ರೂಢಿಯಲ್ಲಿವೆ.

## 9.3 ನಿಷೇಧಾರ್ಥಕ ಕ್ರಿಯಾಪದಗಳು

ಪೂರ್ಣಕ್ರಿಯೆಯಿಂದ ಕಾಲವಾಚಕವನ್ನು ತೆಗೆದು ಹಾಕಿದರೆ ಉಳಿಯುವುದೇ ನಿಷೇಧ ಕ್ರಿಯೆ (ಕ. ಭಾ. ವ್ಯಾ. ಅ. ಪುಟ ೩೨೪). ಕೇಶಿರಾಜನು ನಿಷೇಧ ಕ್ರಿಯೆಯಾವಾಗಲೂ ಭೂತಕಾಲದಲ್ಲಿಯೇ ಇರುತ್ತದೆಂದು ಹಿರಿಯರು ಹೇಳುತ್ತಾರೆ ಎಂದು ಹಿರಿಯರ ಮೇಲೆ ಹಾಕಿಬಿಟ್ಟಿದ್ದಾನೆ. ಅವನು ಆ ಸೂತ್ರ (೨೩೩) ಕ್ಕೆ ಕೊಟ್ಟ ಉದಾಹರಣೆ ಸಮಂಜಸವಾಗಿಲ್ಲ. ವಾಸ್ತವಿಕವಾಗಿ ಕಾಲವಾಚಕ ಪ್ರತ್ಯಯಗಳು ಕ್ರಿಯಾಪದಗಳಿಗೆ ನಿಷೇಧದಲ್ಲಿ ಸೇರುವುದಿಲ್ಲ. ಆದ್ದರಿಂದ ಅವುಗಳಲ್ಲಿ ಕಾಲ ವಿವಕ್ಷೆ ಇರುವುದಿಲ್ಲ, 'ಅ' ಎಂಬ ಪ್ರತ್ಯಯ ಸಾಮಾನ್ಯವಾಗಿ ನಿಷೇಧವನ್ನು ಸೂಚಿಸಲು ಧಾತುಗಳಿಗೆ ಅನ್ವಯಿಸಲ್ಪಡುವುದು. ಮಾಡು+ಅ>ಮಾಡ, ಕುಡಿ+ಅ>ಕುಡಿಯ. ಕೆಲವು ಸರ್ವನಾಮ ಪ್ರತ್ಯಯಗಳಿದ್ದಾಗ ಶೂನ್ಯಸ್ಥಿತಿಯಲ್ಲಿರುತ್ತದೆ. ಮಾಡು+φ+ಎನ್>ಮಾಡೆನ್, ನೋಡು+φ+ಎವು>ನೋಡೆವು 'ಇ' 'ಎ' ಕಾರಾಂತ ಧಾತುಗಳಲ್ಲಿಯೂ ಈ ರೀತಿಯಾಗುತ್ತದೆ. ಉದಾ– ಅಜಿ+φ+ಎ>ಅಜಿಯೆ, ನೆಗೆ+φ+ಅದು>ನೆಗೆಯದು.

ಹಳಗನ್ನಡದಲ್ಲಿ ಇಲ್ಲದ ಇಲ್ಲ ಅಲ್ಲ ರೂಪಗಳನ್ನು ಬಳಸಿ ನಿಷೇಧಾರ್ಥಕ ಕ್ರಿಯಾಪದಗಳನ್ನು ರೂಪಿಸಲಾಗುತ್ತದೆ. ಇಲ್ಲ ಎಂಬುದೀಗ ನಿಷೇಧಾರ್ಥವುಳ್ಳ ಕ್ರಿಯಾರ್ಥಕಾವ್ಯಯವಾಗಿ ಬಳಕೆಯಲ್ಲಿದೆ.

## 9.4 ವಿಧ್ಯರ್ಥಕ ಕ್ರಿಯಾಪದಗಳು

ಆಶಯ, ಪ್ರಾರ್ಥನೆ, ಬಯಕೆ, ಆಶೀರ್ವಾದ, ಆಜ್ಞೆ ಮುಂತಾದ ಭಾವಗಳನ್ನು ಸೂಚಿಸುವ ಕ್ರಿಯಾಪದಗಳು ವಿಧ್ಯರ್ಥಕಗಳೆನಿಸುತ್ತವೆ. ವಿಧ್ಯರ್ಥವನ್ನೇ ಸೂಚಿಸುವಂಥ ಮೂಲ ಧಾತುಗಳೂ ಇರಬಹುದು ಇಲ್ಲವೆ ಅವು ಸಾಧಿತವಾಗಿರಬಹುದು. ಕೇಶಿರಾಜನ ಮೇರೆಗೆ ಗೆ, ಕೆ, ಇಮ್, ಅಮ್ ಗಳು ವಿಧ್ಯರ್ಥ ಪ್ರತ್ಯಗಳು. ವಿಧ್ಯರ್ಥಕ ಕ್ರಿಯೆಗಳು ಭವಿಷ್ಯತ್ಕಾಲಕ್ಕೆ ಸಂಬಂಧಪಡುವವಾದ್ದರಿಂದ ಅವುಗಳನ್ನು ಆ ಕಾಲದ ಕ್ರಿಯೆಗಳೆಂದೇ ಪರಿಭಾವಿಸಬೇಕು. ಪ್ರಕೃತಿಯೆ ಮಧ್ಯಮ ಪುರುಷ ಏಕವಚನದಲ್ಲಿ ಬರುವುದು.

ಕೇಶಿರಾಜನು ವಿಧ್ಯರ್ಥಕ್ಕೆ ನೀಡಿದ ಉದಾಹರಣೆಗಳು—

'ಗೆ' ಕಾರಕ್ಕೆ – ಕುಡುಗೆ, ಪಡೆಗೆ,

'ಇಮ್' ಗೆ – ಇರಿಸಿಂ, ತರಿಸಿಂ, ಸಮಕಟ್ಟಿಂ
'ಅಮ್' ಗೆ – ತಾಗುವಂ (ತಾಗೋಣ)
'ಕೆ' ಕಾರಕ್ಕೆ – ತರ್ಕೆ, ನಿಲ್ಕೆ, ಪೂಜಿಕೆ

ಪ್ರಕೃತಿ (ಮಧ್ಯಮಪುರುಷ ಏಕವಚನ) :– ನೀಂ ಮಾಡು, ನೀಂ ಮಾಡ, ಮಾಡುವುದು, ಪಾಡೆಲೆತುಂಬಿ, ಬಗ್ಗಿಸೆಲೆಕೋಗಿಲೆ, ಹರಿಕೇಳ್, ನಿಲ್, ಬೀಸು, ಇರುಮರುಳೆ, ಕೇಳ್‌ಕೇಳ್, ನುಡಿನುಡಿ, ನಡೆನಡೆ

ಮಧ್ಯಮಪುರುಷದ ನಿಷೇಧಾರ್ಥದಲ್ಲಿ ಕ್ರಿಯೆ ವಿಧ್ಯರ್ಥವಿದ್ದರೆ 'ಅಲ್' ಬರುತ್ತದೆ. ಉಸಿರಲಿಂ, ಮೀಜಲಿಂ, ಸಾರಲಿಂ. ಏಳಿದುಂಗೆಯಲಿ.

ವಿಧ್ಯರ್ಥದಲ್ಲಿ ಮಧ್ಯಮಪುರುಷದಲ್ಲಿ ಏಕವಚನಕ್ಕೆ 'ಅಯ್' ಎಂಬ ಪ್ರತ್ಯಯರೂಪ ಹಳಗನ್ನಡದಲ್ಲಿದ್ದು ಅದನ್ನು ಯಾವ ವೈಯಾಕರಣನೂ ಹೇಳಿಲ್ಲ, ಅದರಂತೆ 'ಇರ್' ಎಂಬುದು ಅದೇ ಮಧ್ಯಮಪುರುಷ ಪೂರ್ಣಕ್ರಿಯೆಯಲ್ಲಿ ಬಹುವಚನದಲ್ಲಿ ಬಳಕೆಯಾಗುವುದನ್ನೂ ಯಾರೂ ಗಮನಿಸಿದಂತಿಲ್ಲ. ಇವಲ್ಲದೆ 'ಓ' (ಪುಲ್ಲಿಂಗ) 'ಎ' (ಸ್ತ್ರೀಲಿಂಗ) ಪ್ರತ್ಯಯಗಳೂ ವಿಧ್ಯರ್ಥದಲ್ಲಿ ಬಳಕೆಯಲ್ಲಿವೆ; ಒಟ್ಟಿನಲ್ಲಿ 'ಅಯ್', 'ಇರ್', 'ಓ'. 'ಎ' ಇಂತಹ ಪ್ರತ್ಯಯಗಳನ್ನು ಅವರು ಹೇಳಲಿಲ್ಲ. ಇವುಗಳಿಗೆ ಉದಾಹರಣೆಗಳು ಹೀಗಿವೆ— ಮುನಿವಯ್. ತೋರೈ, ನೋಡೈ, ಓಡೈ. ಮಾಡಿದಿರ್. ಕೂಡಿದಿರ್. ನೋಡೆ, ಮಾಡೆ. ಕೂಡೆ, ಬಾರೋ, ನಿಲ್ಲೋ, ಇತ್ಯಾದಿ
ಇವುಗಳಲ್ಲಿ ಕೆಲವು ನಡುಗನ್ನಡ ಹಾಗೂ ಅನಂತರದ ಅವಧಿಯಲ್ಲಿ ಬಳಕೆಗೆ ಬಂದಿರಬೇಕು.

ಹೊಸಗನ್ನಡದಲ್ಲಿ ಗೆ. ಕೆ, ಇಂ, ಅಂ. ಇವಾವವೂ ಬಳಕೆ ಆಗುವುದಿಲ್ಲ. ನಡುಗನ್ನಡದ ವೇಳೆಗೆ ಇವು ಬದಲಾಗುತ್ತಿದ್ದವು. ಈಗ 'ಅಲಿ' ಎಂಬ ಪ್ರತ್ಯಯ ಬಳಕೆಯಲ್ಲಿದೆ– ಮಾಡಲಿ, ತಿನ್ನಲಿ ಭಾವಾರ್ಥದಲ್ಲಿ 'ಉದು' ಎಂಬ ಪ್ರತ್ಯಯ ಬರುತ್ತದೆಂದು ಕೇಶಿರಾಜ ಹೇಳುತ್ತಾನೆ— 'ಬೆಸಸುವುದು'. 'ಈವುದು', 'ಮಾಡುವುದು'.

## 9.5 ಅಪೂರ್ಣ ಕ್ರಿಯಾಪದಗಳು :

ಭೂತಕೃದ್ವಾಚಿ, ನಿಷೇಧಕೃದ್ವಾಚಿ, ವರ್ತಮಾನ, ಭೂತ, ಭವಿಷ್ಯತ್ ಹಾಗೂ ನಿಷೇಧ ರೂಪಗಳ ಸಂಬಂಧ ಕೃದ್ವಾಚಿಗಳು ಅಪೂರ್ಣ ಕ್ರಿಯಾಪದಗಳೆನಿಸುತ್ತವೆ. (ಕ.ಭಾ.ವ್ಯಾ.ಅ. ೩೩೭) ಇವುಗಳ ಮುಂದೆ ಪೂರ್ಣ ಕ್ರಿಯಾಪದ ಹೊಂದು ಬಂದರೆ ಮಾತ್ರ ವಾಕ್ಯ ಪೂರ್ಣಗೊಳ್ಳುತ್ತದೆ.

ಭೂತಕೃದ್ವಾಚಿ : **ನೋಡಿ** ಪೋದಂ. **ಓಡಿ** ಬಂದಂ, **ನಿಂದುಂಡಂ, ಬಂದು** ಕಂಡಂ.

ವರ್ತಮಾನಕೃದ್ವಾಚಿ : ಉತುಂ, ಉತ್ತುಂ, ಉತ್ತೆ, ಉತೆ ಪ್ರತ್ಯಯಗಳಿದಕ್ಕಿವೆಯೆಂದು ಕೇಶಿರಾಜನ ಅಭಿಮತ.

ಉದಾ– ನಗುತುಂ ಬಂದಂ, ಕಱಿಯುತುಂ ಪೋದಂ, ಕಾದುತ್ತುಂ ಬಂದಂ, ಜಡಿಯುತ್ತುಂ ಪೋದಂ, ಕೆತ್ತುತ್ತೆಕಡಿದಂ, ಪರಸುತ್ತೆ ಕಳುಪಿದಂ ಮಿಱುಗುತೆ ಪೋದಂ.

ಸಂಬಂಧಕೃದ್ವಾಚಿ : ಓದಿದ ಪುಸ್ತಕ ಕಲಿತಪಾಠ, ನಕ್ಕನಗೆ ಬೆಳೆವ ಕುಡಿ ಕಲಿವ ಪಾಠ ಓಡುವ ರೈಲು

ನಿಷೇಧ ಕೃದ್ವಾಚಿ : ಓದದ ಪುಸ್ತಕ, ಕಲಿಯದ ಪಾಠ, ಓಡದ ರೈಲು ಕಾಣದ ಕನಸು.

ಅಪೂರ್ಣ ಕ್ರಿಯಾಪದಗಳಲ್ಲಿ ಸಾಪೇಕ್ಷ ಕ್ರಿಯಾರೂಪಗಳೂ ಸೇರುತ್ತವೆ ಕ್ರಿಯೆ ಪೂರ್ಣಗೊಳ್ಳಲು ಇನ್ನೊಂದರ ಸಹಾಯವನ್ನು ಅಪೇಕ್ಷಿಸುವ ಕ್ರಿಯಾರೂಪಗಳನ್ನು ಸಾಪೇಕ್ಷ ಕ್ರಿಯಾರೂಪ ಎನ್ನಬಹುದು.

ಉದಾ— **ನಗುನಗುತಂ** ಪೋಪಂ **ಕೊರಗಿಕೊರಗಿ** ಕೃಶವಾದಳು. ಹಸಿವಾದೊಡೆ ಉಣದೆ ಇರಲಾರೆಂ

**ಅಪೂರ್ಣವರ್ತಮಾನಕಾಲದ ರೂಪಗಳು–**

**ಧಾತು+ಉತ್+ಇರ್ ಧಾತುವಿನ ವರ್ತಮಾನ ರೂಪ+ಸರ್ವನಾಮ ಪ್ರತ್ಯಯ**

**ನೋಡುತ್ತಿರ್ಪೆನ್ ನೋಡುತ್ತಿರ್ಪರ್ ನೋಡುತ್ತಿರ್ಪಳ್, ನೋಡುತಿರ್ಪುದು ನೋಡುತ್ತಿರ್ಪಿರಿ ನೋಡುತ್ತಿರ್ಪವು,**

ಅಪೂರ್ಣ ಭೂತಕಾಲ ರೂಪಗಳು—

ಧಾತು+ಉತ್ತ್+ 'ಇರ್' ಧಾತುವಿನ ಭೂತಕಾಲ ರೂಪ

ನೋಡುತ್ತಿರ್ದ್ದನ್, ನೋಡುತ್ತಿರ್ದ್ದರ್, ನೋಡುತ್ತಿರ್ದ್ದಳ್, ನೋಡುತ್ತಿರ್ದ್ದವು.

ಅಪೂರ್ಣ ಭವಿಷ್ಯತ್ಕಾಲ ರೂಪಗಳು–

ಧಾತು+ಉತ್+ಇರ್ ಧಾತುವಿನ ಸಾಮಾನ್ಯ ವರ್ತಮಾನಕಾಲರೂಪ

ನೋಡುತ್ತಿರ್ದ್ದಪೆನ್, ನೋಡುತ್ತಿರ್ದ್ದಪರ್, ನೋಡುತ್ತಿರ್ದ್ದಪಳ್ ನೋಡುತ್ತಿರ್ದ್ದಪವು.

## 9.6. ಸತಿಸಪ್ತಮಿ

ವಾಕ್ಯದಲ್ಲಿಯ ನ್ಯೂನ ಮತ್ತು ಪೂರ್ಣ ಕ್ರಿಯೆಗಳು ಬೇರೆ ಬೇರೆ ಕರ್ತೃಕಗಳಾಗಿರಬಹುದು. ನ್ಯೂನಕ್ರಿಯಾ ಸೂಚಕ ರೂಪವು ಕೃದಂತ ವಿಶೇಷಣವಾಗಿದ್ದು ಸಪ್ತಮೀ ವಿಭಕ್ತಿಯನ್ನು ಹೊಂದಿರುವುದು ಸಂಸ್ಕೃತದಲ್ಲಿ ರೂಢಿ. ಈ ಸಪ್ತಮೀ ವಿಭಕ್ತ್ಯಂತ ರೂಪಕ್ಕೆ (ಕೃದಂತ ವಿಶೇಷಣಕ್ಕೆ) 'ಸತಿ ಸಪ್ತಮಿ' ಎಂಬುದಾಗಿ ಸಂಸ್ಕೃತ ವ್ಯಾಕರಣಗಳು ಸಂಜ್ಞೆಯನ್ನು ವಿಧಿಸುತ್ತವೆ (ಕ. ವ್ಯಾ. ಪ. ಸಂ, ಪ್ರ ೬೦೪) 'ಸತ್' ಎಂಬುದು ಕೃದಂತ ವಿಶೇಷಣದ ಸಪ್ತಮ್ಯಂತ ರೂಪ. ಅದನ್ನು 'ಸತಿ' ಎನ್ನುತ್ತ ಕೃದಂತ ವಿಶೇಷಣವು ಸಪ್ತಮಿ ವಿಭಕ್ತಿಯಲ್ಲಿರುವುದರಿಂದ ಅದರೊಂದಿಗೆ ಸೇರಿಸಿ 'ಸತಿ ಸಪ್ತಮಿ' ಎಂಬ ಹೆಸರು ಇದಕ್ಕೆ ಉಂಟಾಗಿದೆ.

ಕೇಶಿರಾಜನಿಗಿಂತ ಪೂರ್ವದಲ್ಲಿ ಕನ್ನಡದಲ್ಲಿರುವ ಸತಿ ಸಪ್ತಮಿಯನ್ನು ಯಾರೂ ಗುರುತಿಸಿರಲಿಲ್ಲ. ಕೇಶಿರಾಜನೆ ಮೊಟ್ಟಮೊದಲ ಬಾರಿಗೆ ಇದನ್ನು ಪ್ರಸ್ತಾಪಿಸಿ ಸಪ್ತಮಿಯು ಉಭಯ ಕರ್ತೃಕವೆಂದೂ ಅದರ ಪ್ರತ್ಯಯ 'ಎ' ಎಂದೂ ಅವನು ಹೇಳುತ್ತಾನೆ. 'ಎ' ಕಾರದ ಸ್ಥಾನದಲ್ಲಿ ವರ್ತಮಾನ ಮತ್ತು ಭವಿಷ್ಯದರ್ಥದಲ್ಲಿ ಅನ್ನೆಗಂ ಅನ್ನಂ, ಇನೆಗಂ, ಇನಂ ಎಂಬ ಪ್ರತ್ಯಯಗಳೂ ಭೂತಕಾಲಧ ಅರ್ಥದಲ್ಲಿ ಉದುಂ, ಆಲೊಡಂ ಎಂಬಿವುಗಳೂ ಬರುವುದಾಗಿ ನಿರೂಪಿಸಲಾಗಿದೆ. 'ಆಲೊಡಂ' ಮುಂದೆ 'ಎ' ಬರಬಹುದು. ಆದ್ದರಿಂದ 'ಎ' ಇದೇ ಬರಬೇಕೆಂಬ ನಿರ್ದಿಷ್ಟತೆ ಇಲ್ಲ. ಆದರೆ 'ಎ' ಕಾರದ ಸ್ಥಾನದಲ್ಲಿ 'ಅಲ್' ಎಂಬ ಪ್ರತ್ಯಯ ಮಾತ್ರ ಬರಕೂಡದು ಎಂದು ಬಲವಾಗಿ ಕೇಶಿರಾಜ

ಖಂಡಿಸುತ್ತಾನೆ ‹ಅದಕ್ಕಣಂಜದೆ ಕೆಲರ್ ಅಱುವಂ ಪೇಟ್ಟರ್, ಚದುರರದಂ ಮೆಚ್ಚರ್, ಎಂದು ಹೇಳಿ ಅಲ್ ಬದಲಾಗಿ ‹ಅಲೊಡಂ' ಎಂದಾದರೂ ಬಳಸಿದರೆ ಅದು ಶುದ್ಧ ಎಂದು ತಪ್ಪಿಗೆ ಪರಿಹಾರವನ್ನೂ ಸೂಚಿಸಿದ್ದಾನೆ.

ಸತಿಸಪ್ತಮಿಗೆ ಕೇಶಿರಾಜ ಕೊಟ್ಟ ಉದಾಹರಣೆಗಳು–

ಗಾಯಕಂ ಪಾಡೆ ದೇವಂ ಮೆಚ್ಚಿದಂ; ಪಾತ್ರವಾಡೆ ವಾದಕಂ ಬಾಜಿಸಿದಂ

'ಎ' ಬದಲಾಗಿ ಅಲ್ ಬಳಕೆ ತಪ್ಪೆಂದು ಹೇಳಿದ್ದಕ್ಕೆ ಉದಾ—

'ಪಾದ ಪದ್ಮಂಗಳನೊತ್ತುತ್ತಿರಲ್ ಶೂದ್ರಕ ನೃಪತಿ ಸುಖಾಸೀನನಾಗಿರ್ದನಾಗಳ್'

'ಕೆಂಬಿಸಲಳುರಲೆಸೆದುಪಾಶ್ರಮತರುಗಳ್'

'ಅಲ್' ಬದಲಾಗಿ 'ಅಲೊಡೆ' ಯನ್ನಾದರೂ ಬಳಸಿದರೆ ಶುದ್ಧವೆಂದುದಕ್ಕೆ

ಉದಾ— ವಸಂತಂ ಬರಲೊಡಂ ಕೋಗಿಲೆಯುಲಿಗುಂ; ಗಾಳಿಬೀಸಿಲೊಡಮುಲಿ ಕಟಲ್ದುವು,

ಕೇಶಿರಾಜನಿಗಿಂತ ಬಹಳ ಹಿಂದಿನ ಕಾಲದಲ್ಲಿಯೇ ಸತಿಸಪ್ತಮಿಯಲ್ಲಿ 'ಅಲ್ ಪ್ರತ್ಯಯವನ್ನು ಬಳಸುತ್ತಿದ್ದುದು ತಿಳಿದುಬರುತ್ತದೆ. ಹಾಗಿದ್ದೂ ಅವನು ಅದರ ಬಳಕೆಯನ್ನು ಏಕೆ ವಿರೋಧಿಸಿದ ? ಎಂಬ ಪ್ರಶ್ನೆ ಏಳುತ್ತದೆ. ಇದಕ್ಕೆ ಡಾ. ಕುಶಾಲಪ್ಪಗೌಡ ಒಂದು ಕಾರಣವನ್ನು ಹೇಳಿದ್ದಾರೆ—

'ಎ' ಹಾಗೂ 'ಅಲೊಡಂ' ಬಳಸಿದಾಗ ಕ್ರಿಯೆ ಮುಗಿದು ಮತ್ತೊಂದು ಕ್ರಿಯೆ ಆರಂಭದ ಸೂಚನೆ ಇರುತ್ತದೆ, ಗಾಯಕಂ ಪಾಡೆ... ಉದಾಹರಣೆಯೂ ಗಾಯಕನ ಹಾಡುವ ಕ್ರಿಯೆ ಮುಗಿದ ಮೇಲೆ ದೇವ ಮೆಚ್ಚಿದನು. ಎಂಬರ್ಥ ವಿದ್ದರೆ ಪಾದಪದ್ಮ... ಉದಾಹರಣೆಯಲ್ಲಿ ಪಾದಗಳನ್ನು ಒತ್ತುವ ಕ್ರಿಯೆ ಇನ್ನೂ ಮುಗಿದಿಲ್ಲ ಶೂದ್ರಕ ಆಸೀನನಾಗಿರುವ ಕ್ರಿಯೆ ನಡೆದು ಬಿಟ್ಟಿದೆ. ಇದರ ಸೂಕ್ಷ್ಮವನ್ನು ಕೇಶಿರಾಜ ಮಾತ್ರ ಗಮನಿಸಿರುವುದು ಅವನ ಕುಶಾಗ್ರಮತಿಗೆ ಸಾಕ್ಷಿ. ಆದ್ದರಿಂದಲೇ ಅವನು 'ಅಲ್' ಬಳಕೆಯನ್ನು ಖಾರವಾಗಿ ಖಂಡಿಸುವುದು ಸರಿ.

ಇನ್ನು ಕನ್ನಡದ ಅಸಾಧಾರಣ ಲಕ್ಷಣಗಳಲ್ಲಿ ಇದು ಒಂದು ಎಂದಿರುವುದೇಕೆ ? ಸಂಸ್ಕೃತದ್ದು ಸತಿಸಪ್ತಮಿ, ಆದರೆ ಕನ್ನಡದಲ್ಲಿರುವುದು 'ಸಮುಚಿತ' ವಾಗಿ ಬರುವ ಸತಿ ಸಪ್ತಮಿ. ಅದು ಕೇವಲ ಪ್ರಾಸದ ಅನುಕೂಲಕ್ಕಾಗಿ ಮಾತ್ರ

ವಲ್ಲವೆಂಬುದನ್ನೂ ಕೇಶಿರಾಜ ಅರಿತಿದ್ದಾನೆ. ಸಂಸ್ಕೃತದಲ್ಲಿ ಸತಿಸಪ್ತಮಿ ಕೃದಂತ ವಿಶೇಷಣವಾಗಿದ್ದು ಸಾಮಾನ್ಯ ಸಪ್ತಮೀ ವಿಭಕ್ತಿಯನ್ನು ಹೊಂದಿರುತ್ತದೆ. ಕನ್ನಡದಲ್ಲಿ ಸಾಮಾನ್ಯ ಸಪ್ತಮಿಯ ಅಲ್ಲಿ, ಒಳ್ ಪ್ರತ್ಯಯಗಳನ್ನು ಹೊಂದ ದೆಯೆ 'ಎ' ಎಂಬ ಬೇರೆಯೆ ಪ್ರತ್ಯಯವನ್ನು ತೆಗೆದುಕೊಳ್ಳುತ್ತದೆ. ಎರಡನೆಯ ದಾಗಿ ಸತಿಸಪ್ತಮಿಯ ಧಾತುಗಳು ಕನ್ನಡದಲ್ಲಿ ಕೃದಂತಾವ್ಯಯಗಳಾಗಿ ನಿಲ್ಲುತ್ತವೆ. ಮೂರನೆಯದಾಗಿ ನ್ಯೂನ ಕ್ರಿಯಾಸೂಚಕ ಕರ್ತೃಪದ ಸಂಸ್ಕೃತದಂತೆ ಸಪ್ತಮಿ ಯಲ್ಲಿ ಇರದೆ ಪ್ರಥಮೆಯಲ್ಲಿರುತ್ತದೆ. ಈ ದೃಷ್ಟಿಗಳಿಂದ ಕನ್ನಡದ ಸತಿ ಸಪ್ತಮಿ ವಿಶಿಷ್ಟವೆನಿಸುವುದರಿಂದಲೆ ಇದನ್ನು ಕನ್ನಡದ ಅಸಾಧಾರಣ ಲಕ್ಷಣ ವೆಂದು ಕರೆದಿದ್ದಾನೆ.

### 9.7 ಪಕ್ಷಾರ್ಥಕ ಕ್ರಿಯೆ :

'ಎ' ಎಂಬುದನ್ನು ಪಕ್ಷಾರ್ಥದಲ್ಲಿ ಬಳಸುವ ಬಗ್ಗೆ ಕೇಶಿರಾಜ ಹೇಳಿದ್ದಾನೆ. (ಸೂ. ೨೬೧) ಲಿಂಗ-ವಚನ-ಕಾಲಾತೀತವಾಗಿ 'ಎ' ಕಾರವು ಪಕ್ಷಾರ್ಥದಲ್ಲಿ ಧಾತುವಿನ ಕೊನೆಗೆ ಹತ್ತುತ್ತದೆ.

ಉದಾ- ನೋಟ್ಪೊಡವಳ್ ಕಿಱಿಯಳ್. ಸತ್ಯಮಂ ನುಡಿವಡೆ ಅವಂ ನುಡಿಗುಂ,
ತೀಡುವಡಲ್ಲಿ ಕಮ್ಮಲರ್ ತೀಡುಗುಂ,

ಭಟ್ಟಾಕಳಂಕ 'ದೊಡೆ'. 'ವೊಡೆ' ಇವುಗಳನ್ನು ಪಕ್ಷಾರ್ಥಗಳಿಗೆ ಹೇಳಿ ದ್ದಾನೆ. ಆದರೆ ಇವೆರಡರ ಬದಲಾಗಿ 'ಒಡೆ' ಒಂದನ್ನಿಟ್ಟುಕೊಂಡರೆ ಒಳಿತು.

ಉದಾ- ನೋಟ್ಪೊಡೆ ಅವಳ್ ಕಿಱಿಯಳ್. ನುಡಿವಡೆ ಅವಂ ನುಡಿವಂ
ಎಂದೊಡೆ, ಪೇಳ್ದೊಡೆ, ಪೋದೊಡೆ. ಕೊಂದೊಡೆ...

'ಒಡೆ' ಎಂಬ ರೂಪವೇ ಅನಂತರ 'ಅಡೆ' 'ಅರೆ' ಎಂಬುದಾಗಿ ಮಾರ್ಪಟ್ಟಿರ ಬೇಕು. ನುಡಿದರೆ ಮುತ್ತಿನಹಾರದಂತಿರಬೇಕು, ಪ್ರೀತಿ ಮಾಡಿದಡೆ ಅಳುಕ ದಂತಿರಬೇಕು. ಹೊಸಗನ್ನಡದಲ್ಲಿ 'ಅರೆ' ಬಳಕೆಯಲ್ಲಿದೆ.

### 9.8 ಕರ್ಮಣಿ ಪ್ರಯೋಗ :

ಕ್ರಿಯೆಯು ಲಿಂಗ-ವಚನ-ಪುರುಷಗಳ ವಿಚಾರದಲ್ಲಿ ಕರ್ತೃವನ್ನು ಹೊಂದಿ ಕೊಂಡಿದ್ದರೆ 'ಕರ್ತರಿ ಪ್ರಯೋಗ' ಎಂದೂ ಕರ್ಮವನ್ನು ಹೊಂದಿಕೊಂಡಿದ್ದರೆ

ಕರ್ಮಣೀ ಪ್ರಯೋಗವೆಂದೂ ಹೇಳುತ್ತಾರೆ. ಕ್ರಿಯೆ ಒಮ್ಮೊಮ್ಮೆ ಕರ್ತೃ ಇಲ್ಲವೆ ಕರ್ಮವನ್ನು ಅನುಸರಿಸದೆ ಸ್ವತಂತ್ರ ರೀತಿಯಲ್ಲಿರುವುದುಂಟು. ಆದಕ್ಕೆ ಭಾವೇ ಪ್ರಯೋಗವೆನ್ನುತ್ತಾರೆ. ಕರ್ಮಣಿ ಪ್ರಯೋಗ ಸಂಸ್ಕೃತದಲ್ಲಿ ಸಹಜ. ಪ್ರಾಯಃ ಸಂಸ್ಕೃತದ ಪ್ರಭಾವದಿಂದ ಕನ್ನಡದಲ್ಲೂ ಆ ಪ್ರಯೋಗ ರೂಢಿಯಲ್ಲಿದೆ. ಕೇಶಿ ರಾಜನು ಆಖ್ಯಾತ ಪ್ರಕರಣದ ಕೊನೆಗೆ (ಸೂ. ೨೬೩) ಸಕರ್ಮಕ–ಅಕರ್ಮಕ ಕ್ರಿಯಾಪದಗಳನ್ನು ಹೇಳುತ್ತ ಅವುಗಳಿಗೆ ಪ್ರಯೋಗಗಳನ್ನು ಕೊಡುವಾಗ ಕರ್ಮಣಿ ಉದಾಹರಣೆಗಳನ್ನು ನೀಡಿದ್ದಾನೆ. ಈ ೨೬೩ ನೇ ಅನುಕ್ತ ಸೂತ್ರ ಕೇಶಿರಾಜನದು ಅಲ್ಲವೆಂಬ ಅಭಿಪ್ರಾಯವಿದೆ. ಆದ್ದರಿಂದ ಕೇಶಿರಾಜನಾಗಲಿ ಇತರ ವೈಯಾಕರಣರಾಗಲಿ ಕರ್ಮಣಿ ಪ್ರಯೋಗದ ಬಗೆಗೆ ಏನೂ ಹೇಳಿಲ್ಲವೆಂದೇ ಇಟ್ಟುಕೊಳ್ಳುವುದು ಉಚಿತ. ಇದಕ್ಕೆ ಮುಖ್ಯ ಕಾರಣವೆಂದರೆ ವಾಸ್ತವಿಕವಾಗಿ ಕರ್ಮಣಿ ಕನ್ನಡದ್ದಲ್ಲ. ಆದರೆ ಕನ್ನಡದಲ್ಲಿ 'ಅಲ್ಪಡು' ಎಂಬ ರೂಪವನ್ನು ಅನ್ವಯಿಸಿ ಕರ್ಮಣೀ ಪ್ರಯೋಗ ಬಳಕೆಯಲ್ಲಿರುವ ಉದಾಹರಣೆಗಳು ದೊರೆಯುತ್ತವೆ–

ಬಯಸಲ್ಪಟ್ಟಳ್ ತರುಣಿ ರಮಣನಿಂ, ನೋಡಲ್ಪಟ್ಟನ್ ಅರಸನಂಗನೆಯು, ಮಾಡಲ್ಪಟ್ಟುದು ಘಟಂ ಕುಂಬಜನಿಂ ಮುಂತಾದ ರಚನೆಗಳನ್ನು ನೋಡಿದರೆ ಕನ್ನಡಕ್ಕೆ ಬಹಳ ಕೃತಕ ಎನಿಸುತ್ತವೆ. ಬಹಳ ಹಿಂದಿನ ಕಾಲದಿಂದಲೂ ಈ ಬಗೆಯ ಪ್ರಯೋಗ ಇದ್ದರೂ ವಯ್ಯಾಕರಣರು ಆ ಕಡೆಗೆ ಲಕ್ಷ್ಯ ಹರಿಸಿಲ್ಲ. ಇತ್ತೀಚೆಗೆ ಇಂಗ್ಲೀಷ್ ಭಾಷಾ ಪ್ರಭಾವವೂ ಇಂಥ ಪ್ರಯೋಗಗಳಿಗೆ ಕಾರಣ ವಾಗಿರಬಹುದೆಂದು ಅಭಿಪ್ರಾಯವಿದೆ. '*All rights are reserved*' ಇದನ್ನು 'ಎಲ್ಲ ಹಕ್ಕುಗಳು ಕಾಯ್ದಿರಿಸಲ್ಪಟ್ಟಿವೆ' ಎಂದು ಬರೆಯಲಾಗುತ್ತದೆ. ಕರ್ಮಣಿ ಪ್ರಯೋಗ ಯಾವಾಗಲೂ ತೀರ ಅವಶ್ಯವೇ ಎಂದು ಭಾವಿಸಬೇಕಾಗಿಲ್ಲ. ಕರ್ಮಣಿಯನ್ನು ಬಳಸದೆಯೂ ವಾಕ್ಯರಚನೆಯ ರೂಢಿ ಬೇಕಾದಷ್ಟಿದೆ.

ಉದಾಹರಣೆಗೆ : ಈ ಮನೆ ಕಲ್ಲಿನಿಂದ ನಿರ್ಮಾಣವಾಗಿದೆ

ಈ ಮನೆ ಕಲ್ಲಿನಿಂದ ನಿರ್ಮಾಣಮಾಡಲ್ಪಟ್ಟಿದೆ.

ಈ ಎರಡರಲ್ಲಿ ಮೇಲಿನದೆ ಹೆಚ್ಚು ಸಹಜ. ಕನ್ನಡಕ್ಕೆ ಕರ್ಮಣಿ ಪ್ರಯೋಗ ಸಹಜವಲ್ಲವೆಂದ ಮಾತ್ರಕ್ಕೆ ಕನ್ನಡದಲ್ಲಿ ಕರ್ಮಣಿ ಇಲ್ಲವೇ ಇಲ್ಲ ಎಂದರ್ಥವಲ್ಲ.

## 9.9 ಸಕರ್ಮಕ–ಅಕರ್ಮಕ ಕ್ರಿಯಾಪದಗಳು

ಕನ್ನಡ ಸಕರ್ಮಕ ಹಾಗೂ ಅಕರ್ಮಕ ಕ್ರಿಯಾಪದ ಭೇದವನ್ನು ಕೇವಲ ವಾಕ್ಯಮಟ್ಟದಲ್ಲಿ ಅವು ಬಳಕೆಗೊಂಡುದನ್ನು ಗಮನಿಸಿ ಗುರುತಿಸಲು ಸಾಧ್ಯವಿದೆ. ಕರ್ಮವನ್ನು ಕೆಲವು ನೇರವಾಗಿ ಸ್ವೀಕರಿಸುತ್ತವೆ. ಇನ್ನು ಕೆಲವು ಸ್ವೀಕರಿಸುವುದಿಲ್ಲ. ಕೆಲವು ಕ್ರಿಯಾಪದಗಳಿಗೆ ಸಕರ್ಮಕತ್ವವನ್ನು ಸೂಚಿಸುವ ಪ್ರತ್ಯಯ ಸೂಚಕಗಳು ಇದ್ದರೆ ಇನ್ನು ಕೆಲವಕ್ಕೆ ಈ ಸೂಚಕಗಳು ಇರುವುದಿಲ್ಲ. ಅನೇಕ ಸಲ ಕರ್ಮ ಸೂಚಕವನ್ನು ಹೊಂದಿರದೇ ಇದ್ದರೂ ಅಂಥವು ಸಕರ್ಮಕವಾಗಿರುತ್ತವೆ.

ಉದಾ : ನಾನು ತಿನ್ನುತ್ತೇನೆ, ನಾನು ತಿನಿಸುತ್ತೇನೆ.

ಈ ವಾಕ್ಯಗಳಲ್ಲಿ ತಿನ್ನು, ತಿನಿಸು ಎರಡೂ ಸಕರ್ಮಕ ಕ್ರಿಯಾಪದಗಳೇ ಆಗಿದ್ದರೂ ಮೊದಲನೆಯದರಲ್ಲಿ ಕರ್ಮಸೂಚಕ ಯಾವುದೂ ಇಲ್ಲ. ಎರಡನೆಯದರಲ್ಲಿ ಕರ್ಮಸೂಚಕ (ಪ್ರೇರಣಾರ್ಥಕ) 'ಇಸು' ಪ್ರತ್ಯಯವಿದೆ. ಆದ್ದರಿಂದ 'ತಿನ್ನು' ಸಹಜವಾಗಿ ಕರ್ಮಾರ್ಥವನ್ನು ಹೊಂದಿರುವ ಕ್ರಿಯಾಪದವೆಂದೂ ತಿನಿಸು ಇದನ್ನು ಕರ್ಮಸಾಧಿತ ಕ್ರಿಯಾಪದವೆಂದೂ ಹೇಳಬಹುದು. ಇಂಥ ಉದಾಹರಣೆಗಳು—

| | | | | |
|---|---|---|---|---|
| ಅಕರ್ಮಕ | + | ಪ್ರತ್ಯಯ | = | ಸಕರ್ಮಕ |
| ಓಡು | + | ಇಸು | = | ಓಡಿಸು |
| ನಿಲ್ | + | ಇಸು | = | ನಿಲ್ಲಿಸು |

## 9.10 ಕ್ರಿಯಾವಿಶೇಷಣಗಳು

ಕ್ರಿಯಾಪದಗಳನ್ನು ವರ್ಣಿಸುವ ಪದಗಳನ್ನು ಕ್ರಿಯಾವಿಶೇಷಣಗಳೆಂದು ಪರಿಗಣಿಸುತ್ತಾರೆ. ಅವುಗಳನ್ನು ಸಹಜ, ತದ್ಧಿತ, ಪ್ರಶ್ನಾರ್ಥಕ, ವಾಕ್ಯಾರ್ಥಕ ಎಂದು ನಾಲ್ಕು ಬಗೆಯಾಗಿ ವಿಂಗಡಿಸಬಹುದು.

ಉದಾ : (i) ಸಹಜ : ಮುಂದೆ, ಹಿಂದೆ, ಹತ್ತಿರ, ದೂರ, ಈಗ, ಆಗ, ಅಲ್ಲಿ, ಇಲ್ಲಿ, ಇಷ್ಟು, ಅಷ್ಟು, ಇನ್ನೂ, ಮತ್ತೆ, ತುಂಬ, ಅಂತು, ಇಂತು, ಇಂದು, ನಾಳೆ, ದೊಡ್ಡದು, ಉದ್ದ, ಗಿಡ್ಡ, ಬೇಗ.

(ii) ತದ್ಧಿತ : ಸಣ್ಣಗೆ, ತಣ್ಣಗೆ, ಕೆಂಪಗೆ, ಕಮ್ಮನೆ, ತೆಳ್ಳನೆ, ಭಗಭಗ, ದಪದಪ, ಘೊಪ್ಪನೆ, ಪಟ್ಟನೆ, ಗೊಳ್ಳನೆ.

(iii) ಪ್ರಶ್ನಾರ್ಥಕ : ಎಲ್ಲಿ, ಯಾಕೆ. ಎಷ್ಟು, ಎಂತು, ಏನು, ಅಲ್ಲವೆ.

(iv) ವಾಕ್ಯಾರ್ಥಕ : ಇಡೀ ವಾಕ್ಯದಲ್ಲಿ ಮುಖ್ಯ ಕ್ರಿಯಾಪದವನ್ನು ಒಂದಕ್ಕಿಂತ ಹೆಚ್ಚು ವಿಶೇಷಣಗಳು ವರ್ಣಿಸುತ್ತಿದ್ದರೆ ವಾಕ್ಯಾರ್ಥಕವೆಂದು ಭಾವಿಸಬೇಕು. ಉದಾ : **ನಿಜವಾಗಿಯೂ** ಅವನು **ಗಪಗಪನೆ** ತಿಂದನು. ಅವರು **ಬೇಗ ಬೇಗನೆ ಮುಂದೆ** ಓಡಿದರು. ಅವಳು **ಬಹಳಷ್ಟು** ತೆಳ್ಳಗೆ ಇದ್ದಾಳೆ. ಅಶೋಕನು ಇನ್ನೂ ಹಿಂದೆ ಹೋದನಲ್ಲವೆ ?

೧೦

## ತತ್ಸಮ - ತದ್ಭವ

10.1 ಕೇಶಿರಾಜ ಮುಂತಾದ ವೈಯಾಕರಣರು ಸಂಸ್ಕೃತ–ಕನ್ನಡಗಳಲ್ಲಿ ಮೂಲಭೂತ ವ್ಯತ್ಯಾಸಗಳು ಇವೆ ಎಂಬುದನ್ನು ಸ್ಪಷ್ಟವಾಗಿ ಹೇಳಿಲ್ಲ, ಕೇಶಿರಾಜನ ಕಾಲಕ್ಕಾಗಲೆ ಕನ್ನಡವು ಹಳಗನ್ನಡ ಅವಸ್ಥೆಯನ್ನು ದಾಟಿ ನಡುಗನ್ನಡ ಅವಸ್ಥೆಗೆ ತಲುಪಿ ಒಂದು ಶತಮಾನವೇ ಆಗುತ್ತಬಂದಿತ್ತು. ಕನ್ನಡದಲ್ಲಿ ಸಂಸ್ಕೃತವನ್ನು ಮಿಶ್ರಮಾಡಿ ಬಳಸುವ ಬಗೆಗೆ ಆಕ್ಷೇಪಣೆಯ ಭಾವ ಬೆಳೆಯುತ್ತಲಿತ್ತು. ಇಂಥ ನೆಲೆಯಲ್ಲಿ ನಿಂತ ಕೇಶಿರಾಜನ ದೃಷ್ಟಿಯಲ್ಲಿ ' ಅಚ್ಚಗನ್ನಡ ' ವೆಂದರೆ ಶುದ್ಧ ಸಂಸ್ಕೃತ ಪದಗಳ ಬದಲಾಗಿ ತದ್ಭವ ಹಾಗೂ ಕನ್ನಡ ಭಾಷಾ ರಚನೆಗೆ ಹೊಂದುವ (ಸಂಸ್ಕೃತದ) ತತ್ಸಮಗಳನ್ನು ಒಳಗೊಂಡ ಗ್ರಾಂಥಿಕ ಶಿಷ್ಟ ಕನ್ನಡ ಭಾಷೆಯಾಗಿದೆ. ದೇಸಿ ಎಂದರೆ ಆಡುನುಡಿಯಲ್ಲಿದ್ದ ಕನ್ನಡ. ಇದನ್ನು ಲಕ್ಷ ದಲ್ಲಿಟ್ಟುಕೊಂಡು ಕೇಶಿರಾಜ ೪೮ ಸೂತ್ರಗಳಲ್ಲಿ ಸಂಸ್ಕೃತದ ತತ್ಸಮ–ತದ್ಭವ ಗಳನ್ನು ವಿವರಿಸಿದ್ದಾನೆ. ಸಹಜ ಕನ್ನಡದಲ್ಲಿ ಯಾವುದಿಲ್ಲ, ಯಾವುದು ಸಂಸ್ಕೃತ ದಿಂದ ಬಂದಿದೆ ಹೇಗೆ ಬಂದಿದೆ ಅದರ ಅರ್ಥ–ರೂಪ ವ್ಯತ್ಯಾಸಗಳೇನು ಎಂಬು ದನ್ನೆಲ್ಲ ಅಷ್ಟೇನೂ ವ್ಯವಸ್ಥಿತವಲ್ಲದ ರೀತಿಯಲ್ಲಿ ಅಪಭ್ರಂಶ ಪ್ರಕರಣದಲ್ಲಿ ವಿವರಿಸಿದ್ದಾನೆ. ಅವನು ಹೇಳಿದ ಮುಖ್ಯ ಬದಲಾವಣೆಗಳಲ್ಲಿ ಕೆಲವು ಹೀಗಿವೆ–

| | ಸಂಸ್ಕೃತ | | ಕನ್ನಡ |
|---|---|---|---|
| ೧ | ಶ್, ಷ್ | > | ಸ್ |
| ೨ | ಸಂಯುಕ್ತ ವ್ಯಂಜನ | > | ವಿರಳ ವ್ಯಂಜನ |
| ೩ | ಮಹಾಪ್ರಾಣ | > | ಅಲ್ಪಪ್ರಾಣ |
| ೪ | ಸಂಯುಕ್ತಾಕ್ಷರ | > | ದ್ವಿತ್ವಾಕ್ಷರ |

ಕನ್ನಡ ಸಂಸ್ಕೃತಕ್ಕೆ ಸಮನಾದ ೨೧ ಪದಗಳ ಪಟ್ಟಿಯನ್ನು ನೀಡಿದ್ದಾನೆ. ಇದ ರಿಂದ ಅಪಭ್ರಂಶ ಪ್ರಕರಣದಲ್ಲಿ ಅವನು ಹೇಳಿದ ಪದಗಳು ವೇಶ್ಯ, ಸಮ

ಸಂಸ್ಕೃತ, ತದ್ಭವ ಮತ್ತು ತತ್ಸಮ ಎಂದು ನಾಲ್ಕು ರೀತಿಯಲ್ಲಿವೆ.

ದೇಶ್ಯಶಬ್ದಗಳ ಕೆಲವು ಉದಾಹರಣೆಗಳು—

ಅಮ್ಮ, ಅಪ್ಪ, ತಾಯಿ, ತಂದೆ, ಅಕ್ಕ, ತಂಗಿ, ಇಲಿ, ಇರುವೆ, ಹುಲಿ, ಎತ್ತು, ಎಮ್ಮೆ, ನೆಲ, ಹೊಲ, ಉಪ್ಪು, ಕಬ್ಬಿಣ, ತಿಪ್ಪೆ, ಗುಂಡ, ಬೋರ, ಕಲ್ಲು, ಪೆದ್ದ, ಮಂಕ, ಕಿವುಡ, ಮೂಕ, ಹೆಳವ, ಕೈ, ಬೆರಳು, ಕಣ್ಣು, ಬಾಯಿ, ಒಂದು ಎರಡು, ಹತ್ತು, ನಾನು, ನಾವು, ಅವನು, ಇವಳು, ಒಳ್ಳೆಯ, ಕೆಟ್ಟ, ಅಷ್ಟು, ಇಷ್ಟು, ಆಟ, ಹೊಲಸು, ಇಂಪು, ಹೋಗು, ತಿನ್ನು, ಕುಣಿ, ಮುಂತಾದ ಅಗಣಿತ ದೇಶ್ಯ ಶಬ್ದಗಳು ಕನ್ನಡದಲ್ಲಿವೆ. ಈ ಬಗೆಯ ಕನ್ನಡ ದೇಶ್ಯ ಶಬ್ದಗಳ ವಿಶಿಷ್ಟತಗಳು :

೧. ಮೂಲ ಶಬ್ದ ಒಂದಕ್ಷರದಿಂದ ನಾಲ್ಕಕ್ಷರ ವರೆಗೆ ಇರಬಹುದು.
ಹೂ, ಎಲೆ, ಕಡಲೆ, ಬಿಸವಂದ,

೨. ಯ ರ ಲ ಣ ಸ ಜ ಟ ಇಂತಹ ವ್ಯಂಜನಗಳಿಂದ ಮಾತ್ರ ಅಂತ್ಯಗೊಳ್ಳುವ ಶಬ್ದಗಳಿದ್ದವು, ಇವೆ.

೩. ಞ, ಙ, ಣ, ಳ್, ಟ ಗಳಿಂದ ಶಬ್ದಗಳು ಆರಂಭವಾಗುವುದಿಲ್ಲ.

೪. ವ್ಯಂಜನದ್ವಿತ್ವ ಶಬ್ದಾರಂಭದಲ್ಲಿ ಇಲ್ಲ. ಮಧ್ಯದಲ್ಲಿ ಸಜಾತಿ ವ್ಯಂಜನ ದ್ವಿತ್ವ ಅಧಿಕ.

೫. ಪ್ > ಹ್ ಬೆಳವಣಿಗೆ ಇದೆ.

೬. ಶಬ್ದ ಪ್ರಾರಂಭದಲ್ಲಿ ಪ್ರತ್ಯಯಗಳಿಲ್ಲ.

೭. ಧಾತುಗಳ ಆದಿ ಅಂತ್ಯಗಳಲ್ಲಿ ಜ, ಞ, ಮಹಾಪ್ರಾಣ ಶ್, ಷ್, ಹ್, ಕ್ಷ್ ಇವು ಬರುವುದಿಲ್ಲ,

೮. ದೀರ್ಘ ಸ್ವರಗಳಾದ ಕೂಡಲೆ ದ್ವಿತ್ವಗಳು ಬರುವುದಿಲ್ಲ.

೯. ವ್ಯಂಜನಾಂತಗಳು ಸ್ವರಾಂತಗಳಾಗಿವೆ.

೧೦. ಸಬಿಂದುಕಗಳು ಅಬಿಂದುಕಗಳಾಗಿವೆ.

೧೧. ಋ, ಬಿ ಮರೆಯಾಗಿವೆ.

೧೨. ವಿಜಾತಿ ವ್ಯಂಜನ ದ್ವಿತ್ವಗಳು ಸಜಾತಿ ದ್ವಿತ್ವಗಳಾಗಿ ಮಾರ್ಪಡುತ್ತವೆ.

**10.2 ತತ್ಸಮ–ತದ್ಭವ :** ಕೇಶಿರಾಜನು ಸಂಸ್ಕೃತದಿಂದ ಕನ್ನಡಕ್ಕೆ ಬಂದ ಬಹಳಷ್ಟು ಶಬ್ದಗಳ ಪಟ್ಟಿಯನ್ನು ಕೆಲವು ಸಾಮಾನ್ಯ ನಿಯಮಗಳೊಡನೆ ಕೊಡುತ್ತ ಹೋಗಿದ್ದಾನೆ. ಆದರೆ ಅವುಗಳನ್ನು ಕನ್ನಡದ ಯಾವ ರಚನೆಯ ಕಾರಣಗಳಿಗಾಗಿ ಸ್ವೀಕರಿಸಲಾಗಿದೆ ಅಥವಾ ಅವುಗಳಲ್ಲಿ ಯಾವ ಬದಲಾವಣೆಗಳಾಗಿವೆಯೆಂಬ ವಿವರಗಳನ್ನು ನೀಡಿಲ್ಲದಿರುವುದರಿಂದ ಈ ಅಪಭ್ರಂಶ ಪ್ರಕರಣ ಅಷ್ಟಾಗಿ ಉಚಿತವೆನಿಸುವದಿಲ್ಲ. ಕನ್ನಡದ ಅನೇಕ ಶಬ್ದಗಳು ಸಂಸ್ಕೃತದಿಂದ ಪ್ರಾಕೃತಕ್ಕೆ ಹೋಗಿ ಪ್ರಾಕೃತ ಮೂಲಕ ಕನ್ನಡಕ್ಕೆ ಬಂದಿವೆ. ಕೇಶಿರಾಜನು ಕೇವಲ ಸಂಸ್ಕೃತಕ್ಕೆ ಹೆಚ್ಚು ಮಹತ್ವವನ್ನು ನೀಡಿದ್ದರಿಂದ ಅವನು ಹೇಳಿರುವ ಅನೇಕ ಶಬ್ದಗಳನ್ನು ನಾವು ಮರು ಪರಿಶೀಲಿಸಿ ಪ್ರಾಕೃತ ಮೂಲಕ ಬಂದವುಗಳನ್ನು ಬೇರೆಯಾಗಿ ಪರಿಗಣಿಸಬೇಕಾಗುತ್ತದೆ. ಹಾಗೆ ಮಾಡಿದಾಗ ಮಾತ್ರ ಆ ಶಬ್ದಗಳ ಸರಿಯಾದ ಬೆಳವಣಿಗೆಯ ಹಂತಗಳನ್ನು ಗುರುತಿಸಿ ವಿವರಿಸಬಹುದಾಗಿದೆ. ಸಮಸಂಸ್ಕೃತ ಶಬ್ದಗಳು ಕನ್ನಡ ರಚನೆಗೆ ಸುಲಭವಾಗಿ ಹೊಂದಿಕೊಂಡುಬಿಡುವದರಿಂದ ಅವುಗಳಲ್ಲಿ ವಿಶೇಷ ವ್ಯತ್ಯಾಸ ಕಾಣದು. ದೇಶೀಯ ಪದಗಳಂತೂ ಶುದ್ಧ ಕನ್ನಡದವು, ಇವೆರಡರ ಬಗ್ಗೆ ನಾವು ವಿವರಿಸಬೇಕಾದ್ದಿಲ್ಲ. ಸಂಸ್ಕೃತದಿಂದ ನೇರವಾಗಿ ಹಾಗೂ ಪ್ರಾಕೃತ ಮೂಲಕ ಕನ್ನಡಕ್ಕೆ ಅಪಭ್ರಂಶವಾಗಿ ಬಂದವುಗಳನ್ನು ಶಾಸ್ತ್ರೀಯವಾಗಿ ವಿಶ್ಲೇಷಿಸುವದು ಅವಶ್ಯವಿದೆ. ಯಾಕೆಂದರೆ ಕನ್ನಡದ ಭಾಷಾ ರಚನೆಗೆ ಅನುಗುಣವಾಗಿ ಅವು ಹೇಗೆ ಬದಲಾವಣೆಗೊಳಗಾಗಿವೆ ಎಂಬುದು ಪರಿಶೀಲನಾರ್ಹ. ಸ್ವೀಕರಿಸುವ ಭಾಷೆಯೇ ಅನ್ಯ ಭಾಷಾ ಪದಗಳನ್ನು ತನ್ನ ರಚನೆಗನುಗುಣವಾಗಿ ಹೇಗೆ ಸ್ವೀಕರಿಸಬೇಕೆಂಬುದನ್ನು ನಿರ್ಧರಿಸುತ್ತದೆ. ಅದರಲ್ಲೂ ಧ್ವನಿಮಾರಚನೆ ಇಲ್ಲಿ ಬಹುಮುಖ್ಯವಾಗಿ ಗಮನಿಸಬೇಕಾದ ಅಂಶವಾಗಿರುತ್ತದೆ. ಕೇಶಿರಾಜ ಹಾಗೂ ಇನ್ನಿತರ ಕನ್ನಡ ವೈಯಾಕರಣರು ಹೇಳಿರುವ ತದ್ಭವ, ಅನ್ಯದೇಶೀಯ ಎಂದಿಷ್ಟೇ ತೆಗೆದುಕೊಂಡರೆ ಸರಿಯಾದ ಕಾರಣ ನೀಡುವುದು ದುಸ್ತರವೆನಿಸುತ್ತದೆ. ಅಂತೆಯೇ ಡಾ. ಕುಳ್ಳಿಯವರು ಸ್ವೀಕೃತ ಶಬ್ದಗಳನ್ನು–

೧. ಸಂಸ್ಕೃತ ಸಮ (*unchanged*)
೨. ಸಂಸ್ಕೃತ ಭವ (*changed*)
೩. ಪ್ರಾಕೃತ ಸಮ
೪. ಪ್ರಾಕೃತ ಭವ

ಎಂದು ನಾಲ್ಕುಗೆಯಾಗಿ ವಿಂಗಡಿಸಿದ್ದಾರೆ.೧

10.2.1 ಪ್ರಾಕೃತ ಮೂಲಕ ಬಂದ ಕೆಲವು ಸಂಸ್ಕೃತ ಶಬ್ದಗಳು

| ಸಂಸ್ಕೃತ | ಪಾಕೃತ | ಕನ್ನಡ |
|---|---|---|
| ಆರ್ಯ | ಅಜ್ಜ | ಅಜ್ಜ |
| ಕಾರ್ಯ | ಕಜ್ಜ | ಕಜ್ಜ |
| ನಿಭ | ನೆಪ | ನೆಪ |
| ವಕ್ರ | ವಂಕ | ವಂಕ |

ಇಲ್ಲಿ ಪ್ರಾಕೃತ ಕನ್ನಡಗಳಲ್ಲಿ ಬದಲಾವಣೆ ಇಲ್ಲ.

10.2.2 ಕನ್ನಡ ರಚನೆಗೆ ಅನುಗುಣವಾಗಿ ಬದಲಾವಣೆ ಹೊಂದಿರುವಂಥವುಗಳು

| ಸಂಸ್ಕೃತ | ಪ್ರಾಕೃತ | ಕನ್ನಡ |
|---|---|---|
| ಸ್ಥಾನ | ಠಾಣ | ಠಾಣ |
| ಕೂರ್ಪಾಸ | ಕುಪ್ಪಿಸೊ | ಕುಪ್ಪಸ (ಕುಬುಸ) |
| ಸ್ಥೂಲ | ಥೋರೋ | ತೋರ (ತೋಲ) |
| ದಂಷ್ಟ್ರ | ದಾಢಾ | ದಾಡೆ |
| ಪೃಥ್ವಿ | ಪೊಢವಿ | ಪೊಡವಿ |
| ವಿದ್ಯಾ | ವೆಜ್ಜೆ | ಬೆಜ್ಜ |
| ಶಿಥಿಲ | ಸಡಿಲೊ | ಸಡಿಲ |
| ಶಯ್ಯಾ | ಸೆಜ್ಜಾ | ಸೆಜ್ಜೆ |

............ಮುಂತಾದವು.

ಕನ್ನಡ ಭಾಷಾರಚನೆಗೆ ಅನುಗುಣವಾಗಿ ಬದಲಾವಣೆಯ ಕಾರಣಗಳನ್ನು ಹೇಳಬಹುದು.

೧. Kulli J. S.- Kesiraja's Sabdamanidarpana (1976) p. 238

**10.2.3** ಕನ್ನಡದಲ್ಲಿ ಋ, ೠ ಸ್ವರಗಳಿಲ್ಲ. ಅವು ರ್ ಎಂದಾಗುತ್ತವೆ. ಇಲ್ಲವೆ ಲೋಪವಾಗುತ್ತವೆ.

ಋಷಿ—ರಿಸಿ ಋಣ—ರಿಣ

ಮೃಗ—ಮಿಗ ಶೃಂಗಾರ—ಸಿಂಗಾರ

**10.2.4** ಕನ್ನಡದಲ್ಲಿ ಸಂಧ್ಯಕ್ಷರಗಳು ಇಲ್ಲ. ಆದ್ದರಿಂದ ಐ—ಎ, ಏ ಔ—ಒ, ಓ ಬದಲಾವಣೆ ಅಲ್ಲಿ ನಡೆಯುತ್ತದೆ—

ವೈಶಾಖ—ಬೇಸಿಗೆ ಸೌರಾಷ್ಟ್ರ—ಸೊರಟ

ಕೌಪೀನ—ಕೋವಣ.

**10.2.5** ಶಬ್ದಾಂತ್ಯದಲ್ಲಿ 'ಒ' ಕನ್ನಡದಲ್ಲಿಲ್ಲ. ಸಂಸ್ಕೃತದಿಂದ ಅಂಥ ಯಾವ ಪದವೂ ಸ್ವೀಕೃತವಾಗಿಲ್ಲ, ಇಂಗ್ಲೀಷಿನಿಂದ ಸ್ವೀಕರಿಸಿದ ಶಬ್ದ— ರೇಡಿಯೋ – ರೇಡವೆ

(ಕನ್ನಡದ ಸಂಭೋಧನೆ ಆಜ್ಞಾರ್ಥ, ಉದ್ಗಾರವಾಚಕಗಳಲ್ಲಿ ಮಾತ್ರ ಶಬ್ದಾಂತ್ಯದಲ್ಲಿ ಒ/ಓ ಬರುತ್ತವೆ,)

**10.2.6** ಕನ್ನಡದಲ್ಲಿ ದೀರ್ಘಸ್ವರ ( ಏಕಾಕ್ಷರಗಳ ಶಬ್ದಗಳ ಹೊರತಾಗಿ ) ಶಬ್ದಾಂತ್ಯದಲ್ಲಿಲ್ಲ. ಆದ್ದರಿಂದ ಅವು ಹ್ರಸ್ವವಾಗುತ್ತವೆ. 'ಆ' ಕಾರಾಂತವಿದ್ದರೆ ಹ್ರಸ್ವ 'ಎ' ಕಾರಾಂತವಾಗಿ ಮಾರ್ಪಡುತ್ತವೆ.

ಬಾಲಾ—ಬಾಲೆ ಶಾಲಾ—ಶಾಲೆ

ಲಕ್ಷ್ಮೀ—ಲಕುಮಿ ಶ್ರೀ—ಸಿರಿ

**10.2.7** ಪದಮಧ್ಯ ಅಕ್ಷರದ ದೀರ್ಘಸ್ವರವು ಹ್ರಸ್ವೀಕರಣಗೊಳ್ಳುವುದು ಕನ್ನಡದ ವಿಶೇಷ ಬಗೆ.

ಆಕಾಶ—ಆಗಸ ವಿಲಾಸ—ವಿಳಸ

ಗೋಪಾಲ—ಗೋವಳ ಪ್ರಯಾಣ...ಪಯಣ

ಆದರೆ ಕೆಲವು ಶಬ್ದಗಳ ಉಚ್ಚಾರದಲ್ಲಿ ಧ್ವನಿ ಲಘುವಾಗಿದ್ದರೆ ಅದರಲ್ಲಿಯ ಸ್ವರ ದೀರ್ಘವಾಗುತ್ತದೆ. ಎಸಡಿ—ಏಡಿ

**10.2.8** ಇ—ಎ, ಉ—ಒ ಪರಿವರ್ತನೆ ದಕ್ಷಿಣ ದ್ರಾವಿಡಭಾಷೆಗಳ ವೈಶಿಷ್ಟ್ಯ. ಕನ್ನಡವೂ ಅದಕ್ಕೆ ಹೊರತಾಗಿಲ್ಲ.

ದಿಶಾ—ದೆಸೆ ಮುಖ—ಮೊಗ
ವಿನಾಯಕ—ಬೆನಕ ಪುಸ್ತಕ—ಹೊತ್ತಗೆ
ನಿಯಮ—ನೇಮ ಕುಂಡ—ಕೊಂಡ.

10.2.9 ಕನ್ನಡದಲ್ಲಿ ದೀರ್ಘಸ್ವರದ ನಂತರ ವ್ಯಂಜನದ್ವಿತ್ವ ಬರದು. ಆದ್ದರಿಂದ ಆ ವ್ಯಂಜನದ್ವಿತ್ವದ ಹಿಂದಿನ ಸ್ವರ ಹ್ರಸ್ವವಾಗುತ್ತದೆ, ಇಲ್ಲವೆ ಆ ವ್ಯಂಜನದ್ವಿತ್ವ ಲೋಪವಾಗುತ್ತದೆ. ವಿಜಾತಿ ದ್ವಿತ್ವಗಳು ಸಜಾತಿ ದ್ವಿತ್ವಗಳಾಗುತ್ತವೆ.

ಚೂರ್ಣ—ಸುಣ್ಣ ಕಾವ್ಯ—ಕಬ್ಬ
ಆರ್ಯ—ಅಜ್ಜ ಗೋಷ್ಠಿ—ಗೊಟ್ಟಿ

10.2.10 ಶ್, ಷ್ ಗಳು ಕನ್ನಡದಲ್ಲಿಲ್ಲ. ಅವು ಸ್ ಆಗುತ್ತವೆ.

ಶಶಿ—ಸಸಿ ಶೂಲ—ಸೂಲ
ಶುಂಟಿ—ಸುಂಟಿ ವೇಷ—ವೇಸ

10.2.11 ಕನ್ನಡದಲ್ಲಿ ಮಹಾಪ್ರಾಣಗಳಿಲ್ಲ, ಅವು ಅಲ್ಪಪ್ರಾಣಗಳಾಗುತ್ತವೆ.

ದವಾಖಾನೆ—ದವಾಕಾನಿ ಖಳ—ಕಳ
ಘಂಟಾ—ಗಂಟೆ ಘಟಿಕ—ಗಡಿಗೆ
ಕಥಾ—ಕತೆ ಫಲ—ಪಳ

10.2.12 ವ್ಯಂಜನಾಂತ ಶಬ್ದಗಳು ಕನ್ನಡದಲ್ಲಿ ಸ್ವರಾಂತವಾಗುತ್ತವೆ. (ವ್ಯಂಜನಾಂತ ಅನ್ಯದೇಶಿ ಪದಗಳಲ್ಲಿಯ ಅಂತ್ಯವ್ಯಂಜನ ಲೋಪವೂ ಆಗಬಹುದು).

ಅಪ್ಸರಸ್—ಅಪ್ಸರಸಿ ಜಗತ್—ಜಗ/ಜಗತ್ತು
ಕಾರ್—ಕಾರು ಬಸ್—ಬಸ್ಸು

10.2.13 ಶಬ್ದಾರಂಭದಲ್ಲಿ ವ್ಯಂಜನದ್ವಿತ್ವ ಬರುವುದಿಲ್ಲ. ಆದ್ದರಿಂದ ವ್ಯಂಜನ ದ್ವಿತ್ವವನ್ನು ಭೇದಿಸಲಾಗುತ್ತದೆ ಇಲ್ಲವೆ ಕೈ ಬಿಡಲಾಗುತ್ತದೆ.

ಉದಾ ; ಶ್ರೀ—ಸಿರಿ (ಇ ಸೇರಿಸಲಾಗಿದೆ)
ಕ್ರಕಚ—ಕರಗಸ (ಅ ಸೇರಿಸಲಾಗಿದೆ)
ಸ್ಮಶಾನ—ಮಸಣ ಪ್ರಯಾಣ—ಪಯಣ
ಸ್ವರ್ಗ—ಸಗ್ಗ ಧ್ವನಿ—ದನಿ

**10.2.14** ಶಬ್ದ ಮಧ್ಯದಲ್ಲಿ ಸಜಾತೀಯ ಇಲ್ಲವೆ ಅನುನಾಸಿಕದಿಂದೊಡಗೂಡಿದ ವ್ಯಂಜನಗಳು ಮಾತ್ರ ಬರುತ್ತವೆ.

| | |
|---|---|
| ಕರ್ಪೂರ—ಕಪ್ಪುರ | ಕಾವ್ಯ—ಕಬ್ಬ |
| ಪ್ರಜ್ವಲ—ಪಜ್ಜಳ | ನಿಶ್ಚಿಂತ—ನಿಚ್ಚಿಂತ |
| ನಿಘಂಟು—ನಿಗಂಟು | ಯತ್ನ—ಜತನ |
| ಭಕ್ತ—ಬಕುತ | ವರ್ಷ—ಬರಿಸ |

**10.2.15** ಕನ್ನಡದಲ್ಲಿ ವ್ > ಬ್, ಬ್ > ವ್, ಮ್ > ವ್, ಪ್ > ಹ್ ವ್ಯಂಜನ ಬದಲಾವಣೆಗಳು ಕಂಡು ಬರುತ್ತವೆ,

| | |
|---|---|
| ವಸತಿ—ಬಸದಿ | ಶವ—ಸಬ |
| ಕಪಿಲೆ—ಕವಿಲೆ | ಪ್ರಾಣ—ಹರಣ |
| ಪಿಷ್ಟ—ಹಿಟ್ಟು | ಗ್ರಾಮ—ಗಾವ |

**10.2.16** ಪ್ರಾಕೃತ ಪ್ರಭಾವದಿಂದ ಯ್ > ಜ್ ಬದಲಾವಣೆಯಾಗಿದೆ.

| | |
|---|---|
| ಯವೆ—ಜವೆ | ಯಶ—ಜಸ |
| ಯೋಗಿ—ಜೋಗಿ | ಯಾತ್ರಾ—ಜಾತ್ರೆ |
| ವಿದ್ಯೆ—ಬಿಜ್ಜೆ | ಉದ್ಯೋಗ—ಉಜ್ಜುಗ |

**10.2.17** ಎರಡು ಸ್ವರಗಳ ಮಧ್ಯದ ಅಘೋಷ ವ್ಯಂಜನವು ಘೋಷವಾಗುವುದು ಕೆಲ ದ್ರಾವಿಡ ಭಾಷೆಗಳ ವೈಶಿಷ್ಟ್ಯ. ಕನ್ನಡವು ಅದರಲ್ಲೊಂದು.

| | |
|---|---|
| ಜಟಾ—ಜಡೆ | ಶುನಕ—ಸೊಣಗ |
| ಮುಖ—ಮೊಗ | |

**10.2.18** ಚ್ > ಸ್, ಸ್ > ಚ್ ಬದಲಾವಣೆ ದ್ರಾವಿಡ ಭಾಷೆಗಳಲ್ಲಿ ಸಾಮಾನ್ಯ. ಕನ್ನಡವು ಅದಕ್ಕೆ ಹೊರತಿಲ್ಲ.

| | |
|---|---|
| ಚೂರ್ಣ—ಸುಣ್ಣ | ಶಷ್ಕುಲಿ—ಚಕ್ಕುಲಿ |
| ಹಂಸ—ಅಂಚೆ | |

10.2.19 ಕನ್ನಡದಲ್ಲಿ 'ಪ್' ಕಾರ 'ಹ್' ಕಾರವಾಗಿದೆ. ಕೆಲವು ಸಂಸ್ಕೃತ ಶಬ್ದಗಳಲ್ಲಿರುವ ಶಬ್ದಾದಿಯ 'ಹ್' ಕಾರವನ್ನು ಲೋಪಗೊಳಿಸಿಕೊಂಡಿರುವುದೂ ವೈಶಿಷ್ಟ್ಯವಾಗಿದೆ.

ಪಕ್ಷಿ—ಹಕ್ಕಿ ಪ್ರಣತಿ—ಹಣತೆ
ಪ್ರತಿವತೆ—ಹದಿಬದೆ ಹಂಸ—ಅಂಚೆ
ಹಿಂಗು—ಇಂಗು

10.2.20 ವ್ಯಂಜನಗಳು ಸಮರೂಪಧಾರಣೆಗೊಂಡು (ವಿಜಾತಿ ವ್ಯಂಜನ ದ್ವಿತ್ವಗಳು) ಸಜಾತಿ ದ್ವಿತ್ವವಾಗುತ್ತವೆ.

ಪುಗ್ರಿ—ಪುಗ್ಗಿ ಶರ್ಕರಾ—ಸಕ್ಕರೆ
ಕಸ್ತೂರಿ—ಕತ್ತುರಿ ವಿಸ್ತಾರ—ಬಿತ್ತರ
ವೇತ್ರ—ಬೆತ್ತ ನಿದ್ರಾ—ನಿದ್ದೆ
ಅಗ್ನಿ—ಅಗ್ಗಿ

ಕೇಶಿರಾಜನು ಹೇಳಿರುವ ಕೆಲವು ತದ್ಭವಗಳಿಗೆ ಕಾರಣ ನೀಡಲು ಬರದು. ಅವು ನೇರವಾಗಿ ಸಂಸ್ಕೃತದಿಂದ ಪಡೆದುವೋ ಅಥವಾ ಸಂಸ್ಕೃತಕ್ಕೆ ದ್ರಾವಿಡ ದಿಂದಲೇ ಹೋದವೋ, ಹೋದರೆ ಯಾವ ಯಾವ ಹಂತಗಳಲ್ಲಿ ಬದಲಾವಣೆ ಗಳಾದವು ಎಂಬುವುದನ್ನು ವಿವರಿಸಿದರೆ ಮಾತ್ರ ಅವುಗಳ ಬೆಳವಣಿಗೆಯನ್ನು ಸ್ಪಷ್ಟವಾಗಿ ಗುರುತಿಸಬಹುದು.

# ೧೧

## ಭಾಷಿಕ ಬದಲಾವಣೆ - ತಂತ್ರಗಳು

11.0 ಒಂದು ಅಥವಾ ಹಲವು ಭಾಷೆಗಳಲ್ಲಿಯ ಪದಗಳ ಚರಿತ್ರೆಯನ್ನು ಪರಿಶೀಲಿಸುವಾಗ ಭಾಷಿಕ ಬದಲಾವಣೆಗೆ ಕಾರಣವಾಗುವ ಮುಖ್ಯ ಹಾಗೂ ಗೌಣ ತಂತ್ರಗಳನ್ನೆಲ್ಲ ಆಧುನಿಕರು ಗಮನಿಸುತ್ತಾರೆ. ಧ್ವನಿ, ಧ್ವನಿಮಾ, ಆಕೃತಿಮಾ ವಾಕ್ಯರಚನೆ ಹಾಗೂ ಅರ್ಥ ಈ ಎಲ್ಲ ವಿಭಾಗಗಳ ವಿವಿಧ ಹಂತಗಳಲ್ಲಿ ನಡೆಯುವ ಭಾಷಿಕ ಬದಲಾವಣೆ ವೈವಿಧ್ಯಪೂರ್ಣವಾಗಿರುತ್ತದೆ. ಭಾಷಾವ್ಯತ್ಯಾಸ ಭಾಷೆಯ ಜೀವಂತಿಕೆಯ ಒಂದು ಲಕ್ಷಣ. ಸೌಲಭ್ಯಾಕಾಂಕ್ಷೆ, ಅನ್ಯಭಾಷಾ ಸಂಸರ್ಗ, ಶಿಕ್ಷಣ, ಪತ್ರಿಕೆಗಳು, ವ್ಯಕ್ತಿಗಳು, ತಪ್ಪುತಿಳುವಳಿಕೆ, ಸಂಸ್ಕೃತಿ, ಪ್ರಾದೇಶಿಕತೆ, ಪ್ರತಿಷ್ಠೆ, ಸಾದೃಶ್ಯಸೃಷ್ಟಿ, ಮುಂತಾದ ಹಲವು ಅಂಶಗಳು ಭಾಷಿಕ ಬದಲಾವಣೆಗಳಿಗೆ ಕಾರಣವಾಗುತ್ತವೆ. ಇವು ಭಾಷಾ ಬೆಳವಣಿಗೆಗೆ ಕಾರಣಗಳೂ ಹೌದು.

11.1 ಭಾಷಿಕ ಬದಲಾವಣೆಯ ಪ್ರಮುಖ ತಂತ್ರಗಳಲ್ಲಿ ಮೂರು ಮುಖ್ಯವಾಗಿವೆ :

೧. ಧ್ವನಿಬದಲಾವಣೆ ೨. ಸ್ವೀಕರಣ ೩. ಸಾದೃಶ್ಯಸೃಷ್ಟಿ

ಗೌಣತಂತ್ರಗಳಲ್ಲಿ ಬಳಕೆಗೊಳ್ಳುವ ಮುಖ್ಯ ತಂತ್ರಗಳೆಂದರೆ—

೧. ಶಬ್ದ ಸಾಹಚರ್ಯ (*Contamination*) ೨. ಅಧಿವಿಶ್ಲೇಷಣೆ (*Metanalysis*) ೩. ಸಾದೃಶ್ಯಾಕ್ಷರ ಲೋಪ(*Haplology*) ೪. ವರ್ಣ ಪಲ್ಲಟ(*Matathesis*) ೫. ಸಮರೂಪಧಾರಣೆ(*Assimilation*) ೬. ಮಿತವ್ಯಯಾಸಕ್ತಿ ೭. ತಾಲವ್ಯೀಕರಣ (*Palatalization*) ೮. ಹ್ರಸ್ವೀಕರಣ ೯. ದ್ವಿರುಕ್ತಿ ೧೦. ಧ್ವನಿಕ್ಷಯ ೧೧. ದೀರ್ಘೀಕರಣ ೧೨. ವರ್ಣವ್ಯತ್ಯಯ ಇವೇ ಮೊದಲಾದವುಗಳಿವೆ. ಈ ಮೇಲೆ ಸೂಚಿಸಿರುವ ಎಲ್ಲ ಬದಲಾವಣೆಗಳಿಗೆ ಉದಾಹರಣೆಗಳನ್ನು ಇಲ್ಲಿ ನೀಡಿದೆ–

೧. ಧ್ವನಿ ಬದಲಾವಣೆ

ಪ್ > ಹ್, ಪುಲಿ—ಹುಲಿ, ಪತ್ತು—ಹತ್ತು

ಅಯ್ > ಎ, ಮಲೈ—ಮಲೆ, ತಾವರೈ—ತಾವರೆ

೨. ಸ್ವೀಕರಣದ ವಿವರಗಳನ್ನು ೧೧.೩ ರಲ್ಲಿ ನೋಡಿರಿ.

೩. ಸಾದೃಶ್ಯ : 'ಇಸು' ಪ್ರತ್ಯಯವನ್ನು ನಾಮಗಳಿಗೆ ಅನ್ವಯಿಸಿ ಪ್ರೇರಣಾರ್ಥಕ ಕ್ರಿಯಾರೂಪಗಳನ್ನು (ಕ್ರಿಯಾಧಾತುಗಳಿಗೆ ಅನ್ವಯಿಸುವ ಸಾದೃಶ್ಯದ ಮೂಲಕ) ರಚಿಸಲಾಗಿದೆ- ಓಡಿಸು, ತಿನಿಸು, ಸಾಧಿಸು ಇವುಗಳಂತೆ-ಸಂಪರ್ಕಿಸು, ಕತ್ತರಿಸು, ಇತ್ಯಾದಿ.

೪. ಶಬ್ದ ಸಾಹಚರ್ಯ : ಹೆಚ್ಚು ಬಳಕೆಯಲ್ಲಿರುವ ಉಚ್ಚಾರದಲ್ಲಿಯ ಧ್ವನಿಗಳು ಪರೋಕ್ಷವಾಗಿ ಪ್ರಭಾವ ಬೀರಿ ಮೂಲ ಉಚ್ಚಾರವನ್ನು ಕೆಲವು ಸಲ ಅರ್ಥವನ್ನು ಬದಲಾಯಿಸಬಹುದು- ಅಗುರು ಬೆಚ್ಚಗೆ–ಉಗುರು ಬೆಚ್ಚಗೆ, ನಿಲ್–ನಿಂತು ಇದರ ಪ್ರಭಾವದಿಂದ ಕೂಡು–ಕುಂತು ಆಗಿದೆ.

೫. ಅಧಿವಿಶ್ಲೇಷಣೆ : ಕಲ್ಪನೆಯ ಮೂಲಕ, ಸಾದೃಶ್ಯ ಹಾಗೂ ಹೆಚ್ಚು ಬಳಕೆಯಲ್ಲಿರುವ ಶಬ್ದಗಳನ್ನು ಬಳಸಿ ಹೊಸ ಶಬ್ದಗಳನ್ನು ಸೃಷ್ಟಿಸುವುದೇ ಅಧಿ ವಿಶ್ಲೇಷಣೆ, ಉದಾ : ಪಂಡಿತನಿಗೆ-ಪುರುಷಸರಸ್ವತಿ, ದಳ್ಳಾಳಿಗೆ-ಮೂಲಕ ಮಹಾಶಯ.

೬. ಸಾದೃಶ್ಯಾಕ್ಷರಲೋಪ : ವೀರರಾಜ ಪೇಟೆ—ವಿರಾಜಪೇಟೆ

ಬಸವಣ್ಣನವರು—ಬಸಣ್ಣಾರು

೭. ವರ್ಣಪಲ್ಲಟ : ಅಪ್ಪನ್—ಅಹನ್—ಹಾನ

ಅಪ್ಪುದು—ಅಹುದು—ಹೌದು.

೮. ಸಮರೂಪಧಾರಣೆ : ಕಟ್ತೆ—ಕತ್ತೆ, ಪೊಳ್ತು—ಪೊತ್ತು,

ಹರಿ+ಕ—ಹರಕ, ಗರ್ದೆ—ಗದ್ದೆ

೯. ಮಿತವ್ಯಯಾಸಕ್ತಿ : ಕನ್ನಡಿಹರಳ—ಕಂಡ್ಯಾಳ, ಬರುತ್ತೇನೆ—ಬರ್‍ತಾ

ಹೋಗುತ್ತಿಯಾ—ಹೋಯ್ತಿ

೧೦. ತಾಲವ್ಯೀಕರಣ : ಚೇಳು—ತೇಳು. ಕೆಲ್ಸ—ಚೆಲ್ಸ, ಕೆದುರು—ಚೆದುರು.

೧೧. ಹ್ರಸ್ವೀಕರಣ : ಹಾನ—ಹನ, ಗೋಷ್ಠಿ—ಗೊಟ್ಟಿ.

೧೨. ದ್ವಿರುಕ್ತಿ : ಹಸಿವದ್ದಿ, ಗೇಟಬಾಗ್ಲ, ಮೋಟರಗಾಡಿ.

೧೩. ಧ್ವನಿಕ್ಷಯ : ಶ್ರೇಣಿ—ಏಣಿ, ಲಕ್ಷ್ಮೀ—ಲಚ್ಚಿ.

೧೪. ದೀರ್ಘೀಕರಣ : ಮಯಣ—ಮೇಣ, ಚಮ್ಮಟಿಗೆ—ಚಾಟಿ.

೧೫. ವರ್ಣವ್ಯತ್ಯಯ : ಕಾಗದ—ಕಾದಗ, ಫಳಾರ—ಫರಾಳ.

ಇವಲ್ಲದೆ ಪ್ರಭಾವಿ ವ್ಯಕ್ತಿಗಳಿಂದ, ಪತ್ರಿಕೆಗಳಿಂದ, ಹೊಸ ಶಬ್ದಗಳು ಬಳಕೆಗೆ ಬರಬಹುದು. ಗಾಂಧೀಜಿಯುವರಿಂದ ಸತ್ಯಾಗ್ರಹ, ಚಳುವಳಿ, ಹರಿಜನ ಮುಂತಾದವು ಬಳಕೆಗೆ ಬಂದವು. ಶೀತಲಯುದ್ಧ, ಕೈಗಾರಿಕೆ, ನಿಶ್ಶಸ್ತ್ರೀಕರಣ ಆಲಿಪ್ತರಾಷ್ಟ್ರ, ಭಯೋತ್ಪಾದಕರು, ಆತಂಕವಾದಿಗಳು ಮುಂತಾದವು ಪತ್ರಿಕೆಗಳ ಮೂಲಕ ಪ್ರಸಿದ್ಧಿಗೆ ಬಂದವು. ಶಿಕ್ಷಣದಿಂದಾಗಿ ಅನ್ಯಭಾಷಾ ಪದಗಳು, ಧ್ವನಿಗಳು ಕನ್ನಡಕ್ಕೆ ಪ್ರವೇಶಿಸಿದವು.

11.2 ಭಾಷಿಕ ಬದಲಾವಣೆಗಳನ್ನು ಮೂರು ಹಂತಗಳಲ್ಲಿ ಪರಿಗಣಿಸುತ್ತಾರೆ. ಮೊದಲನೆಯುದಾಗಿ– ಧ್ವನಿ-ಧ್ವನಿಮಾ ಬದಲಾವಣೆಗಳು. ಇವನ್ನು ಕೇಂದ್ರ ಬದಲಾವಣೆಗಳು *(Central Kinds)* ಎನ್ನುತ್ತಾರೆ. ಎರಡನೆಯದಾಗಿ ವ್ಯಾಕರಣ ಹಾಗೂ ಕೋಶ ಬದಲಾವಣೆಗಳು ಇವನ್ನು ಬಾಹ್ಯ ಬದಲಾವಣೆಗಳು *(Peripheral Kinds)* ಎನ್ನುತ್ತಾರೆ. ಇವೆರಡೂ ಬದಲಾವಣೆಗಳ ಮಧ್ಯದ ಆಕೃತಿ ಧ್ವನಿಮಾ ಬದಲಾವಣೆಗಳನ್ನೂ ಪರಿಗಣಿಸುತ್ತಾರೆ. ಇದರಲ್ಲಿ ರಚನೆಗಳಿಗೆ ಆದ್ಯತೆ ಇರುತ್ತದೆ.

### 11.3 ಸ್ವೀಕರಣ :

ಸ್ವೀಕರಣ ಯಾವುದೇ ಬೆಳೆಯುವ ಭಾಷೆಗೆ ಅವಶ್ಯ. ಅನ್ಯ ಭಾಷಾಶಬ್ದಗಳ ಸ್ವೀಕರಿಸುವಿಕೆಯನ್ನು

೧. ಶಬ್ದ ಸ್ವೀಕರಣ *(Loan words)*
೨. ಭಾಷಾಂತರ ಸ್ವೀಕರಣ *(Loan translation)*
೩. ರೂಪಾಂತರ ಸ್ವೀಕರಣ *(Adoptation)*
೪. ಸ್ಥಾನಾಂತರ ಸ್ವೀಕರಣ *(Loan shift)*
೫. ಮಿಶ್ರ ಸ್ವೀಕರಣ *(Loan blend)*
೬. ಸಾಂಸ್ಕೃತಿಕ ಸ್ವೀಕರಣ *(Cultural)*

ಎಂಬುದಾಗಿ ವರ್ಗೀಕರಿಸಿ ಐತಿಹಾಸಿಕ ವ್ಯಾಕರಣದಲ್ಲಿ ವಿವರಿಸಲಾಗುತ್ತವೆ.

**11.3.1 ಶಬ್ದ ಸ್ವೀಕರಣ :**

11.3.1.1 ಬೇರೆ ಭಾಷೆಯಿಂದ ಯಥಾವತ್ತಾಗಿ ಇಲ್ಲವೆ ಅಲ್ಪ ಸ್ವಲ್ಪ ಬದಲಾವಣೆಗಳೊಂದಿಗೆ ಶಬ್ದ ಸ್ವೀಕರಿಸಲ್ಪಡುವ ತಂತ್ರವೇ ಶಬ್ದ ಸ್ವೀಕರಣತಂತ್ರ. ಕನ್ನಡದಲ್ಲಿ ಇಂಥ ಅಸಂಖ್ಯಾತ ಶಬ್ದಗಳು ಸ್ವೀಕರಿಸಲ್ಪಟ್ಟಿವೆ. ಅವುಗಳಲ್ಲಿ ಸಂಸ್ಕೃತದ್ದೇ ದೊಡ್ಡ ಪಾಲು. ಪ್ರತಿಶತ ಸುಮಾರು ೫೦ ಕ್ಕೂ ಹೆಚ್ಚು ಶಬ್ದಗಳು ಸಂಸ್ಕೃತದಿಂದ ಸ್ವೀಕರಿಸಲ್ಪಟ್ಟಿವೆ. ಉದಾ : ಅಭಿಪ್ರಾಯ, ನಮಸ್ಕಾರ, ಕೇಂದ್ರ: ಪ್ರವೇಶ, ಶಕ್ತಿ. ಸಂಕೋಚ, ವಸ್ತು, ಭಾಷೆ, ಸ್ಥಳ, ಸ್ವೀಕಾರ, ಧೈರ್ಯ, ವಿಶ್ವಾಸ, ವಿವಾಹ, ಸಂಧಿ, ಶಾಸನ, ಪಾಠ, ಬಲಾತ್ಕಾರ, ಅನ್ಯಾಯ ಇತ್ಯಾದಿ.

11.3.1.2 ಸಂಸ್ಕೃತ–ಪ್ರಾಕೃತಗಳಲ್ಲದೆ ಅರಬ್ಬಿ, ಫಾರಸಿ, ಉರ್ದು, ಗ್ರೀಕ ಲ್ಯಾಟಿನ, ಪೋರ್ತುಗೀಜ್, ಇಂಗ್ಲಿಷ್. ಮರಾಠಿ ಈ ಭಾಷೆಗಳಿಂದ ಕನ್ನಡವು ಅನೇಕ ಪದಗಳನ್ನು ಸ್ವೀಕರಿಸಿದೆ. (ಧ್ವನಿ-ಬದಲಾವಣೆಗೆ ಸಂಬಂಧಿಸಿದಂತೆ ಕನ್ನಡದ ಎಲ್ಲ ನಿಯಮುಗಳೂ ಸಂಸ್ಕೃತ–ಪ್ರಾಕೃತ ಪದಗಳಿಗೆ ಅನ್ವಯವಾದಂತೆ ಇವುಗಳಿಗೂ ಅನ್ವಯವಾಗುತ್ತವೆ.) ವಿವಿಧ ಭಾಷೆಗಳಿಂದ ಸ್ವೀಕೃತ ಕೆಲವು ಶಬ್ದಗಳು ಹೀಗಿವೆ—

೧. ಅರಬ್ಬೀ ಭಾಷೆಯಿಂದ ಸ್ವೀಕೃತ ಪದಗಳು—

ಅಮಾನತ್ – ಅಮಾನತ್ತು. ಅಸ್ಲ್ – ಅಸಲು, ಅಸಾಮಿ – ಅಸಾಮಿ, ಇನಾಂ–ಇನಾಮು, ಈಸವಿ–ಇಸ್ವಿ, ಕಾಹಿಲ್–ಕಾಯಿಲೆ, ಖಂದಕ್–ಕಂದಕ

ಕಾಗಜ್-ಕಾಗದ, ಖಾಇಮ್-ಕಾಯಂ, ಖಾಯಿದ್-ಕಾಯ್ದೆ, ಘಲೀಜ್-ಗಲೀಜು, ಜಬ್ತಿ-ಜಪ್ತಿ, ಜಿನ್ಸ-ದೀನಸು, ತಕ್ರಾರ್-ತಕರಾರು, ತರಬಿಯತ್-ತರಬೇತು, ದಾಖಿಲಾತ್-ದಾಖಲಾತಿ, ಹಾಜಿರ್-ಹಜರ, ದಿಮಾಘ್-ದಿಮಾಕು, ನಖ್‌ಲಿ-ನಕಲಿ, ನಖದ್-ನಗದು, ಫುತೂರ್-ಪಿತೂರಿ, ಫುರಸತ್-ಪುರುಸೊತ್ತು, ಬುರ್ಜ-ಬುರುಜು, ಬಾಬ್-ಬಾಬತ್ತು, ಮಸ್‌ಜಿದ್-ಮಸೀದಿ, ರಾಜಿ-ರಾಜಿ. ಲೆಘಾಯತ್-ಲಾಗಾಯ್ತು, ಲಾಇಖ್-ಲಾಯಕ್ಕು, ವಾರಿಸ್‌ದಾರ್-ವಾರಸುದಾರ, ಷಉಖ್- ಶೋಕಿ ,ಷರಾಫ್-ಸರಾಫ್, ಸಲಾಹ್-ಸಲಹೆ ಹಜ್ಜಾಂ-ಹಜಾಮ. ಹಖೀಖತ್-ಹಕೀಕತ್ತು.

ಅರಬ್ಬಿ-ಉರ್ದು ಮುಖಾಂತರ ಬಂದುವು—

ಅಮೀರ, ಅಹವಾಲ, ಇರಾದೆ, ಇಲಾಖೆ, ಇಲಾಜ, ಕಬೂಲ, ಕಿಮ್ಮತ್, ಕಿಲ್ಲೆ. ಕುರ್ಚಿ, ಕೈದಿ, ಕೋಮು, ಖಾಲಿ, ಜವಾಬ, ಜಮಾ, ಖರ್ಚು, ಜಾಮೀನು, ಜಿಲ್ಲಾ, ತಕಾವಿ, ತಪಶೀಲ, ತಹಸಿಲ್‌ದಾರ, ತಾರೀಖು, ತಾಲ್ಲೂಕು, ತುರಾಯಿ, ದರ್ಜೆ, ದಾವೆ, ದವಲತ್ತು, ಪರಾರಿ, ಪಾಟಿಸವಾಲ, ಫಸಲು, ಫಾಯ್ದೆ, ಬದಲು, ಬಂದೂಕ, ಬಾಕಿ, ಬುರ್ಕಾ, ಮಜಲು, ಮಂಜೂರು, ಮನ್ನಾ ಮರ್ಜಿ. ಮಸಲತ್ತು, ಮಜಹರು, ಮಾಜಿ, ಮಾಮೂಲು, ಮಾಲೀಕ, ಮಾಲು, ಮುಕ್ಕಾಂ, ಮೊಕದ್ದಮೆ, ರಕಂ, ರದ್ದು, ಲುಕ್ಸಾನ, ವಕಾಲತ್ತು, ವಕೀಲ, ವಗೈರೆ, ವಜಾ, ವಶೀಲಿ, ರಾಜೀನಾಮೆ, ರಿವಾಜು, ರಿಯಾಯ್ತಿ, ರುಜು. ವಾಯಿದೆ. ತುರು, ಶಾಮೀಲು. ಷರತ್ತು. ಷರಾ. ಸಹಿ, ಸಬೂಬು. ಸನ್ನದು, ಸದಂ, ಸಾಬೀತು, ಹಕ್ಕು, ಹವಾ, ಹಾಸಲು, ಹಿಕಮತ್ತು ತನಖಾ, ಕಿಸ್ತು, ಹಿಸ್ಸೆ, ಹುಕುಂ.

### 11.3.1.3 ಫಾರಸಿ ಶಬ್ದಗಳು :

ಅಜ್ಮಾಯಿಷಿ-ಅಜಮಾಸ, ಅಂಜೀರ-ಅಂಜೂರ, ಅಬ್ಕಾರಿ-ಅಬಕಾರಿ ಆಮದ್-ಆಮದು, ಉಮ್ಮೇದವಾರ್-ಉಮೇದುವಾರ, ಕಮೀ-ಕಮ್ಮಿ ಕಾರ್‌ಕೂನ-ಕಾರಕೂನ, ಕುಷ್ತಿ-ಕುಸ್ತಿ, ಖಾನಾಹ್-ಖಾನೆ ಚಕ್‌ಬಂದಿ-ಚಕ್ಕುಬಂದಿ ಚೌಕಷಿ-ಚೌಕಾಸಿ, ಜಬರ್ದಸ್ತ-ಜಬರದಸ್ತ ಜಮೀನ್-ಜಮೀನು, ತಗಾದನ್-ತಗಾದೆ. ತಾರ್-ತಾರು, ದಘಲ್‌ಬಾಜಿ-ದಗಲ್‌ಬಾಜಿ, ದಲ್ಲಾಲ್-ದಳ್ಳಾಳಿ, ನಖ್‌ದಿ-ನಗದಿ, ನಮೂನಹ್-ನಮೂನೆ ಪತ್ತೇದಾರ್-ಪತ್ತೇದಾರ, ಫರಂಗಿ,

ಪರಂಗಿ, ಭಕ್ಷೀಸ-ಬಕ್ಷೀಸು, ಬುನ್ಯಾದ್-ಬುನಾದಿ, ಮಜಮೂರಿ-ಮಜೂರಿ, ಮೇಜ್‌ಬಾನಿ-ಮೇಜವಾನಿ ರಫ್ತ್-ರಫ್ತು, ರಾಸ್ತಾ-ರಸ್ತೆ, ಲಂಗರ್-ಲಂಗರು, ವಸೂಲಾತ್-ವಸೂಲಾತಿ, ವಾಪಸ್-ವಾಪಸ್ಸು, ಷಿಕಾರ್-ಶಿಕಾರಿ. ಷಿಸ್ತ-ಶಿಸ್ತು, ಸಾಮಾನ-ಸಾಮಾನು, ಹವಸ್-ಹೌಸು,

ಇತರ ಕೆಲವು ಫಾರಸಿ ಶಬ್ದಗಳು : ಅರ್ಜಿ, ಆರಾಮು, ಆಲೂ, ಇನಾಂ-ದಾರ್, ಕಮಾನು, ಕರಬೂಜು, ಕರಾರು, ಕಲಾಬತ್ತು. ಕಲಾಯಿ, ಕಸೂತಿ ಕಾರಬಾರು, ಕಾರಸ್ಥಾನ, ಕೂಲಿ, ಕೊತ್ವಾಲ. ಖಾಸಗಿ, ಖಜಾಂಚಿ. ಖರೀದಿ ಖಾನೇಸುಮಾರಿ. ಖುದ್ದ. ಖೂನಿ. ಗಸ್ತು. ಗುಮಾಸ್ತ. ಗುಲಾಬಿ, ಗುಲಾಮ ಗೋರಿ. ಚಟ್ನಿ. ಚಪಾತಿ. ಚಮಚ, ಚರಕ, ಚಾಕರಿ, ಚಾಲಾಕ. ಚೂರು. ಜಾಲೂ. ಚೌಕೀದಾರ, ಛಾಪ, ಜಖಂ. ಜಮಾದಾರ್. ಜಮೀನದಾರ ಜಲ್ದಿ, ಜವಾನ. ಜವಾಬ್ದಾರಿ. ಜಹಗೀರದಾರ. ಜಹಜು. ಜಾನವಾರ, ಜಾಸ್ತಿ. ಜಿಲೇಬಿ, ಜೋರು. ಜುಲಾಬು, ತಗಾದೆ, ತಮಾಷೆ ತಂಬೂರಿ, ತಯಾರಿ, ತುಪಾಕಿ, ತುರುಕ, ತೋಪು, ತ್ರಾಸು, ದಫೇದಾರ್ ದಫ್ತರ್. ದಮ್ಮು, ದರಖಾಸ್ತು, ದರ್ಜಿ, ದರಬಾರು, ದೋಸ್ತಿ, ದಸ್ತು. ದಸ್ತಾವೇಜು, ದಾಲ್ಚಿನ್ನಿ, ದಾವೆ, ದಿವಾನ, ದುಬಾರಿ ದುರ್ಬೀನು, ನಮಾಜು. ನೌಕರಿ, ನಾಜೂಕ, ನಾಷ್ಟ, ನಶೆ, ಪರದೆ, ಪರವಾ ಪರವಾನಗಿ, ಪಲಾವು. ಪಹರೆ, ಪಾಯಖಾನೆ, ಪಾಯಿಜಾಮಾ. ಫಿರ್ಯಾದಿ, ಬಾಗಾಯ್ತು, ಬಜಾರ, ಬಂದರು, ಬಂದೋಬಸ್ತ ಬರ್ಫಿ, ಬಹದ್ದೂರ, ಬೂಂದಿ, ಬದಾಮು, ಬೇಜಾರು, ಬೇವಾರ್ಸಿ, ಭೇಷ್ ಭರವಸೆ, ಮಜಾ, ಮೈಲು, ಮಸಾಲೆ, ಮಸ್ತ, ಮಾಫಿ, ಮಾಮಲೆದಾರ ಮಾಲೀಸು. ಮುನಿಷಿ, ಮುನ್ನೀಂ, ಮುಲ್ಕಿ, ಮೇಸ್ತ್ರಿ, ಮೇಸ್ತ್ರಿ, ಮೈದಾ ಮೈದಾನ, ಮೊಹರು. ರೈತ, ರವಾನೆ. ರುಮಾಲ. ಲಗಾಮು, ಲಫಂಗ. ಲಷ್ಕರ, ಶಹಭಾಷ್, ಶಾಯಿ, ಶಿರಸ್ತೆದಾರ, ಷಹರ, ಷರಾಬು ಸಫಾಯಿ. ಸರಹದ್ದು. ಸವಾರಿ. ಸಾದಾ. ಸಿಪಾಯಿ, ಸಿಬ್ಬಂದಿ, ಸೀಸೆ, ಸುಬೇದಾರ್, ಹುಷಾರು.

ಹದಿಮೂರನೆಯ ಶತಮಾನದಿಂದೀಚೆ ಮುಹಮ್ಮದೀಯ ಅರಸರು ದಕ್ಷಿಣ ಭಾರತದ ಅನೇಕ ಪ್ರದೇಶಗಳಲ್ಲಿ ತಮ್ಮ ರಾಜ್ಯ ವಿಸ್ತರಿಸತೊಡಗಿದಮೇಲೆ ಅವರು ಬಳಸುತ್ತಿದ್ದ ಅರಬ್ಬಿ-ಫಾರಸಿ ಭಾಷೆಗಳ ಪದಗಳು ಕನ್ನಡದಲ್ಲಿ ಸೇರತೊಡಗಿದವು,

ಬಹಮನಿ ಅರಸರು, ಹೈದ್ರಾಬಾದ ನವಾಬರು. ಮೈಸೂರಿನ ಹೈದರ್-ಟಿಪ್ಪು ಸುಲ್ತಾನರು ಬಹುಮಟ್ಟಿಗೆ ಅರಬ್ಬಿ-ಫಾರ್ಸಿ ಶಬ್ದಗಳು ಕನ್ನಡದಲ್ಲಿ ಸೇರಲು ಕಾರಣರಾದರು.

ಅರಬ್ಬಿ-ಫಾರ್ಸಿಯಿಂದ ಉರ್ದು ಹುಟ್ಟಿದ್ದು. ಅರಬ್ಬಿ-ಫಾರ್ಸಿ ಭಾಷೆಯ ಅಪಭ್ರಂಶ ಪದಗಳು ಉರ್ದುವಿನ ಜನನಕ್ಕೆ ಕಾರಣವಾಯಿತು. ದಕ್ಷಿಣ ಭಾರತದ ಹೈದ್ರಾಬಾದ, ಕಲಬುರ್ಗಿಗಳಲ್ಲಿ ದಖನಿ ಉರ್ದು ಭಾಷೆ ಹುಟ್ಟಿತು. ಇದರಿಂದ ಅರಬ್ಬಿ-ಫಾರಸಿ ಭಾಷೆಗಳ ಪದಗಳು ಉರ್ದುವಿನ ಮೂಲಕವಾಗಿಯೇ ಕನ್ನಡದಲ್ಲಿ ಸೇರಿಕೊಂಡಿವೆ. ಆದ್ದರಿಂದ ಈ ಶಬ್ದಗಳನ್ನು ಉರ್ದು ಶಬ್ದಗಳೆಂದು ಗುರುತಿಸುವ ವಾಡಿಕೆಯೂ ಇದೆ,

11.3.1.4 ಗ್ರೀಕ್, ಲ್ಯಾಟಿನ್, ಪೋರ್ತುಗೀಜ್ ಮತ್ತು ಇಂಗ್ಲಿಷ್ ಭಾಷೆಗಳಿಂದಲೂ ಕನ್ನಡ ಸ್ವೀಕರಿಸಿದೆ. ಆಂಗ್ಲರು. ಪೋರ್ತುಗೀಜರು ನಮ್ಮ ನಾಡನ್ನು ಆಳಿದ್ದರಿಂದ ಅವರಾಡುತ್ತಿದ್ದ ಇಂಡೋ ಯುರೋಪಿಯನ್ ಭಾಷಾ ಶಬ್ದಗಳು ಕನ್ನಡದಲ್ಲಿ ಸೇರಿಕೊಂಡವು. ಗ್ರೀಕ್ ಭಾಷೆಯ ಸಂಪರ್ಕ ಕನ್ನಡಕ್ಕೆ ಕ್ರಿ. ಶ. ೧ನೆಯ ಶತಮಾನದಿಂದಲೆ ಇತ್ತೆಂದು ಹೇಳುತ್ತಾರೆ. ಗ್ರೀಕ್ ಮತ್ತು ಸಂಸ್ಕೃತ ಭಾಷೆಗಳು ಹತ್ತಿರದ ಭಾಷೆಗಳು, ಕೆಲವು ಗ್ರೀಕ ಶಬ್ದಗಳು ಸಂಸ್ಕೃತದ ಮೂಲಕ ಕನ್ನಡದಲ್ಲಿ ಸೇರಿವೆ. ಉದಾ : ದ್ರಮ್ಮ-ದಮ್ಮ (ದಮ್ಮಡಿ) ಸ್ಯರಿಂಕ್ಸ-ಸೈರಿಂಗ ಸುರಂಗ. ಸಿಯೋ-ಸೇವಗೆ-ಶ್ಯಾವಿಗೆ ದೇನಾರಿಯಸ್-ದೀನಾರ, ಗೊರ್‌ದಿಯನ್-ಗದ್ಯಾಣ.

ಪೋರ್ತುಗೀಜ್ ಶಬ್ದಗಳು :

***Armario***-ಅಲ್ಮಾರಿ, ***Ananas***-ಅನಾನಸ್ಸು, ***Hospital***-ಆಸ್ಪತ್ರೆ, ***Bomba***-ಬೊಂಬು, ***Batata***-ಬಟಾಟೆ, ***Chave***-ಚಾವಿ, ***Estirar*** – ಇಸ್ತ್ರಿ, ***Candil*** - ಕಂದೀಲು, ***Lanterne***-ಲಾಟೀನು-ಲಾಂದ್ರ, ***Leilao***-ಲಿಲಾವು, ***Mesa***-ಮೇಜು, ***Padre***-ಪಾದ್ರಿ, ***Papaia***-ಪಪಾಯಿ, ***Pena***-ಪೆನ್ನು, ***Pipa***-ಪಿಪಾಯಿ, ***Pistola***-ಪಿಸ್ತೂಲು, ***Saboan*** – ಸಾಬೂನು, ಸಾಬಾಣ, ***Tabaco***-ತಂಬಾಕು, ***Varanda***-ವರಾಂಡ.

## 11.3.1.5 ಇಂಗ್ಲಿಶ್ ಶಬ್ದಗಳು :

ಆಂಗ್ಲರು ನಮ್ಮ ನಾಡನ್ನು ಸುಮಾರು ೨೦೦ ವರ್ಷಕಾಲ ಆಳಿದರು. ಮೊದಮೊದಲು ಆಳರಸರ ಭಾಷೆಯಾಗಿ ಬಳಕೆಗೊಳ್ಳುತ್ತ ಬರಬರುತ್ತ ಸುಶಿಕ್ಷಿತರ ಪ್ರತಿಷ್ಠಿತ ಭಾಷೆಯೆನಿಸಿಕೊಂಡು ಎಲ್ಲ ಕ್ಷೇತ್ರಗಳಲ್ಲೂ ಹಬ್ಬಿಕೊಂಡಿತು. ಇದರಿಂದ ಬಹಳಷ್ಟು ಇಂಗ್ಲಿಶ್ ಪದಗಳು ಕನ್ನಡದ ಒಡಲನ್ನು ಸೇರಿಕೊಂಡವು. ಉತ್ತರ ಕರ್ನಾಟಕಕ್ಕಿಂತ ದಕ್ಷಿಣ ಕರ್ನಾಟಕದ ಸುಶಿಕ್ಷಿತರಲ್ಲಿ ಇಂಗ್ಲಿಶ್ ಪ್ರಭಾವ ಹೆಚ್ಚು. ಕೆಲವು ಉದಾಹರಣೆಗಳು—

ಕೋರ್ಟು, ಬ್ಯಾಂಕು, ಬಕೆಟ್ಟು, ಜಜ್ಜು, ಲಾಜ್, ಸೋಪ. ಬಿಲ್ಲು. ಆಫೀಸು, ರಜಿಸ್ಟರು, ಕಾಫಿ, ಟೀ, ಟಿಫಿನ್, ಸೊಸೈಟಿ, ಕ್ಲಬ್. ಬ್ರೆಡ್, ಬೇಕರಿ, ಬಿಸ್ಕಿಟ್, ಪಾವಡರ್, ಫೋಟೊ, ಫ್ಯಾನ್, ಟ್ರಿಝಂ, ಕಂಪನಿ, ಫ್ಯಾಕ್ಟರಿ, ರೈಲು, ಟ್ರೇನು, ಪ್ಲ್ಯಾಟ್‌ಫಾರ್ಮ, ಟಿಕೆಟ್. ಬೆಂಚು, ಮಾಸ್ತರು (ಮೇಷ್ಟ್ರು) ಪೆನ್‌ಶನ್, ಸರ್ವೀಸ, ರೋಡು. ಬಸ್ಸು, ಲೈಟು, ಕ್ಲಾಸು, ಗ್ಲಾಸು, ಸ್ಕೂಲು, ಕಾಲೇಜು, ಫೀಜು, ನೋಟೀಸು, ಲಾರಿ, ಕಾರು, ಸೋಫಾ, ಟೇಬಲ್, ಇವೇ ಮುಂತಾದ ಸಾವಿರಾರು ಇಂಗ್ಲಿಶ್ ಶಬ್ದಗಳು ಕನ್ನಡದಲ್ಲಿ ಬಳಕೆಯಾಗುತ್ತಿವೆ.೧

**11.3.2 ಭಾಷಾಂತರ ಸ್ವೀಕರಣ :** ಸ್ವೀಕರಿಸುವ ಭಾಷೆ ತನ್ನಲ್ಲಿರುವ ಸಾಮಗ್ರಿಯನ್ನು ಬಳಸಿ ಮೂಲ ಶಬ್ದದ ಅರ್ಥ ಉಂಟಾಗುವಂತೆ ಭಾಷಾಂತರ ಮಾಡಿದರೆ ಅದನ್ನು ಭಾಷಾಂತರ ಸ್ವೀಕರಣ ಎನ್ನುತ್ತಾರೆ. ಉದಾ : ಕನ್ನಡದಲ್ಲಿ ಮೊದಲು "ಧಬೆ ಧಬೆ" ಎಂಬ ಪದವಿತ್ತು. ಆದರೂ ಇಂಗ್ಲೀಷಿನ "*Water falls*" ದಿಂದಾಗಿ ಕನ್ನಡದಲ್ಲಿ "ಜಲಪಾತ" ಆಯಿತು. *Necktie*–ಕೊರಳಪಟ್ಟಿ *United Nations Organization*–ಸಂಯುಕ್ತ ರಾಷ್ಟ್ರ ಸಂಘ.

---

೧. ಅನ್ಯಭಾಷೆಗಳಿಂದ ಸ್ವೀಕೃತ ಶಬ್ದಗಳ ಕೆಲವು ಉದಾಹರಣೆಗಳನ್ನು ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರೀ ಅವರ ಹೊಸಗನ್ನಡ ವ್ಯಾಕರಣ ಗ್ರಂಥದಿಂದ ಇಲ್ಲಿ ಆಯ್ದುಕೊಂಡಿದೆ. ಸ್ವೀಕೃತ ಶಬ್ದಗಳ ಭಾಷಾವೈಜ್ಞಾನಿಕ ವರ್ಗೀಕರಣ–ವಿವರಣೆಗಾಗಿ 'ಸ್ವೀಕರಣ' ಭಾಗವನ್ನು ನೋಡಬೇಕು.

11.3.3 **ರೂಪಾಂತರ ಸ್ವೀಕರಣ :** ಸ್ವೀಕರಿಸಿದ ಶಬ್ದಗಳನ್ನು ನಮ್ಮ ಭಾಷೆಯ ರಚನೆಗೆ ತಕ್ಕಂತೆ ರೂಪಾಂತರಿಸಿಕೊಳ್ಳುವ ತಂತ್ರವೇ ರೂಪಾಂತರ ತಂತ್ರ.

| ಉದಾ : | **ಸಂಸ್ಕೃತ** | **ಕನ್ನಡ** | **ಸಂಸ್ಕೃತ** | **ಕನ್ನಡ** |
|---|---|---|---|---|
| | ಲಕ್ಷ್ಮೀ | ಲಕುಮಿ | ದಿಶಾ | ದೆಸೆ |
| | ಕಲಾ | ಕಲೆ | ಮಾಲಾ | ಮಾಲೆ |

ಕನ್ನಡದಲ್ಲಿ ದೀರ್ಘಸ್ವರ (ಏಕಾಕ್ಷರ ಶಬ್ದಗಳ ಹೊರತಾಗಿ) ಶಬ್ದಾಂತ್ಯದಲ್ಲಿಲ್ಲ. ಅವು ಹ್ರಸ್ವವಾಗುತ್ತವೆ. 'ಆ' ಕಾರ ಶಬ್ದಾಂತ್ಯದಲ್ಲಿದ್ದರೆ 'ಎ' ಕಾರವಾಗುತ್ತದೆ.

11.3.4. **ಸ್ಥಾನಾಂತರ ಸ್ವೀಕರಣ :** ಬೇರೆ ಭಾಷೆಯಿಂದ ಒಂದು ಹೊಸದಾದ ವಸ್ತು ಅಥವಾ ರೀತಿ (ರೂಢಿ) ನಮ್ಮ ಭಾಷೆಗೆ ಪರಿಚಯಿಸಲ್ಪಟ್ಟಾಗ ನಾವು ಆ ವಸ್ತುವನ್ನು ಅಥವಾ ರೀತಿಯನ್ನು ಸ್ವೀಕರಿಸಿದರೂ ಅದನ್ನು ನಮ್ಮ ಭಾಷೆಯಲ್ಲಿರುವ ಸಾಮಗ್ರಿಯಿಂದಲೇ ಸೂಚಿಸಬಹುದು. ಈ ಗೌಣ ತಂತ್ರವನ್ನು ಸ್ಥಾನಾಂತರ ಸ್ವೀಕರಣ ಎನ್ನುತ್ತಾರೆ.

ಉದಾ : ಇಂಗ್ಲಿಷಿನಿಂದ ನಾವು ***Aeroplane*** ಎಂಬ ವಸ್ತುವನ್ನು ನಮ್ಮ ಭಾಷೆಯಲ್ಲಿರುವ ಸಾಮಗ್ರಿಯಿಂದಲೇ 'ವಿಮಾನ' ಎಂದು ಸೂಚಿಸ ತೊಡಗಿದೆವು. ಅದೇ ರೀತಿ, ***Radio*** 'ಆಕಾಶವಾಣಿ' ***Book Post*** ತೆರೆದಂಚೆ, ***Parliament*** ಲೋಕಸಭೆ, ಇತ್ಯಾದಿ.

11.3.5 **ಮಿಶ್ರ ಸ್ವೀಕರಣ :** ಇಲ್ಲಿ ಶಬ್ದ ಸ್ವೀಕರಣ ಹಾಗೂ ಸ್ಥಾನಾಂತರ ಸ್ವೀಕರಣ ಎರಡೂ ತಂತ್ರಗಳನ್ನು ಅಳವಡಿಸಲಾಗುತ್ತದೆ. ಶಬ್ದದ ಕೆಲ ಅಂಶ ಮಾತ್ರ ನೇರವಾಗಿ ಸ್ವೀಕರಿಸಲ್ಪಟ್ಟು ಉಳಿದರ್ಧ ಅಂಶ ಅದಕ್ಕೆ ಸರಿಸಾಟಿಯಾದ ಸ್ವೀಕರಿಸಲ್ಪಟ್ಟ ಭಾಷೆಯ ಸ್ವಂತ ಸಾಮಗ್ರಿಯಿಂದ ಕೂಡಿರುತ್ತದೆ.

ಅಣುಬಾಂಬು (ಅಣು ನಮ್ಮ ಸಾಮಗ್ರಿ ಬಾಂಬು ಸ್ವೀಕರಣ)
ಜಲಜನಕಬಾಂಬು (ಜಲಜನಕ ,, ,, ,,)

ಗುಲಾಮತನ ('ಗುಲಾಮ ಸ್ವೀಕರಣ 'ತನ' ನಮ್ಮ ಸಾಮಗ್ರಿ)
ಅಲ್ಪತೆ (ಅಲ್ಪ ,, ತೆ ,, ,, )
ಸಾಬಣ ಪುಡಿ (ಸಾಬಣ ,, ಪುಡಿ ,, ,, )
ಲಾರಿ ನೀರು (ಲಾರಿ ,, ನೀರು ,, ,, )

### 11.3.6 ಸಾಂಸ್ಕೃತಿಕ ಸ್ವೀಕರಣ :

ಅನ್ಯ ಸಂಸ್ಕೃತಿಯ ಜನತೆಯ ಸಂಪರ್ಕ ಬಹಳ ಕಾಲದವರೆಗೆ ಯಾವುದೇ ಭಾಷಿಕ ಜನರಿಗೆ ಉಂಟಾದರೆ ಆ ಸಂಸ್ಕೃತಿ ಅಥವಾ ಸಂಸ್ಕೃತಿಗಳ ವಿಶಿಷ್ಟ ಪದಗಳು ಭಾಷಿಕ ಅಂಶಗಳು ಸಂಪರ್ಕ ಪಡೆದ ಭಾಷೆಯಲ್ಲಿ ಸೇರುವವು. ಇದನ್ನು ಸಾಂಸ್ಕೃತಿಕ ಸ್ವೀಕರಣವೆನ್ನಬಹುದು. ಕ್ರೈಸ್ತ ಹಾಗೂ ಮುಸ್ಲಿಂ ಸಾಂಸ್ಕೃತಿಕ ಪ್ರಭಾವ ಕನ್ನಡದ ಮೇಲಾಗಿದೆ. ಉದಾ : ಜಲಸಾ, ಪಾರ್ಟಿ, ಹುಂಡಾ, ಹನಿಮೂನ್, ಪ್ಯಾಂಟು, ಪೈಜಾಮಾ, ಮೆಹಂದಿ, ಓಢನಿ ಇಂಥ ಸಾಕಷ್ಟು ಸಾಂಸ್ಕೃತಿಕ ಪದಗಳು ಕನ್ನಡದಲ್ಲಿ ಸ್ವೀಕೃತವಾಗಿವೆ.

ಸ್ವೀಕರಣದಿಂದಾಗಿ ಭಾಷೆಯಲ್ಲಿ ಧ್ವನಿ, ಧ್ವನಿಮಾ ಬದಲಾವಣೆ, ವ್ಯಾಕರಣ ಬದಲಾವಣೆ ಹಾಗೂ ಅರ್ಥ ಬದಲಾವಣೆಗಳುಂಟಾಗುತ್ತವೆ.

ಧ್ವನಿ, ಧ್ವನಿಮಾ ಬದಲಾವಣೆ— ಕನ್ನಡದಲ್ಲಿ *f, z* ಮುಂತಾದ ಧ್ವನಿಗಳಿರಲಿಲ್ಲ. ಆದರೆ ನಾವು ಕಾಫಿ, ಫೀಜು ಫರಕ. ಬಝಾರ ಡಝನ್ ಮುಂತಾದ ಶಬ್ದಗಳನ್ನು ಸ್ವೀಕರಿಸಿದಾಗ ಈ ಧ್ವನಿಗಳು ಕನ್ನಡ ಧ್ವನಿಮಾ ಪಟ್ಟಿಯಲ್ಲಿ ಹೊಸದಾಗಿ ಸೇರಿಸಲ್ಪಟ್ಟವು. ಕನ್ನಡದಲ್ಲಿ ಮಹಾಪ್ರಾಣಗಳಿಲ್ಲ. ಆದರೆ ಸಂಸ್ಕೃತದಿಂದ ಮಹಾಪ್ರಾಣಗಳಿಂದ ಕೂಡಿದ ಪದಗಳನ್ನು ಸ್ವೀಕರಿಸಿದೆ. ಹೀಗಾಗಿ ಮಹಾಪ್ರಾಣ ಧ್ವನಿಮಾಗಳು ಕನ್ನಡದಲ್ಲಿ ಸೇರಿದವು.

### 11.3.7 ವ್ಯಾಕರಣ ಬದಲಾವಣೆ : *Ravi and Raghu went to the market*"

ಎಂಬ ಇಂಗ್ಲಿಷ್ ವಾಕ್ಯವನ್ನು ಕನ್ನಡದಲ್ಲಿ "ರವಿ ಮತ್ತು ರಘು ಪೇಟೆಗೆ ಹೋದರು" ಎಂದು ಭಾಷಾಂತರಿಸುತ್ತಾರೆ. ಆದರೆ ಸಾಮಾನ್ಯವಾಗಿ ಕನ್ನಡದಲ್ಲಿ ಸಂಬಂಧಿಕಾವ್ಯಯ " ಮತ್ತು " ಎಂಬುದನ್ನು ಮೊದಲು ಉಪಯೋಗಿಸುತ್ತಿದ್ದಿಲ್ಲ. ರವಿಯೂ ರಘುವೂ ಪೇಟೆಗೆ ಹೋದರು

ಈ ರೀತಿ ಇತ್ತು. ಈ 'ಮತ್ತು' ಉಪಯೋಗ ಇಂಗ್ಲಿಷ್‌ನಿಂದ ಸ್ವೀಕರಣ ದಿಂದಾಗಿ ಬಂದುದು, ಇದರಂತೆ ಬೀದರ ಕನ್ನಡದಲ್ಲಿ 'ಅಂವ ಅಂದಾಕಿ ನಾ ಭಿ ನಿಮ್ ಸರ್ತಿಬತ್ತೆ' ಎಂಬ ವಾಕ್ಯದಲ್ಲಿ ಬರುವ 'ಕಿ' ಉರ್ದುವಿನಿಂದ ಸ್ವೀಕೃತ ವಾದುದು.

**11.3.8 ಅರ್ಥ ಬದಲಾವಣೆ :** ಕೊಡುವ ಭಾಷೆಯಲ್ಲಿರುವ ಶಬ್ದಗಳ ಮೂಲ ಅರ್ಥ ಎಷ್ಟೋ ಸಲ ತೆಗೆದುಕೊಂಡಿರುವ ಭಾಷೆಯಲ್ಲಿ ಇದ್ದಕ್ಕಿದ್ದಂತೆ ಬರುವುದಿಲ್ಲ. ಇದನ್ನೇ ಅರ್ಥ ಬದಲಾವಣೆ ಎನ್ನುತ್ತಾರೆ.

| ಸ್ವೀಕೃತಪದ | ಮೂಲ ಅರ್ಥ | ಸ್ವೀಕರಿಸಿದ ಭಾಷೆಯಲ್ಲಿನ ಅರ್ಥ |
|---|---|---|
| ಹಗರಣ | ನಾಟಕದ ಪ್ರಕಾರ | ಗೊಂದಲ |
| ಅವಸರ | ಸಮಯ | ಗಡಿಬಿಡಿ |
| ಅಗ್ಗ | ಶ್ರೇಷ್ಠ | ಕನಿಷ್ಠ |
| ಸಂತೆ | ಸಂಸ್ಥೆ | ಜನಸಮೂಹ |
| ಜಾತ್ರೆ | ಯಾತ್ರೆ | ದೇವರ ಉತ್ಸವ |
| ತಿಥಿ | ಪಂಚಾಂಗದಲ್ಲಿ ತಿಥಿ | ಸತ್ತವರ ದಿನ |
| ಟೀಕೆ | ವಿವರಣೆ | ತಿರಸ್ಕಾರ, ವಿಮರ್ಶೆ |
| ಕಂತ್ರಾಟು | ಕಾಂಟ್ರ್ಯಾಕ್ಟ | ತೊಡಕು |
| ಪೆದ್ದ | ಜಾಣ | ದಡ್ಡ |
| ಹಜಾಮತಿ | ಕ್ಷೌರ | ಸುಲಿಗೆ |
| ಪಂಡಿತ | ಜಾಣ | ದಡ್ಡ |
| ಆಭಾಸ | ಪ್ರಕಾಶ | ಹೇಯ |

ಈ ರೀತಿಯ ಅರ್ಥವ್ಯತ್ಯಾಸವನ್ನು ಭಾಷೆಯ ಬಾಹ್ಯಪರಿವರ್ತನೆಯ ಬಗೆಯಲ್ಲಿ ಸೇರಿಸಿ ವಿವರಿಸಲಾಗುತ್ತದೆ. ಹೀಗೆ ಸ್ವೀಕರಣದಿಂದ ಧ್ವನಿ/ಧ್ವನಿಮಾ ಬದಲಾವಣೆ, ವ್ಯಾಕರಣ ಬದಲಾವಣೆ ಮುಂತಾದ ಅನೇಕ ಬದಲಾವಣೆಹೊಂದಿ ಭಾಷೆ ತನ್ನ ರಚನೆಯ ಚೌಕಟ್ಟಿನಲ್ಲೇ ಹರಹನ್ನು ಹೆಚ್ಚಿಸಿಕೊಳ್ಳುತ್ತದೆ, ಅದ ರೊಡನೆ ಹೊಸ ಆಯಾಮಗಳನ್ನೂ ಪಡೆಯುತ್ತದೆ.

# ೧೨

## ಆಧುನಿಕ ಭಾಷಾವಿಜ್ಞಾನದ ಮೂಲತತ್ತ್ವಗಳು ಹಾಗೂ ಶಬ್ದಮಣಿದರ್ಪಣ

### 12.1 ಧ್ವನಿಶಾಸ್ತ್ರ :

12.1.1 'ಧ್ವನಿ' ಭಾಷೆಯ ಮೂಲ ಸಾಮಗ್ರಿ. ಮನುಷ್ಯ ತಾನು ಮೌಖಿಕವಾಗಿ ಹೊರಡಿಸಬಲ್ಲ ಧ್ವನಿಗಳನ್ನು ಭಾಷೆಯಲ್ಲಿ ವ್ಯವಸ್ಥೆಗೊಳಿಸಿರುತ್ತಾನೆ. ಭಾಷೆಯಲ್ಲಿ ಬಳಕೆಗೊಳ್ಳುವ ಧ್ವನಿಗಳು ವೈವಿಧ್ಯಪೂರ್ಣವಾಗಿರುತ್ತವೆ; ವಿಶಿಷ್ಟವೂ ಆಗಿರಬಹುದು. ಒಂದು ಭಾಷೆಯ ಧ್ವನಿಗಳನ್ನು ಆ ಭಾಷೆಯ ಧ್ವನಿವ್ಯವಸ್ಥೆಗೆ ಅನುಗುಣವಾಗಿ ಇನ್ನೊಂದು ಭಾಷೆಯನ್ನಾಡುವ ವ್ಯಕ್ತಿಗಳು ಅನುಕರಿಸಲು ಸಾಧ್ಯ ಎಂದು ಹೇಳಲು ಬಾರದು. ಉದಾಹರಣೆಗೆ ಶರ್ಕರಾ ಎಂಬ ಶಬ್ದದಲ್ಲಿ ಶ್‌ಅರ್‌ಕ್‌ಅರ್‌ಆ ಎಂಬ ಏಳು ಧ್ವನಿಗಳು ಕ್ರಮಬದ್ಧವಾಗಿ ಉಚ್ಚರಿತವಾಗುವುದು ಸಂಸ್ಕೃತ ಭಾಷೆಯಲ್ಲಿ. ಕನ್ನಡ ಭಾಷೆಯನ್ನಾಡುವವರು ಇದನ್ನು ಸಕ್ಕರೆ ಎಂದು ಉಚ್ಚರಿಸುತ್ತಾರೆ, ಇಲ್ಲಿ 'ಶ್', 'ರ್' 'ಆ' ಧ್ವನಿಗಳ ಬದಲಾಗಿ ಸ್, ಕ್, ಅ ಧ್ವನಿಗಳು ಸೇರಿಕೊಂಡಿವೆ. ಇದಕ್ಕೆ ಕಾರಣ ಕನ್ನಡದಲ್ಲಿ 'ಶ್' ಇಲ್ಲ. ಹಾಗೆಯೆ ರ್ಕ್ ಎಂಬ ವಿಜಾತಿ ದ್ವಿತ್ವ ಕ್‌ಕ್ ಎಂಬ ಸಜಾತಿದ್ವಿತ್ವವಾಗಿ ಬದಲಾಗುವುದು ರೂಢಿ. ಶಬ್ದಾಂತ್ಯದ ದೀರ್ಘಸ್ವರಗಳು ಹ್ರಸ್ವವಾಗುವುದೂ ಹೊಸಗನ್ನಡದಲ್ಲಿ ವಿಶಿಷ್ಟ (ಉದಾ : ಮಾಲಾ>ಮಾಲೆ ಕಲಾ>ಕಲೆ, ಲಕ್ಷ್ಮೀ>ಲಕುಮಿ ಇತ್ಯಾದಿ) ಹೀಗೆ ಒಂದೊಂದು ಭಾಷೆಗೂ ವಿವಿಧ ಬಗೆಯ ಧ್ವನಿಗಳ ವಿಶಿಷ್ಟ ಬಳಕೆ ರೂಢಿಗೊಂಡಿರುತ್ತವೆ. ಮನುಷ್ಯ ಲೆಕ್ಕವಿಲ್ಲದಷ್ಟು ಧ್ವನಿಗಳನ್ನು ಹೊರಡಿಸಬಲ್ಲ. ಆದರೆ ತನ್ನ ಭಾಷೆಯಲ್ಲಿ ಅವನು ಅವೆಲ್ಲವನ್ನೂ ಬಳಸುವುದಿಲ್ಲ. ರೂಢಿಗನುಗುಣವಾಗಿ ಸಮಾಜ ಒಪ್ಪಿಕೊಂಡ ರೀತಿಯಲ್ಲಿ ಮಾತ್ರ ಅವನು ಅವುಗಳನ್ನು ಬಳಸುತ್ತಾನೆ.

ಭಾಷೆಯನ್ನು ಖಚಿತವಾಗಿ ವಿವರಿಸಬೇಕಾದರೆ ಧ್ವನಿಗಳನ್ನು ಸರಿಯಾಗಿ ತಿಳಿದುಕೊಳ್ಳುವುದು ಅವಶ್ಯವೆಂದು ಆಧುನಿಕ ಭಾಷಾವಿಜ್ಞಾನಿಗಳು ಅಭಿಪ್ರಾಯ ಪಡುತ್ತಾರೆ. ಲಿಖಿತ ಭಾಷೆಯಲ್ಲಿ ಧ್ವನಿ ಸ್ವರೂಪ ಸ್ಪಷ್ಟವಾಗುವುದಿಲ್ಲ ಆದ್ದರಿಂದ ಆಡುನುಡಿಯನ್ನೇ ಭಾಷಾವಿಶ್ಲೇಷಣೆಗೆ ಆಯ್ದುಕೊಳ್ಳುವುದು ಸೂಕ್ತವೆನ್ನುತ್ತಾರೆ. ಭಾಷೆಗೆ ಲಿಪಿ ಮುಖ್ಯವಲ್ಲ, ಧ್ವನಿ ಮುಖ್ಯ. ಧ್ವನಿ ಅಥವಾ ಧ್ವನಿಗಳ ಗುಂಪಿನ ಪ್ರತಿನಿಧಿಯನ್ನು ಸೂಚಿಸಲು ಲಿಪಿಯನ್ನು ಅನುಕೂಲಾತ್ಮಕವಾಗಿ ಬಳಸಲಾಗುತ್ತದೆ. ಧ್ವನಿಗೂ ಲಿಪಿಗೂ ನೇರವಾದ ಯಾವ ಸಂಬಂಧವೂ ಇಲ್ಲ ಉದಾಹರಣೆಗೆ ಇಂಗ್ಲೀಷಿನಲ್ಲಿ *Put* ಇದರ ಉಚ್ಚಾರ ಪುಟ್, ಆದರೆ *but* ಇದರ ಉಚ್ಚಾರ ಬುಟ್ ಎಂದಾಗದೆ ಬಟ್ ಆಗುತ್ತದೆ. ಕನ್ನಡದಲ್ಲಿ 'ಕರಿ' ಎಂದು ಇಷ್ಟೇ ಬರೆದರೆ ಕರಿ ಎಂಬ ಬಣ್ಣವೋ ಅಥವಾ ಯಾರನ್ನಾದರೂ ಕರೆಯುವುದೋ ಎಂಬುದು ಸ್ಪಷ್ಟವಾಗುವುದಿಲ್ಲ ತಮಿಳು ಭಾಷೆಯಲ್ಲಿ ಗ್, ಜ್ ಡ್, ದ್, ಬ್ ಗಳಿಗೆ ಲಿಪಿ ಸಂಕೇತಗಳೇ ಇಲ್ಲ. ಆದ್ದರಿಂದ 'ಗಾಂಧಿ' ಎಂಬ ಶಬ್ದವನ್ನು 'ಕಾಂತಿ' ಎಂದು ಬರೆಯುತ್ತಾರೆ. ಪ್ರಪಂಚದಲ್ಲಿ ಎಷ್ಟೋ ಭಾಷೆಗಳಿಗೆ ಲಿಪಿಯೇ ಇಲ್ಲ. ಕೆಲವು ಭಾಷೆಗಳು ಬೇರೆ ಭಾಷೆಯ ಲಿಪಿಯನ್ನು ಬಳಸಿಕೊಳ್ಳುತ್ತವೆ, ಉದಾಹರಣೆಗೆ ತುಳು ಕೊಡವ ಭಾಷೆಗಳು ಕನ್ನಡ ಲಿಪಿಯನ್ನು ಬಳಸಿಕೊಂಡಿವೆ. ಮರಾಠಿ, ಹಿಂದಿ ಮುಂತಾದ ಭಾಷೆಗಳು ದೇವನಾಗರಿ ಲಿಪಿಯನ್ನು ಬಳಸುತ್ತವೆ. ಮನುಷ್ಯನು ತನ್ನ ಜ್ಞಾನವನ್ನು ಮುಂದಿನ ಹಾಗೂ ಇಂದಿನ ಪೀಳಿಗೆಗೆ ಬರಹದ ಮೂಲಕ ಕಾಯ್ದಿಡಲು ಲಿಪಿ ಅನುಕೂಲ. ಹಿಂದಿನ ಕಾಲದ ಭಾಷೆಯನ್ನು ತಿಳಿದುಕೊಳ್ಳಲು ಇದು ಅನಿವಾರ್ಯ ಆದರೂ ಅದು ಭಾಷೆಯ ಸಂಪೂರ್ಣ ಸ್ವರೂಪವನ್ನು ತಿಳಿಸಲಾರದು. ಅಂತೆಯೆ ಭಾಷೆಯ ಅಧ್ಯಯನಕ್ಕೆ ಮನುಷ್ಯ ಹೊರಡಿಸುವ ಮೌಖಿಕ ಧ್ವನಿಗಳನ್ನು ಸೂಕ್ಷ್ಮವಾಗಿ ತಿಳಿದುಕೊಳ್ಳುವುದು ಅವಶ್ಯವೆನಿಸಿದೆ ಇಂಥ ಧ್ವನಿಗಳ ಅಧ್ಯಯನವನ್ನು 'ಧ್ವನ್ಯುತ್ಪಾದನ ಶಾಸ್ತ್ರ' ಒಳಗೊಂಡಿರುತ್ತದೆ. ಧ್ವನ್ಯುತ್ಪಾದನ ಶಾಸ್ತ್ರದಲ್ಲಿ ಧ್ವನಿಗಳನ್ನು ಹೊರಡಿಸುವ ಮನುಷ್ಯನ ಧ್ವನ್ಯಂಗಗಳ ವಿವರಣೆ, ಆಯಾ ಅಂಗಗಳಿಂದ ಹುಟ್ಟುವ ಧ್ವನಿಗಳು—ಅವುಗಳ ಲಕ್ಷಣ, ವರ್ಗೀಕರಣ, ವಿವರಣೆ ಒಟ್ಟಿನಲ್ಲಿ ಪ್ರತಿಯೊಂದು ಧ್ವನಿಯ ಅತಿ ಸೂಕ್ಷ್ಮ ನಿರೀಕ್ಷಣೆ, ಪರಿಶೀಲನೆ, ಇಲ್ಲಿರುತ್ತದೆ.

12.1.2 ಮನುಷ್ಯನು ಸ್ಥಾನ, ಕರಣ ಮತ್ತು ಪ್ರಯತ್ನ ಇವುಗಳ ಮೂಲಕ ಧ್ವನಿಯನ್ನು ಹೊರಡಿಸುತ್ತಾನೆ. ಸ್ಥಾನ ಎಂದರೆ ಬಾಯಿಯ ಮೇಲು ಭಾಗದ ಚಲಿಸದೇ ಇರುವ ಅಂಗಗಳು. ಕರಣಗಳೆಂದರೆ ಬಾಯಿಯ ಕೆಳಭಾಗದ ಚಲಿಸುವ ಅಂಗಗಳು, ಪ್ರಯತ್ನವೆಂದರೆ ಧ್ವನಿಯನ್ನು ಹುಟ್ಟಿಸುವ ವ್ಯಕ್ತಿಯು ತಾನು ಇಂಥ ಧ್ವನಿಯನ್ನು ಉಚ್ಚರಿಸಬೇಕು ಎಂದು ಮನಸ್ಸಿನಲ್ಲಿ ನಿರ್ಧರಿಸಿ ಅದಕ್ಕೆ ಅನುಗುಣವಾಗಿ ತನ್ನ ಧ್ವನ್ಯಂಗಗಳನ್ನು ಬಳಸಿಕೊಳ್ಳುವುದೇ ಆಗಿದೆ. ಉದಾಹರಣೆಗೆ– 'ಪ್' ಎಂಬ ಧ್ವನಿಯನ್ನು ಉಚ್ಚರಿಸಬೇಕೆಂದು ನಿರ್ಧರಿಸಿ (ಪ್ರಯತ್ನ) ಕೆಳಗಿನ ತುಟಿ (ಕರಣ) ಹಾಗೂ ಮೇಲಿನ ತುಟಿ (ಸ್ಥಾನ) ಗಳನ್ನು ಸ್ಪರ್ಶಿಸಿ ಬಾಯಿಯೊಳಗಿಂದ ಹವೆಯನ್ನು ಒಮ್ಮೆಲೆ ಸ್ಫೋಟಿಸಿದಾಗ 'ಪ್' ಹೊರಡುತ್ತದೆ. ಹೀಗೆ ಮೂರೂ ಅಂಶಗಳಿಂದ ಧ್ವನಿಗಳು ಹುಟ್ಟುತ್ತವೆ. ಧ್ವನಿ ಹುಟ್ಟಲು ಹವೆಯೂ ಅವಶ್ಯಬೇಕು. ಪುಪ್ಪುಸದಲ್ಲಿನ ಹವೆಯನ್ನು ಪ್ರಯತ್ನ ಪೂರ್ವಕ ಬಾಯಿಯ ಮೂಲಕ ಹೊರದಬ್ಬುತ್ತ ಸ್ಥಾನಕರಣಗಳನ್ನು ಬಳಸಿ ಧ್ವನಿಯನ್ನು ಹುಟ್ಟಿಸಬೇಕಾಗುತ್ತದೆ. ಪುಪ್ಪುಸದಿಂದ ಬಾಯಿಯ ಮೂಲಕ ಹೊರಬರುವ ಹವೆ ಎಂದರೆ ಉಸಿರು ಕೂಡ ಧ್ವನಿಯ ಹುಟ್ಟಿನಲ್ಲಿ ಮಹತ್ವದ್ದಾಗಿದೆ. ತುಟಿಗಳು, ದಂತಗಳು, ವರ್ತ್ಸ, ತಾಲು, ನಾಲಗೆ ಕಂಠ, ಗಲಕುಹರ, ನಾಸಿಕ, ಪುಪ್ಪುಸಗಳು, ಧ್ವನಿ ಪೆಟ್ಟಿಗೆ ಇವು ಧ್ವನಿಗಳನ್ನು ಹುಟ್ಟಿಸುವ ಅಂಗಗಳು. ಧ್ವನಿಪೆಟ್ಟಿಗೆ ಗಂಟಲಲ್ಲಿ ಗಟ್ಟಿಸ್ನಾಯುಗಳಿಂದ ಮಾಡಿದ ಒಂದು ಸಣ್ಣ ಪೆಟ್ಟಿಗೆಯಾಕಾರದ ಅವಯವ. ಅದರಲ್ಲಿ ತೆಳುವಾದ ಎರಡು ಪಟಲಗಳಿವೆ. ಅವುಗಳಲ್ಲಿ ಹವೆ ಪಾರಾದಾಗ ಅವುಗಳ ಕಂಪನದಿಂದ ಧ್ವನಿ ಉತ್ಪನ್ನವಾಗುತ್ತದೆ. ಧ್ವನ್ಯುತ್ಪಾದಕಗಳನ್ನು ಅನುಸರಿಸಿ ಸ್ಪರ್ಶ, ಈಷತ್ಸ್ಪರ್ಶ, ಅನುನಾಸಿಕ ಎಂದು ಧ್ವನ್ಯುತ್ಪಾದನ ಸ್ಥಾನಗಳನ್ನನುಸರಿಸಿ ಓಷ್ಠ್ಯ, ದಂತ್ಯ, ವರ್ತ್ಸ್ಯ, ತಾಲವ್ಯ, ಕಂಠ್ಯ, ಗಲಕುಹರೀಯ, ಧ್ವನಿಪಟಲ ಕಂಪನವನ್ನನುಸರಿಸಿ ಘೋಷ, ಅಘೋಷ ಎಂದು ಮುಖ್ಯವಾಗಿ ಧ್ವನಿಗಳನ್ನು ವರ್ಗೀಕರಿಸುತ್ತಾರೆ. ಹವೆಯ ಚಲನೆಯನ್ನನುಸರಿಸಿ ಘರ್ಷ, ಅನುಘರ್ಷ, ಪಾರ್ಶ್ವಿಕ, ನಾಲಗೆಯ ಕಂಪನವನ್ನನುಸರಿಸಿ ತಾಡಿತ, ಲೋಡಿತ, ಕಂಪಿತ,ನಾಲಗೆಯ ಚಲನೆಯನ್ನು ಅನುಸರಿಸಿ ಸ್ವರ,ಹೀಗೆಧ್ವನಿಗಳನ್ನು ವರ್ಗೀಕರಿಸುತ್ತಾರೆ. ಪ್ರಮುಖ ಧ್ವನಿಗಳನ್ನಲ್ಲದೆ ಅವುಗಳೊಂದಿಗೆ ಉಚ್ಚರಿತವಾಗುವ ಸಹ

ಧ್ವನಿಗಳನ್ನೂ 'ಅವಿಭಾಜಕ' ಎಂದು ಪ್ರತ್ಯೇಕವಾಗಿ ವಿವರಿಸಲಾಗುತ್ತದೆ. ನಾಸಿಕ್ಯತೆ, ಶ್ರುತಿ, ದೀರ್ಘ, ವಿರಾಮ ಆಘಾತಗಳು ಇದರಲ್ಲಿ ಒಳಗೊಳ್ಳುತ್ತವೆ.

ಕನ್ನಡ ಭಾಷೆಯ ಮುಖ್ಯ ಧ್ವನಿಗಳನ್ನು ಸ್ಥೂಲವಾಗಿ ಇಲ್ಲಿ ಪಟ್ಟಿ ಮಾಡಿದೆ.

೧. ಓಷ್ಠ್ಯ ಧ್ವನಿಗಳು– ಪ್, ಬ್, ವ್, (ತುಟಿಯಿಂದ ಉಚ್ಚರಿಸಲ್ಪಡುವಂಥವು)

೨. ದಂತ್ಯ ಧ್ವನಿಗಳು– ತ್, ದ್, (ಹಲ್ಲುಗಳ ಮಧ್ಯ ನಾಲಗೆಯನ್ನಿಟ್ಟು ಉಚ್ಚರಿಸಿದಾಗ)

೩. ವರ್ತ್ಸ್ಯ ಧ್ವನಿಗಳು– ತ್, ದ್, (ನಾಲಗೆಯ ತುದಿಯನ್ನು ಮೇಲಿನ ಹಲ್ಲಿನ ಹಿಂಭಾಗದಲ್ಲಿಟ್ಟು ಉಚ್ಚರಿಸಿದಾಗ)

೪. ತಾಲವ್ಯ ಧ್ವನಿಗಳು– ಟ್, ಡ್, ಳ್, ಷ್, ಚ್, ಜ್, ಶ್, ಞ್, ಯ್ (ನಾಲಗೆಯ ಮುಂಭಾಗ ತಾಲುವಿನ ಕಡೆಗೆ ತಲುಪಿದಾಗ ಅಥವಾ ವಾಲಿದಾಗ)

೫. ಕಂಠ್ಯ ಧ್ವನಿಗಳು– ಕ್, ಗ್, (ಕಂಠದಲ್ಲಿ ಹುಟ್ಟುವಂಥವು)

೬. ಗಲೀಯ ಧ್ವನಿ– ಹ್ (ಕಂಠದ ಆಚೆ ಗಲಕುಹರದಲ್ಲಿ ಹುಟ್ಟುವುದು)

೭. ನಾಸಿಕ ಧ್ವನಿಗಳು– ನ್, ಣ್, ಮ್, ಙ್, ಞ್.

ಧ್ವನಿಗಳು ಹುಟ್ಟುವ ಸ್ಥಾನ ಹಾಗೂ ಕರಣಗಳನ್ನು ಮುಂದಿನ ಪುಟದಲ್ಲಿ ಕಾಣಿಸಿರುವ ಆಕೃತಿಯಲ್ಲಿ ನೋಡಿ.

**ಸ್ವರಗಳು :** ಪುಪ್ಫುಸದಿಂದ ಹೊರಟ ಹವೆ ಆಸ್ಯದಲ್ಲಿ (ಬಾಯಿಯಲ್ಲಿ) ಎಲ್ಲಿಯೂ ಅಡೆತಡೆಯಾಗದೆ ಧ್ವನಿ ಹುಟ್ಟಲು ಕಾರಣವಾಗುವುದಾದರೆ ಅಂಥ ಧ್ವನಿಯನ್ನು ಸ್ವರ ಎಂದು ಕರೆಯುತ್ತಾರೆ. ಸ್ವರಗಳು ಸ್ವತಂತ್ರವಾಗಿ ಉಚ್ಚರಿಸಲ್ಪಡುತ್ತವೆ. ಅವು ಹ್ರಸ್ವ, ದೀರ್ಘ ಅಥವಾ ನಾಸಿಕ್ಯ ಧ್ವನಿಯೊಡನೆ ಕೂಡಿ ಉಚ್ಚರಿತವಾಗಬಹುದು. ವ್ಯಂಜನಗಳನ್ನು ಉಚ್ಚರಿಸಲು ಸ್ವರಗಳ ಸಹಾಯ ಅವಶ್ಯಬೇಕು.

**ವ್ಯಂಜನಗಳು :** ಪುಪ್ಫುಸದಿಂದ ಹೊರಟ ಹವೆ ಆಸ್ಯದಲ್ಲಿ ಸ್ಥಾನ ಕರಣಗಳ ಸಂಪರ್ಕದಿಂದಾಗಿ ತಡೆಯುಂಟಾಗಿ ಹುಟ್ಟುವ ಧ್ವನಿಗಳೇ ವ್ಯಂಜನಗಳು. ವ್ಯಂಜನಗಳನ್ನು ಸ್ವರಗಳಂತೆ ಸ್ವತಂತ್ರವಾಗಿ ಉಚ್ಚರಿಸುವುದು ತೀರ ಕಷ್ಟದಾಯಕ.

# ಧ್ವನ್ಯಂಗಗಳು




೧. ಮೇಲ್ದುಟಿ ೨. ಕೆಳದುಟಿ ೩. ಮೇಲ್ದಂತ ೪. ಕೆಳದಂತ ೫. ಜಿಹ್ವಾಗ್ರ ೬. ಜಿಹ್ವಾಮಧ್ಯ ೭. ಪಶ್ಚಜಿಹ್ವೆ ೮. ವರ್ತ್ಸ ೯. ಕಠಿನತಾಲು ೧೦. ಮೃದುತಾಲು ೧೧. ಕಿರಿನಾಲಿಗೆ ೧೨. ಗಲಕುಹರ ೧೩. ನಾಸಾಕುಹರ ೧೪. ಧ್ವನಿಪೆಟ್ಟಿಗೆ

ಭಾರತೀಯ ವೈಯಾಕರಣಗಳಲ್ಲಿ ಪಾಣಿನಿ ತನ್ನ ಅಷ್ಟಾಧ್ಯಾಯಿಯಲ್ಲಿ ಧ್ವನಿ ಕುರಿತು ಹೆಚ್ಚು ವಿವರ ನೀಡಿದ್ದಾನೆ. ಆದರೆ ಇನ್ನುಳಿದ ವ್ಯಾಕರಣಗಳಲ್ಲಿ ಅಷ್ಟಾಗಿ ಈ ವಿಷಯ ಬರುವುದಿಲ್ಲ. ಕನ್ನಡದಲ್ಲಿ ಕೇಶಿರಾಜನು ತನ್ನ ಶಬ್ದಮಣಿ ದರ್ಪಣದಲ್ಲಿ ಅಲ್ಲಲ್ಲಿ ಕೆಲವು ಸೂತ್ರಗಳಲ್ಲಿ ತನ್ನ ಧ್ವನಿಶಾಸ್ತ್ರ ಪ್ರಜ್ಞೆಯನ್ನು ತೋರಿಸಿಕೊಟ್ಟಿದ್ದಾನೆ.

### 12.1.3 ಆಧುನಿಕ ಧ್ವನಿಶಾಸ್ತ್ರ ಹಾಗೂ ಶಬ್ದಮಣಿದರ್ಪಣ

ಕೇಶಿರಾಜನು ಧ್ವನಿಯ ಹುಟ್ಟುವಿಕೆಯನ್ನು ಪೀಠಿಕಾ ಪ್ರಕರಣದ ೧೧ನೆಯ ಸೂತ್ರದಲ್ಲಿ ಹೀಗೆ ಹೇಳಿದ್ದಾನೆ.

ಅನುಕೂಲಪವನನಿಂ ಜೀ
ವನಿಷ್ಟದಿಂ ನಾಭಿಮೂಲದೊಳ್ ಕಹಳೆಯ ಪಾಂ
ಗಿನವೊಲ್ ಶಬ್ದದ್ರವ್ಯಂ
ಜನಿಯಿಸುಗುಂ ಶ್ವೇತಮದಱ ಕಾರ್ಯಂ ಶಬ್ದಂ

ಈ ಸೂತ್ರದ ಮೇರಗೆ ಗಾಳಿಯು ನಾಭಿಯ ಮೂಲದಲ್ಲಿಂದ ಪ್ರಾರಂಭ ವಾಗುತ್ತದೆ. ಕಹಳೆಯಾಕಾರದಲ್ಲಿ ಹರಿದು ಬಂದು ಧ್ವನ್ಯುತ್ಪಾದನೆಗೆ ಕಾರಣ ವಾಗುತ್ತದೆ. ಆಧುನಿಕ ಧ್ವನಿಶಾಸ್ತ್ರದ ಮೇರೆಗೆ ಹವೆ ಪುಪ್ಪುಸದ ಮೂಲಕ ಹರಿದುಬರುತ್ತದೆ. ನೇರವಾಗಿ ನಾಭಿಯ ಭಾಗದಿಂದ ಹವೆ ಬರದಿದ್ದರೂ ಉಸಿ ರಿನ ಚಲನೆಗೆ ಕಿದಿಯಂತೆ ಸಹಾಯವನ್ನು ಹೊಟ್ಟೆಯ ನಾಭಿಯ ಭಾಗ ಮಾಡು ತ್ತದೆ. ಶಾಸ್ತ್ರೀಯತೆ ಇಲ್ಲಿ ಅಷ್ಟಾಗಿ ಇಲ್ಲದಿದ್ದರೂ ನಾಭಿಯ ಶರೀರದ ಮಧ್ಯ ಹಾಗೂ ಬಹು ಮಹತ್ವದ ಸ್ಥಾನವೆಂಬ ಹಾಗೂ ಉಸಿರಾಟದ ಕಾಲದಲ್ಲಿ ಹೊಟ್ಟೆಯ ಭಾಗವು ಮೇಲೆ ಕೆಳಗೆ ಆಗುವುದರಿಂದ ಗಾಳಿ ಈ ಪ್ರದೇಶದಿಂದಲೇ ಬಂದು ಧ್ವನಿ ಉತ್ಪಾದನೆಗೆ ಕಾರಣವಾಗುತ್ತದೆಂಬ ಭಾವನೆಯಿಂದ ಹೀಗೆ ಹೇಳಿರಬಹುದಾಗಿದೆ.

'ಅನುಕೂಲ ಪವನ' ಹಾಗೂ 'ಜೀವನಿಷ್ಟತೆ' ಬಹಳ ಮಹತ್ವದವು. ಗಾಳಿಯು ತನಗೆ ಅನುಕೂಲವಾಗುವಂತೆ ಹಾಯ್ದು ಬರಲು ಅವಕಾಶವಿರಬೇಕು. ಅಂದರೆ ಗಾಳಿಯ ಮಾರ್ಗದಲ್ಲಿ ಯಾವ ಅಂಗಗಳಿಗೂ ಊನವಿರಕೂಡದು. ಕೇವಲ ಗಾಳಿ ಹಾಯ್ದಾಡಿದರೆ ಧನ್ಯುತ್ಪಾದನೆ ಸಾಧ್ಯವಿಲ್ಲ. ಆಧುನಿಕರು ಹೇಳುವ

'ಪ್ರಯತ್ನ' ಅವಶ್ಯ. ಆ ಪ್ರಯತ್ನವನ್ನೇ ಕೇಶಿರಾಜನು 'ಜೀವನಿಷ್ಟತೆ' ಎಂದಿದ್ದಾನೆ. ಧ್ವನಿಯನ್ನು 'ದ್ರವ್ಯ' ವೆಂದು ಅವನು ಜೈನಧರ್ಮ ಪರಭಾಷೆಗನುಗುಣವಾಗಿ ಹೇಳಿರಬಹುದಾದರೂ ಸ್ಥೂಲವಾಗಿ ಅದನ್ನು ಭಾಷೆಗೆ ಅವಶ್ಯಕವಾಗಿರುವ ಮೂಲ ಸರಕು ಎಂದು ಪರಿಗಣಿಸಬಹುದು. ಶಬ್ದವನ್ನು ನಿರ್ಮಿಸುವಲ್ಲಿ ಮೂಲದ್ರವ್ಯ ಅಂದರೆ ಸಾಮಗ್ರಿಯೇ ಧ್ವನಿ ಎಂದು ಅರ್ಥ ಮಾಡಬೇಕು. ಶ್ವೇತ ಅಥವಾ ಧವಳ ಎಂದರೆ ಶುಭ್ರ ಜ್ಞಾನದ ಸಂಕೇತ. ಧ್ವನಿ-ಭಾಷೆ ಅದರಿಂದ ಜ್ಞಾನ ಎಂಬ ಕಲ್ಪನೆ ಇದರಲ್ಲಡಗಿದೆ. ಕೆಲವರು ಶ್ವೇತ ಪದವನ್ನು ಅನಾವಶ್ಯಕವಾಗಿ ಜೈನ ಪರಿಭಾಷೆಗೆ ಅನ್ವಯಿಸಿ ಗೊಂದಲ ಹಿಡಿಸಿದ್ದಾರೆ. ಪೀಠಿಕಾ ಪ್ರಕರಣದ ೯ನೆಯ ಸೂತ್ರದ ಅನಂತರ ಸಂಧಿ ಪ್ರಕರಣದ ೪೪ನೆಯ ಸೂತ್ರದಲ್ಲಿ ಸ್ಥಾನ ಕರಣಗಳ ವಿಚಾರವನ್ನು ಬಹಳ ಸ್ಥೂಲವಾಗಿ ಸೂಚಿಸಿದ್ದಾನೆ.

ತನುವಾದ್ಯಂ ನಾಲಗೆ ವಾ
ದನದಂಡಂ ಕರ್ತೃವಾತ್ಮನವನ ಮನೋವೃ
ತ್ತಿನಿಮಿತ್ತಮಾಗಿ ಶಬ್ದಂ
ಜನಿಯಿಸುಗುಂ ಧವಲವರ್ಣಮಕ್ಷರ ರೂಪಂ

ಶರೀರವೆಂಬ ವಾದ್ಯವನ್ನು ನಾಲಗೆಯೆಂಬ ದಂಡದಿಂದ ಬಡಿದರೆ, ಸ್ಪರ್ಶಿಸಿದರೆ ಶಬ್ದ ಜನಿಯಿಸುತ್ತದೆಂಬುದನ್ನು ಹೇಳುವ ಕಲ್ಪನೆ ಸುಂದರವಾಗಿದೆ, 'ಕರ್ತೃವಾತ್ಮನವನ ಮನೋವೃತ್ತಿ' 'ಧವಲವರ್ಣ' ಇವು ಈಗಾಗಲೆ ಹೇಳಿದ ಜೀವನಿಷ್ಟತೆ, ಹಾಗೂ ಶ್ವೇತವರ್ಣದ ವಿಚಾರವನ್ನೇ ಪುನರುಕ್ತಗೊಳಿಸಿವೆ. ನಾಲಗೆಯೇ ಧ್ವನಿಗಳನ್ನು ಹುಟ್ಟಿಸುವಲ್ಲಿ ಪ್ರಮುಖ ಕರಣವನ್ನುವುದನ್ನು ಇಲ್ಲಿ ಸೂಚಿಸಲಾಗಿದೆ.

ಸಂಧಿ ಪ್ರಕರಣದ ೪೦ನೆಯ ಸೂತ್ರದಲ್ಲಿ ಎಂಟು ಧ್ವನ್ಯಂಗಗಳನ್ನು ಹೆಸರಿಸಿದ್ದಾನೆ.

ಕೊರಲುಂ ಜಿಹ್ವಾಮೂಲಮು
ಉರಮುಂ ತಾಳುಗೆಯುಮೋಷ್ಠಮುಂ ನಾಸಿಕೆಯುಂ
ಶಿರಮುಂ ದಂತಮುಮೆಂದ
ಕ್ಕರಮುದಯಿಪ ತಾಣಮಾದುವೀ ಪೇಳ್ದೆಂಟುಂ

ಕಂಠ, ಜಿಹ್ವಾ ಮೂಲ, ಉರ, ತಾಲು. ಓಷ್ಠಗಳು, ನಾಸಿಕ, ಶಿರ, ದಂತ ಎಂದು ಹೇಳುವಲ್ಲಿ ಒಂದು ವ್ಯವಸ್ಥೆ ಅಷ್ಟಾಗಿ ತೋರುವುದಿಲ್ಲ. ಪ್ರಾಯಶಃ ಕೇಶಿರಾಜನು ಹಿಂದಿನ ವೈಯಾಕರಣರು ಹೇಳಿದುದನ್ನೆ ಹೇಳಿರುವಂತಿದೆ. ಈ ಎಂಟು ಅಂಗಗಳಲ್ಲಿ ಉರ (ಎದೆ) ಹಾಗೂ ಶಿರ (ತಲೆ) ಇವು ಅಪ್ರತ್ಯಕ್ಷವಾಗಿ ಧ್ವನಿಯ ಹುಟ್ಟಿಗೆ ಕಾರಣೀಭೂತವಾಗುವವಾದರೂ ನೇರವಾಗಿ ಇವು ಧ್ವನ್ಯಂಗಗಳಲ್ಲಿ ಸೇರುವುದಿಲ್ಲ. ಕಂಠ, ತಾಲು, ನಾಸಿಕ, ದಂತ ಇವು ಸ್ಥಾನಗಳಾಗುತ್ತವೆ. ಜಿಹ್ವಾಮೂಲ, ಓಷ್ಠಗಳು ಕರಣಗಳಾಗುತ್ತವೆ, ಆದರೆ ಈ ಬಗೆಯ ಸ್ಥಾನ-ಕರಣ ವಿವರಣೆಯ ಪ್ರಸ್ತಾಪವಿಲ್ಲಿಲ್ಲ.

ಕೇಶಿರಾಜನು ಕೆಲವು ಧ್ವನಿಗಳ ವರ್ಣನೆಯನ್ನು ಕೆಲವು ಸೂತ್ರ ಹಾಗೂ ವೃತ್ತಿಗಳಲ್ಲಿ ನೀಡಿದ್ದಾನೆ.

ಅತಿ ಪೀಡನದಿಂ ರೇಫಾ
ಶ್ರಿತಮಾದ ಱಕಾರಮುಂ ಸಮಂತು ಡಕಾರಾ
ಶ್ರಿತವಾದ ೞನುಮಂಗೀ
ಕೃತಪದಲತ್ವಕ್ಕೆ ಸಮನೆ ಸಲ್ಲದ ಕುಳನು (೨೮)

ಈ ಸೂತ್ರದ ವೃತ್ತಿ—ರೇಫೆ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ ಱಕಾರಂ ಪುಟ್ಟುಗುಂ: ಡಕಾರಂ ಪುಟ್ಟುವ ತ್ರಾಣಮಂ ಬೆಟ್ಟಿತ್ತಾಗುಚ್ಚರಿಸೆ ೞವೆಸರ ೞಕಾರಂ ಪುಟ್ಟುಗುಂ:ಲಕಾರಂ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ ಕುಳವೆಸರ ಳಕಾರಂ ಪುಟ್ಟುಗುಂ; ರೇಫೆ ಮೂರ್ಧನ್ಯಂ,ಱಕಾರಮದಱೊಳೇಕಸ್ಥಾನಿ; ಡಕಾರ ಮೂರ್ಧನ್ಯಂ ೞನದಱೊಳೇಕಸ್ಥಾನಿ; ಲಕಾರಂ ದಂತ್ಯಂ, ಕುಳನದಱೊಳೇಕಸ್ಥಾನಿ; ಅದು ಕಾರಣದಿನಿವು ವರ್ಣಾವೃತ್ತಿಗೆ ಸಲ್ವುವು ಸಂದುಂ ಪ್ರಾಸಯಮಕ ಲಕ್ಷಣಕ್ಕಾಗವು.

ಇಲ್ಲಿ ವಿವಾದಾಸ್ಪದಕ್ಕೆಡೆಯಾಗಿರುವ ಱೞ, ಕುಳಗಳನ್ನು ಅತ್ಯಂತ ಸ್ಪಷ್ಟವಾಗಿ ಅವು ಹುಟ್ಟುವ ಸ್ಥಾನ, ಅವುಗಳ ವಿವರಣೆಗಳನ್ನು ನೀಡಿರುವುದನ್ನು ಗಮನಿಸಿದರೆ ಕೇಶಿರಾಜನಿಗೆ ಧ್ವನಿಶಾಸ್ತ್ರದ ಪರಿಚಯ ಎಷ್ಟು ಸ್ಪಷ್ಟವಾಗಿತ್ತೆಂಬುದರ ಕಲ್ಪನೆಯಾಗುತ್ತದೆ. ಱೞ ಧ್ವನಿಮಾ ಇಂದು ಬಳಕೆಯಲ್ಲಿ ಇಲ್ಲ. ಕೇಶಿರಾಜನ

ಕಾಲಕ್ಕಾಗಲೆ ಅದು ತನ್ನ ಅಸ್ತಿತ್ವವನ್ನು ಕಳೆದುಕೊಳ್ಳತೊಡಗಿತ್ತು. ಅಂತೆಯೇ ಅದನ್ನು ಪ್ರತಿಷ್ಠಾಪಿಸಲು ಕೇಶಿರಾಜನು ಹೆಣಗಿದ. ಅದು ಅವನ ವ್ಯರ್ಥ ಪ್ರಯತ್ನವಾದರೂ ಇದರಿಂದ ಅವನ ಧ್ವನಿಶಾಸ್ತ್ರದ ಪಾಂಡಿತ್ಯದ ಅರಿವು ನಮಗಾಗುವಂತಾದುದಕ್ಕೆ ಒಳಿತೇ ಆಯಿತೆನ್ನಬೇಕು.

"ಅನುನಾಸಿಕಮುಂ ಯವಲಮನನುನಾಸಿಕಮುಂ ದಲೆಂಬರ್"

ಇಲ್ಲಿ ಯ, ವ, ಲ ಗಳು ಅನುನಾಸಿಕಗಳೂ, ನಿರನುನಾಸಿಕಗಳೂ ಎಂದು ಹೇಳುವಲ್ಲಿ ನಾಸಿಕ್ಯ ಧ್ವನಿಯ ಬಗೆಗೆ ಕೇಶಿರಾಜನಿಗೆ ಸ್ಪಷ್ಟ ತಿಳಿವಳಿಕೆ ಇರುವುದು ಕಾಣುತ್ತದೆ. ೩೪ನೆಯ ಸೂತ್ರದಲ್ಲಿ ಒತ್ತಕ್ಷರದ ಜಾಗಕ್ಕೆ ಪ್ರತಿಯಾಗಿ ರೇಫೆಯಿಂದ ಕೂಡಿದ ಒತ್ತಕ್ಷರವನ್ನು ಪ್ರಾಸದಲ್ಲಿ ಹಿರಿಯರು ಬಳಸುತ್ತಾರೆ. ಆದರೆ ಆ ಒತ್ತಕ್ಷರದ ರೇಫೆಯನ್ನು ಜಾಗವಾಗಿ ಉಚ್ಚರಿಸಬಾರದು ಎಂದು ಹೇಳುತ್ತಾನೆ. ೩೮ನೆಯ ಸೂತ್ರದಲ್ಲಿ ಬೆರಲ್. ಒರಲ್. ಸರಲ್, ಪರಲ್, ನರಲ್ ಮುಂತಾದ ಶಬ್ದಗಳಲ್ಲಿರುವ ಲ್ ಕಾರವನ್ನು ಗ್ರಾಮ್ಯರು ಅರಿಯದೆ ಳ್ ಕಾರವನ್ನಾಗಿ ಉಚ್ಚರಿಸುತ್ತಾರೆ. ಅದು ಸರಿಯಲ್ಲವೆನ್ನುತ್ತಾನೆ. ಇಲ್ಲಿ 'ಲ್' (ಪಾರ್ಶ್ವಿಕ) 'ಳ್' (ಮೂರ್ಧನ್ಯ) ವ್ಯಂಜನಧ್ವನಿಗಳ ಬಗೆಗೆ ಕೇಶಿರಾಜನಿಗೆ ಸ್ಪಷ್ಟ ಕಲ್ಪನೆ ಇದೆ.

ಹೀಗೆ ಶಬ್ದಮಣಿದರ್ಪಣದಲ್ಲಿ ಅಲ್ಲಲ್ಲಿ ಹರಡಿಹೋಗಿರುವ ಧ್ವನಿಶಾಸ್ತ್ರಕ್ಕೆ ಸಂಬಂಧಿಸಿದ ಸೂತ್ರ–ವೃತ್ತಿ ಉದಾಹರಣೆಗಳನ್ನು ಪರಿಶೀಲಿಸಿದರೆ ಕೇಶಿರಾಜನಿಗೆ ಧ್ವನಿಶಾಸ್ತ್ರದ ಕಲ್ಪನೆ ಇತ್ತೆಂದೂ ಪರಂಪರಾಗತ ವ್ಯಾಕರಣಪದ್ಧತಿಗನುಗುಣವಾಗಿ ಅವನು ಕನ್ನಡ ವ್ಯಾಕರಣವನ್ನು ರಚಿಸಿದ್ದರಿಂದ ಧ್ವನಿಶಾಸ್ತ್ರಕ್ಕೆ ಅಷ್ಟು ಮಹತ್ವಕೊಡದೆ ತನಗೆ ಎಲ್ಲಿ ಹೇಳಬೇಕೆನಿಸುತ್ತದೆಯೋ ಅಲ್ಲಲ್ಲಿ ಆ ವಿಚಾರಗಳನ್ನು ತನಗೆ ತಿಳಿದಂತೆ ವಿವೇಚಿಸಿದ್ದಾನೆ. ಈ ಬಗೆಯ ದೃಷ್ಟಿಕೋನ ಮೆಚ್ಚುವಂತಹುದೇ.

## 12.2. ಧ್ವನಿಮಾಶಾಸ್ತ್ರ :

12.2.0 ಮನುಷ್ಯನು ಹಲವಾರು ಬಗೆಯ ಧ್ವನಿಗಳನ್ನು ಮೌಖಿಕವಾಗಿ ಹೊರಡಿಸಬಲ್ಲನೆಂದೂ ಅವುಗಳನ್ನು ಧ್ವನಿಶಾಸ್ತ್ರ ಹೆಚ್ಚಿನ ಮಟ್ಟಿಗೆ ಖಚಿತವಾಗಿ ವಿವರಿಸುತ್ತದೆಂಬುದನ್ನೂ ಗಮನಿಸಿದೆವು. ಮನುಷ್ಯನು ಅಸಂಖ್ಯಾತ ಧ್ವನಿಗಳನ್ನು ಸ್ಥಾನಕರಣ ಪ್ರಯತ್ನಗಳ ಮೂಲಕವಾಗಿ ಹೊರಡಿಸಲು ಶಕ್ತನಾಗಿರುವನಾದರೂ

ಒಂದು ನಿರ್ದಿಷ್ಟ ಭಾಷೆ ಆ ಎಲ್ಲಾ ಧ್ವನಿಗಳನ್ನು ಭಾಷೆಯಲ್ಲಿ ಬಳಸಿಯೇ ತೀರ ಬೇಕೆಂಬ ನಿಯಮವಿಲ್ಲ. ತಾನು ಹೊರಡಿಸುವ ಧ್ವನಿಗಳಲ್ಲಿ ಕೆಲವು ತನಗೆ ಮಹತ್ವದವು ಎನಿಸಿದವುಗಳನ್ನು ಮಾತ್ರ ಆಯ್ದುಕೊಂಡು ವ್ಯವಸ್ಥಿತವಾಗಿ ಅವು ಬಳಕೆಯಾಗುವಂತೆ ಮನುಷ್ಯನು ತನ್ನ ಭಾಷೆಯಲ್ಲಿ ಅಳವಡಿಸಿಕೊಳ್ಳುತ್ತಾನೆ. ಈ ರೀತಿ ಬಳಸಿಕೊಳ್ಳಲಾಗುವ ಮೂಲ ಧ್ವನಿಘಟಕಗಳು ಪ್ರತಿಯೊಂದು ಉಚ್ಚಾರಣೆಯಲ್ಲಿಯೂ ತಮ್ಮ ಭೌತಗುಣಧರ್ಮವನ್ನು ಹೆಚ್ಚು ಕಡಿಮೆ ಹಾಗೆಯೇ ಬಹುಕಾಲದವರೆಗೂ ಉಳಿಸಿಕೊಂಡು ಬರುತ್ತವೆ. ಕೆಲವು ಸಲ ವಿಶಿಷ್ಟ ಕಾರಣಗಳಿಂದಾಗಿ ಅವು ಜನರ ನುಡಿಯಿಂದ ಲೋಪವಾಗಲೂ ಬಹುದು. ಅಥವಾ ಕೆಲವು ಹೊಸದಾಗಿ ಬಂದು ಸೇರ್ಪಡೆಯಾಗಬಹುದು. ಹೀಗೆ ಭಾಷೆ ಯಲ್ಲಿ ರೂಢಿಗತವಾಗುವ ಮಹತ್ವದ ಮೂಲ ಧ್ವನಿಘಟಕಗಳಿಗೆ ನಿರ್ದಿಷ್ಟವಾದ ಸಗೋಚರ (ಕಣ್ಣಿಗೆ ಕಾಣುವ) ರೂಪವನ್ನು ನೀಡಿ ಲಿಪಿಯಲ್ಲಿ ಹಿಡಿದಿಡುತ್ತಾರೆ. ಆದರೆ ಭಾಷೆಯಲ್ಲಿರುವ ಧ್ವನಿಘಟಕಗಳನ್ನು ಲಿಪಿಯಲ್ಲಿ ಹಿಡಿದಿಡಲೇಬೇಕೆಂಬ ನಿಯಮವಿಲ್ಲ. ಲಿಪಿ ಇಲ್ಲದೆಯೂ ಭಾಷೆ ಮುಂದುವರಿಯಬಹುದು.

ಮನುಷ್ಯನು ಭಾಷೆಯಲ್ಲಿ ಬಳಸುವ ಪ್ರತಿಯೊಂದು ಧ್ವನಿಘಟಕಕ್ಕೂ ಲಿಪಿ ಸಂಕೇತ ನೀಡುವುದು, ಪ್ರತಿಯೊಂದು ಧ್ವನಿಘಟಕದ ತೀರ ಸೂಕ್ಷ್ಮ ವಿವರ ಗಳನ್ನೂ ಪರಿಶೀಲಿಸುವುದು, ಭಾಷೆಯ ಅಧ್ಯಯನಕ್ಕೆ ಖಚಿತತೆಯನ್ನು ತಂದು ಕೊಡಬಹುದಾದರೂ ಇದು ಅತ್ಯಂತ ಶ್ರಮಸಾಧ್ಯವಾದ ಕಾರ್ಯವೇ. ಆದ್ದರಿಂದ ಅಸಂಖ್ಯಾತ ಧ್ವನಿಗಳನ್ನು ಭಾಷೆ ಬಳಸಿಕೊಂಡ ರೀತಿಯಲ್ಲಿ ಸ್ವೀಕರಿಸಿ ಅವುಗಳನ್ನು ಕ್ರಿಯಾತ್ಮಕ ಘಟಕಗಳಲ್ಲಿ ವಿಂಗಡಿಸಿ ಸುಲಭವಾಗಿ ವ್ಯವಸ್ಥಿತವಾಗಿ ಅಭ್ಯಸಿಸಲು ಅನುಕೂಲವಾಗುವಂತೆ ಕಾಲ್ಪನಿಕವೆನಿಸಿದರೂ ನಿಜ ಘಟಕಗಳಿಗೆ ಸಮೀಪ ಎನಿಸುವ ಅಪರಿಮಿತ ಧ್ವನಿಸಂಕೇತಗಳನ್ನು ಪರಿಮಿತಕ್ಕೆ ತರುವ, ವಿವರಿಸುವ ಒಂದು ಮಹತ್ವದ ಭಾಗವೇ ಧ್ವನಿಮಾಶಾಸ್ತ್ರವೆನಿಸುತ್ತದೆ. ಧ್ವನಿಶಾಸ್ತ್ರವು ಮನುಷ್ಯನು ಹೊರಡಿಸಬಹುದಾದ ಎಲ್ಲ ಧ್ವನಿಗಳ ಬಗೆಗೂ ವಿವರಣೆ ನೀಡುತ್ತದೆ. ಅದು ಧ್ವನಿಗಳ ಉತ್ಪಾದನೆ, ಅವುಗಳ ಸ್ವರೂಪ, ರಚನೆ ಮುಂತಾದವುಗಳ ಬಗೆಗೆ ಜ್ಞಾನವನ್ನುಂಟುಮಾಡಿಕೊಟ್ಟರೆ ಧ್ವನಿಮಾಶಾಸ್ತ್ರವು ನಿರ್ದಿಷ್ಟವಾಗಿ ಒಂದು ಭಾಷೆಯ ಅಥವಾ ಅನೇಕ ಭಾಷೆಯಲ್ಲಿರುವ ಮಹತ್ವದ ಧ್ವನಿಘಟಕಗಳನ್ನು

ಶೋಧಿಸಿ ಕ್ರಮಬದ್ಧವಾಗಿ ವಿವರಿಸಿ ವರ್ಣಮಾಲೆಗೆ ಅನ್ವಯಿಸಿ, ಅಳವಡಿಸಿ ಬರಹಕ್ಕಿಳಿಸುವಲ್ಲಿ ಸಹಾಯಕಾರಿಯಾಗುತ್ತದೆ, ಇದನ್ನು ಇನ್ನೂ ಸ್ಪಷ್ಟಪಡಿಸ ಬೇಕಾದರೆ ಕನ್ನಡದ ಡಬ್ಬಿ, ಕಡಿ ಇವುಗಳಲ್ಲಿರುವ 'ಡ್' ಧ್ವನಿ [d] ಹಾಗೂ [r] ಎಂದು ಬೇರೆ ಬೇರೆಬೇರೆಯಾಗಿ ಧ್ವನಿಶಾಸ್ತ್ರದಲ್ಲಿ ವಿವರಿಸಲ್ಪಡುತ್ತವೆ. ಧ್ವನಿಮಾಶಾಸ್ತ್ರ ಇವೆರಡನೂ / d / ಒಂದರಲ್ಲೇ ಪರಿಗಣಿಸುತ್ತದೆ. ಹೀಗೆ ಹಲವು ಸಮೀಪದ ಧ್ವನಿಗಳನ್ನೆಲ್ಲ ಒಂದೊಂದು ಗುಂಪು ಮಾಡಿ ಅವುಗಳ ಪ್ರತಿ ನಿಧಿಗಳನ್ನು ಮಾತ್ರ ಧ್ವನಿಮಾ ವಿಭಾಗದಲ್ಲಿ ಅಭ್ಯಸಿಸಲಾಗುತ್ತದೆ. ಅಪರಿಮಿತ ಧ್ವನಿಗಳನ್ನು ಈ ರೀತಿ ಗುರುತಿಸಿ ವರ್ಗೀಕರಿಸಿ ಅವುಗಳಿಗೆ ಧ್ವನಿಮಾ ಸ್ವರೂಪ ವನ್ನು ನೀಡಲಾಗುತ್ತದೆ. ಕಲ್ಪಿಸಲಾಗಿರುವ ಧ್ವನಿಮಾಗಳು ಭಾಷೆಯನ್ನು ವಿವರಿಸಲು ಸುಲಭವಾಗಿ ದಾರಿ ಮಾಡಿಕೊಡುತ್ತವೆ.

12.2.1 ಧ್ವನಿಯನ್ನು ಮಾಪನಮಾಡುವಂಥದೇ ಧ್ವನಿಮಾ ಎಂದು ಬಹು ಸ್ಥೂಲವಾಗಿ ಹೇಳಬಹುದು. ಧ್ವನಿಮಾ ಎಂದರೆ ಅರ್ಥವನ್ನು ಹೊಂದಿರದ ಅತಿ ಸಣ್ಣ ಧ್ವನಿಘಟಕ. 'ನಡಿ' ಎಂಬ ಉಚ್ಚಾರದಲ್ಲಿ ನ್+ಅ+ಡ್+ಇ ಎಂಬ ನಾಲ್ಕು ಧ್ವನಿಘಟಕಗಳು ಒಂದರನಂತರ ಒಂದು ಕ್ರಮವಾಗಿ ಉಚ್ಚರಿಸಲ್ಪಡುತ್ತವೆ. ಈ ನಾಲ್ಕೂ ಧ್ವನಿಘಟಕಗಳನ್ನು ಇನ್ನೂ ಮುಂದೆ ವಿಭಾಗಿಸಲು ಬರುವುದಿಲ್ಲ. ಅಂತೆಯೇ ಅವು ಅತಿ ಸಣ್ಣ ಘಟಕಗಳು ಎನಿಸುತ್ತವೆ. ಸ್ತ್ರೀ ಎಂಬ ಉಚ್ಚಾರದಲ್ಲಿ ಸ್+ತ್+ರ್+ಈ ಎಂಬ ನಾಲ್ಕು ಅತಿಸಣ್ಣ ಧ್ವನಿಘಟಕಗಳಿವೆ. ಹೀಗೆ ಶಬ್ದೋ ಚ್ಚಾರದಲ್ಲೂ ಒಂದು ಅಥವಾ ಅದಕ್ಕಿಂತ ಹೆಚ್ಚು ಧ್ವನಿಘಟಕಗಳು ಇರಬಹುದು. ಆದರೆ ಉಚ್ಚಾರದಲ್ಲಿದ್ದ ಎಲ್ಲ ಅತಿ ಸಣ್ಣ ಧ್ವನಿಘಟಕಗಳನ್ನೂ ಧ್ವನಿಮಾ ಎಂದು ಹೇಳಲಾಗುವುದಿಲ್ಲ. ಧ್ವನಿಮಾ ಕೇವಲ ಧ್ವನಿಯಲ್ಲ, ಅದು ಧ್ವನಿಸಾಮ್ಯತೆ ಹೊಂದಿ ರುವ ಒಂದೇ ಬಗೆಯ ಧ್ವನಿಗಳ ವರ್ಗ ಪ್ರತಿನಿಧಿಯಾಗಿರುತ್ತದೆ. ಧ್ವನ್ಯಾತ್ಮಕ ವಾಗಿ ಪರಸ್ಪರ ಹೋಲುವ ಧ್ವನಿಗಳ ಪ್ರತಿನಿಧಿಯಾಗಿ ನಿಲ್ಲುವ ವಿರೋಧ ಪ್ರಸಾರದಲ್ಲಿರುವ ಅರ್ಥರಹಿತ ಅತಿ ಸಣ್ಣ ಉಚ್ಚಾರದ ವಿಶಿಷ್ಟ ಧ್ವನಿ ಘಟಕವೇ_ ಧ್ವನಿಮಾ. ಕನ್ನಡದಲ್ಲಿ ಕಿಸೆ, ಕುಳ್ಳು, ಕಲ್ಲು ಈ ಶಬ್ದಗಳಲ್ಲಿರುವ [ಕ್] ಧ್ವನಿಯು ಒಂದೇ ಬಗೆಯಲ್ಲಿ ಉಚ್ಚರಿತವಾಗುವುದಿಲ್ಲವೆಂಬುದನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗಲೆ ತಿಳಿದುಬರುತ್ತದೆ. ಆದರೂ ಅರ್ಥ ಬದಲಾವಣೆ ಇತ್ಯಾದಿ

ಯಾವ ವೈಶಿಷ್ಟ್ಯವನ್ನೂ ಈ ಧ್ವನಿಭೇದವು ಉಂಟುಮಾಡುವುದಿಲ್ಲವಾದ್ದರಿಂದ ಅದು ಅಷ್ಟು ಮಹತ್ವದ್ದಲ್ಲ. ಭಾಷಿಕವಾಗಿ ಮಹತ್ವದವಲ್ಲದ ಇಂತಹ ಹಲವು ಬಗೆಯ [ಕ್] ಗಳ ಪ್ರತಿನಿಧಿಯಾಗಿ /ಕ್/ ನಿಲ್ಲುತ್ತದೆ. (ಧ್ವನಿಯನ್ನು ಸೂಚಿಸಲು [ ] ಕಂಸನ್ನೂ ಧ್ವನಿಮಾವನ್ನು ಸೂಚಿಸಲು / / ಚಿಹ್ನೆಯನ್ನೂ ಬಳಸಲಾಗುತ್ತದೆ.) ಧ್ವನಿಮಾವನ್ನು A phoneme is a class of sounds in a given Language which are related in character and are used in such a way that no one member ever occurs in a word in the same phonetic context as any other member (ಡೇನಿಯಲ್ ಜೋನ್ಸ)ಎಂದು ವ್ಯಾಖ್ಯೆಯ ರೂಪದಲ್ಲಿ ಇದನ್ನು ಹೇಳಬಹುದು.

12.2.2 ಧ್ವನಿಘಟಕಗಳು ಒಂದೇ ಪರಿಸರದಲ್ಲಿ ಬರಬಹುದು. ಇಲ್ಲವೆ ಪರಸ್ಪರ ವ್ಯಾವರ್ತಕ ಪರಿಸರದಲ್ಲಿ ಬರಬಹುದು. ಹೀಗೆ ಬಳಕೆಗೊಳ್ಳುವ ಘಟಕಗಳು ಅರ್ಥಭೇದವನ್ನುಂಟು ಮಾಡಬಹುದು. ಅಥವಾ ಮಾಡದೇ ಇರಲೂ ಬಹುದು, ಅರ್ಥಭೇದ ಸಾಮರ್ಥ್ಯದ ಮೇಲೆ ಎರಡು ಬಗೆಯ ಪ್ರಸಾರಗಳನ್ನು ಗುರುತಿಸಬಹುದಾಗಿದೆ.

೧. ವಿರೋಧ ಪ್ರಸಾರ ೨. ವೈಕಲ್ಪಿಕ ಪ್ರಸಾರ

ವಿರೋಧ ಪ್ರಸಾರದಲ್ಲಿರುವ ಧ್ವನಿಘಟಕಗಳೆಂದರೆ ಒಂದೇ ಪರಿಸರದಲ್ಲಿದ್ದು ಅರ್ಥಭಿನ್ನತೆಯನ್ನುಂಟುಮಾಡುವ ಘಟಕಗಳು.

ಉದಾ , ಕ್+ಎ+ರ್+ಎ > ಕೆರೆ; ಗ್+ಎ+ರ್+ಎ > ಗೆರೆ

ಇಲ್ಲಿ /ಕ್/ ಹಾಗೂ /ಗ್/ ಧ್ವನಿಘಟಕಗಳು ಒಂದೇ ಪರಿಸರದಲ್ಲಿದ್ದು ಕೇವಲ ಈ ಎರಡರ ಕಾರಣವಾಗಿಯೆ ಬೇರೆ ಬೇರೆ ಅರ್ಥವುಳ್ಳ ಎರಡು ಶಬ್ದಗಳು ನಿರ್ಮಾಣವಾಗಿವೆ. ಅವು ವಿರೋಧ ಪ್ರಸಾರದಲ್ಲಿವೆ. ಅಂತೆಯೇ ಅವುಗಳನ್ನು ಸ್ವತಂತ್ರ ಧ್ವನಿಮಾ ಎಂದು ಪರಿಗಣಿಸಬಹುದಾಗಿದೆ. ಒಂದೇ ಪರಿಸರವನ್ನು ಉಳ್ಳ ಉಚ್ಚಾರಣೆಯ ಘಟಕಗಳ ಎರಡು ಪದಗಳ ಗುಂಪನ್ನು ಅಥವಾ ಯುಗ್ಮವನ್ನು ಕನಿಷ್ಠತಮಯುಗ್ಮ (***Minimal pair***) ಎನ್ನುತ್ತಾರೆ. ಧ್ವನಿಮಾಗಳನ್ನು ನಿರ್ಧರಿಸಲು ಬಲು ಸುಲಭವೂ ಖಚಿತವೂ ಆದ ಕನಿಷ್ಠಯುಗ್ಮಗಳನ್ನು ಗುರುತಿಸುವುದು ಭಾಷಾವಿಜ್ಞಾನದಲ್ಲಿ ಬಹುಮುಖ್ಯ ಅಂಶವಾಗಿದೆ. ಕನಿಷ್ಠ

ತಮಯುಗ್ಮಗಳಲ್ಲಿ ತೀರ ಸಮೀಪವಿರುವ ಬೇರೆ ಬೇರೆ ಧ್ವನಿಘಟಕಗಳನ್ನು ಮಾತ್ರ ವಿವಕ್ಷೆಗೆ ಎತ್ತಿಕೊಳ್ಳಲಾಗುತ್ತದೆ. ಮೇಲಿನ ಉದಾಹರಣೆಯಲ್ಲಿ /ಕ್/ /ಗ್/ ಗಳನ್ನು ಆಯ್ದುಕೊಂಡಿದ್ದು ಇದೇ ಉದ್ದೇಶದಿಂದಲೇ. ಘೋಷತ್ವದ ಅಂಶವನ್ನು ಬಿಟ್ಟರೆ ಇವು ಒಂದೇ ಸ್ಥಾನ ಕರಣದಲ್ಲಿ ಹುಟ್ಟುತ್ತವೆ. ಕುಡಿ-ಪುಡಿ ಎಂಬ ಯುಗ್ಮವನ್ನು ಏಕೆ ಆಯ್ದುಕೊಳ್ಳಬಾರದು ? ಎಂದು ಕೇಳಿದರೆ [ಕ್], [ಪ್] ಗಳಲ್ಲಿ ಧ್ವನಿಸಾಮ್ಯತೆ ಇಲ್ಲವೆಂದೇ ಉತ್ತರಿಸಬೇಕಾಗುತ್ತದೆ. /ಪ್/ ಧ್ವನಿಮಾ ನಿರ್ಧರಿಸಬೇಕಾದರೆ ಅದಕ್ಕೆ ಸಮೀಪದ /ಬ್/ ವನ್ನು ಕನಿಷ್ಠತಮ ಯುಗ್ಮದಲ್ಲಿ ಆಯ್ದುಕೊಳ್ಳುವುದು ಸೂಕ್ತವಾಗಿದೆ. ಕನಿಷ್ಠತಮ ವೈದೃಶ್ಯ (*contrast*) ಇರುವ ಉಚ್ಚಾರಣೆಗಳ ಯುಗ್ಮವೇ ಕನಿಷ್ಠತಮಯುಗ್ಮ. ಕನಿಷ್ಠತಮಯುಗ್ಮದಲ್ಲಿ ಬರುವ ವಿವಕ್ಷೆಯಲ್ಲಿರುವ ಘಟಕಗಳು ವಿರೋಧ ಪ್ರಸಾರದಲ್ಲಿರುತ್ತವೆ. ಕನಿಷ್ಠತಮಯುಗ್ಮ ಧ್ವನಿಮಾಗಳನ್ನು ನಿರ್ಧರಿಸುವ ಅತ್ಯಂತ ಖಚಿತವಾದ ಆಧಾರವಾಗಿದೆ.

12.2,3 ಒಮ್ಮೊಮ್ಮೆ ಕೆಲವು ಧ್ವನಿಮಾಗಳನ್ನು ನಿರ್ಧರಿಸಲು ಕನಿಷ್ಠತಮಯುಗ್ಮಗಳು ಸಿಗದೇ ಹೋಗಬಹುದು. ಆಗ ಕನಿಷ್ಠತಮಕ್ಕಿಂತ ಸ್ವಲ್ಪ ಹೆಚ್ಚು ವ್ಯತ್ಯಾಸವುಳ್ಳ ಯುಗ್ಮಗಳನ್ನು ಆಯ್ದುಕೊಳ್ಳಬೇಕಾಗುತ್ತದೆ. ಇವುಗಳಲ್ಲಿ ಸ್ವಲ್ಪ ಮಟ್ಟಿಗೆ ಸಂಧಿಗ್ಧತೆ ಕಾಣುವುದರಿಂದ ಇವುಗಳನ್ನು ಸಂದಿಗ್ಧ ಯುಗ್ಮ (***Suspicious pair***) ಎಂದೇ ಕರೆಯುತ್ತಾರೆ. ಕನಿಷ್ಠತಮ ಯುಗ್ಮಕ್ಕೆ ಸಮೀಪವಿರುವುದರಿಂದ ಸಾಮಿಪ್ಯಕನಿಷ್ಠತಮಯುಗ್ಮವೆಂದೂ ಇವುಗಳನ್ನು ಹೆಸರಿಸುತ್ತಾರೆ. ಇಂಥ ಯುಗ್ಮದಲ್ಲಿನ ಸಂದಿಗ್ಧತೆಯನ್ನು ನಿವಾರಣೆ ಮಾಡಿಕೊಂಡಾಗ ಮಾತ್ರ ಧ್ವನಿಮಾಗಳನ್ನು ಸ್ವತಂತ್ರ ಎಂದು ನಿರ್ಧರಿಸುವುದಕ್ಕಾಗುತ್ತದೆ.

12.2.4 ಒಂದೇ ಪರಿಸರದಲ್ಲಿ ಬಂದು ಅರ್ಥವನ್ನು ಬದಲಾಯಿಸಲಾರದ ಧ್ವನಿ ಘಟಕಗಳನ್ನು ವೈಕಲ್ಪಿಕ ಪ್ರಸಾರದಲ್ಲಿವೆಯೆಂದು ಅಥವಾ ಸ್ವಚ್ಛಂದ ಪರಿವರ್ತನೆಗೊಳ್ಳುತ್ತವೆಯೆಂದು ವಿವರಿಸಲಾಗುತ್ತದೆ. ಉದಾಹರಣೆಗೆ ಕನ್ನಡದಲ್ಲಿ ಚಳಿಹೊಡಿ, ಸಳಿಹೊಡಿ (ನೀರು ಸಿಂಪಡಿಸು) ಇವುಗಳಲ್ಲಿ /ಚ್/ /ಸ್/ ಘಟಕಗಳು ಸ್ವಚ್ಛಂದ ಪರಿವರ್ತನೆಗೊಳ್ಳುತ್ತವೆ. ಚೇಳು. ತೇಳು ಇವುಗಳಲ್ಲಿ /ಚ್/

/ತ್/ ಗಳು ಸ್ವಚ್ಛಂದ ಪರಿವರ್ತನೆಯಲ್ಲಿವೆ. ಪುಟ್ಟಿ. ಬುಟ್ಟಿ. ಇವುಗಳಲ್ಲಿ /ಪ್/, /ಬ್/.

12.2.1.5 ವಿರೋಧ ಪ್ರಸಾರದಲ್ಲಿ ಬರುವ ಅರ್ಥವಿಲ್ಲದ ಆದರೆ ಅರ್ಥಭೇದದ ಸಾಮರ್ಥ್ಯವುಳ್ಳ ಮಹತ್ವದ ಧ್ವನಿಘಟಕಗಳೇ ಧ್ವನಿಮಾಗಳು. ಒಂದೇ ಪರಿಸರದಲ್ಲಿ ಇಲ್ಲವೆ ಎರಡು ಭಿನ್ನತೆಗಳುಳ್ಳ ಪರಿಸರದಲ್ಲಿ ಅವು ಬರ ಬಹುದು. ಧ್ವನಿಮಾಗಳು ಆಡುನುಡಿಯ ಕನಿಷ್ಠ ಧ್ವನಿಘಟಕಗಳು. ಸ್ವತಃ ಧ್ವನಿಗಳು ಭಾಷೆಯಲ್ಲಿ ಬಳಕೆಗೊಳ್ಳುತ್ತವೆಯಾದರೂ ಅವುಗಳ ಪ್ರತಿನಿಧಿಗಳ ನ್ನಾಗಿ ಧ್ವನಿಮಾಗಳನ್ನು ರೂಪಿಸಲಾಗುತ್ತದೆ. ಆದ್ದರಿಂದ ಧ್ವನಿಮಾ ಎನ್ನುವು ದೊಂದು ಕಲ್ಪನೆ. ಭಾಷೆಯ ಅಧ್ಯಯನಕ್ಕಾಗಿ ರೂಪಿಸಿಕೊಳ್ಳಲಾಗುವ ಧ್ವನಿಮಾ ಗಳು ಉಚ್ಚಾರಣೆಯ ಅತಿ ಸಣ್ಣ ಮಹತ್ವದ ಘಟಕಗಳಾಗಿರುತ್ತವೆ. ಪ್ರತಿ ಯೊಂದು ಭಾಷೆಯಲ್ಲೂ ನಿರ್ದಿಷ್ಟ ಸಂಖ್ಯೆಯಲ್ಲಿ ಧ್ವನಿಮಾಗಳನ್ನು ಗುರುತಿಸ ಬಹುದು. ಧ್ವನಿಮಾ ಧ್ವನಿಯಲ್ಲವೆಂಬುದನ್ನು ನೆನಪಿನಲ್ಲಿಡಬೇಕು. ಒಂದು ಧ್ವನಿಮಾ ಅನೇಕ ಅವತಾರಗಳನ್ನೂ ಹೊಂದಿದ್ದರೆ ಅವು ವಿಶಿಷ್ಟ ಪರಿಸರದಲ್ಲಿ ಪೂರಕ ಪ್ರಸಾರದಲ್ಲಿ ಬರುತ್ತಿದ್ದು ಭಾಷಿಕವಾಗಿ ಮಹತ್ವದವಾಗಿದ್ದರೆ. ಅಂಥವು ಗಳನ್ನು ಉಪಧ್ವನಿಗಳೆಂದು ಪರಿಗಣಿಸಲಾಗುತ್ತದೆ.

ಧ್ವನಿಮಾಗಳನ್ನು ನಿರ್ಧರಿಸಲು ಆಧಾರವಾಗುವ ಕೆಲವು ಕನಿಷ್ಟತಮ ಯುಗ್ಮಗಳನ್ನಿಲ್ಲಿ ಕೊಡಲಾಗಿದೆ.

12.2.16 **ಕನಿಷ್ಟತಮಯುಗ್ಮಗಳು :**

ಶಿಷ್ಟಕನ್ನಡ ವ್ಯಂಜನ ಧ್ವನಿಮಾಗಳು :

/ಪ್/÷/ಬ್/ ಪೇಟೆ, ಬೇಟೆ; ತಪ್ಪು, ತಬ್ಬು.

/ಪ್/÷/ಫ್/ ಮಾಪು, ಮಾಫ್; ಪಲ, ಫಲ.

/ಬ್/÷/ಭ್/ ಬಾವಿ, ಭಾವಿ; ಬಾರಿ, ಭಾರಿ.

/ತ್/÷/ದ್/ ತಂಡ, ದಂಡ; ಸತ್ತು, ಸದ್ದು: ತಡಿ, ದಡಿ.

/ತ್/÷/ಥ್/ ತಡಿ, ಥಡಿ; ತರ, ಥರ; ತಟ್ಟು, ಥಟ್ಟು.

/ದ್/÷/ಧ್/ ದಣಿ, ಧಣಿ; ದನ, ಧನ.

/ಟ್/÷/ಡ್/ ತಟ, ತಡ; ದಟ್ಟ, ದಡ್ಡ; ಟೊಳ್ಳು, ಡೊಳ್ಳು.

/ಟ್/÷/ಠ್/ ಟೀಕು, ಠೀಕು; ಟಾರು, ಠಾರು.

/ಡ್/÷/ಢ್/ ಮೂಡ, ಮೂಢ,

/ಕ/÷/ಗ್/ ಕೆಲವು, ಗೆಲವು; ಅಕ್ಕ, ಅಗ್ಗ; ಕುಡಿ, ಗುಡಿ.

/ಕ್/÷/ಖ್/ ಕಾಟ, ಖಾಟ: ಕುರ, ಖುರ; ಕಣ, ಖಣ.

/ಗ್/÷/ಘ್/ ಗಟ್ಟಿ, ಘಟ್ಟಿ.

/ಚ್/÷/ಜ್/ ಅಂಚು, ಅಂಜು; ಚಾರ, ಜಾರ; ಚಿಗಿ, ಜಿಗಿ.

/ಚ್/÷/ಜ್/ ಚಾಣ, ಜಾಣ; ಚಾರ, ಜಾರ.

/ಜ್/÷/ಝ್/ ಜರಿ, ಝರಿ.

/ಲ್/÷/ಳ್/ ಕಲೆ, ಕಳೆ; ಎಲೆ, ಎಳೆ; ಹಾಲು, ಹಾಳು.

/ನ್/÷/ಣ್/ ಆನೆ, ಆಣೆ; ಅನ್ನ, ಅಣ್ಣ; ಮನೆ, ಮಣೆ.

/ಮ್/÷/ನ್/ ಮಾರು, ನಾರು; ಮನೆ, ನನೆ; ಆಮೆ, ಆನೆ.

/ವ್/÷/ಬ್/ ವರ, ಬರ; ವಯಸು, ಬಯಸು.

/ಸ್/÷/ಚ್/ ಸಲಿಸು, ಚಲಿಸು; ಸಲ್ಲು, ಚಲ್ಲು,

/ಡ್/÷/ಳ್/ ತಡೆ, ತಳೆ; ಅಡಕ, ಅಳಕ; ಕಡಿ, ಕಳಿ.

/ರ್/÷/ಡ್/ ತೀರು, ತೀಡು: ಬರಿಸು, ಬಡಿಸು.

/ಣ್/÷/ಳ್/ ಎಳೆ, ಎಣೆ; ಅಣಕ, ಅಳಕ.

/ಪ್/÷/ಫ್/ ಕಾಪಿ, ಕಾಫಿ; ಸೋಪ, ಸೋಫ; ಪಲ, ಫಲ.

/ಷ್/÷/ಸ್/ ಷರಾ, ಸರಾ.

/ಶ್/÷/ಸ್/ ಶುರು, ಸುರು; ಶರ, ಸರ: ಶಶಿ, ಸಸಿ.

/ಸ್/÷/ಸ್/ ಬಸಾರು, ಬಸರು

/ಸ್/+/ಹ್/ ಸಾಕು, ಹಾಕು; ಸರಿ, ಹರಿ: ಸಸಿ, ಸಹಿ.

/ಯ್/÷/ವ್/ ನೋವು, ನೋಯು; ಕಾವು, ಕಾಯು.

ಶಿಷ್ಟ ಕನ್ನಡ ಸ್ವರ ಧ್ವನಿಮಾಗಳು :—

/ಇ/÷/ಉ/ ಇಳಿ, ಉಳಿ; ಇಲಿ, ಉಲಿ; ಇಕ್ಕು, ಉಕ್ಕು;
ಇರಿ, ಇರು.

/ಇ/÷/ಎ/ ಇಳಿ, ಎಳಿ; ಇರುವು, ಎರವು: ಬಿಕ್ಕು, ಬೆಕ್ಕು; ಇಷ್ಟು, ಎಷ್ಟು.
/ಎ/÷/ಒ/ ಎಲೆ, ಒಲೆ; ಕಲೆ, ಕೊಲೆ; ಎಡೆ. ಒಡೆ
/ಉ/+/ಒ/ ಉಲಿ, ಒಲಿ: ಕುಡಿ, ಕೊಡಿ; ಉರಿ, ಒರಿ
/ಇ/÷/ಅ/ ಇರಿ. ಅರಿ; ತಿಳಿ, ತಳಿ; ಇಳಿ, ಅಳಿ
/ಉ/÷/ಅ/ ಉಗಿ. ಅಗಿ; ಉಚ್ಚ, ಅಚ್ಚ; ಉಡಿ, ಅಡಿ
/ಎ/÷/ಅ/ ಎಂತು, ಅಂತು; ಎಗ್ಗ ಅಗ್ಗ; ಎಂದು, ಅಂದು
/ಓ/÷/ಅ/ ಒಗೆ, ಅಗೆ; ಒತ್ತೆ. ಅತ್ತೆ; ಒಡ್ಡ ಅಡ್ಡ
/ಇ/÷/ಈ/ ಇಡು, ಈಡು; ಇಳೆ, ಈಳೆ, ಇಸು, ಈಸು
/ಎ/÷/ಏ/ ಎರಿ, ಏರಿ; ಕೆಡು. ಕೇಡು; ಬೆಳೆ ಬೇಳೆ
/ಉ/÷/ಊ/ ಉರು, ಊರು, ಉರಿ, ಊರಿ; ಮುಡಿ. ಮೂಡಿ
/ಒ/÷/ಓ/ ಒರೆ. ಓರೆ; ಕೊಡು, ಕೋಡು; ಒಲೆ. ಓಲೆ
/ಅ/÷/ಆ/ ಅಳು, ಆಳು; ಅರಿ, ಆರಿ; ತಳಿ, ತಾಳಿ

## 12.3 ಆಕೃತಿಮಾ ಶಾಸ್ತ್ರ :

12.3.0 ಅರ್ಥಪೂರ್ಣವಾದ ಶಬ್ದಗಳನ್ನು ನಿರ್ಮಿಸುವಲ್ಲಿ ವ್ಯವಸ್ಥಿತವಾಗಿ ಬಳಕೆಗೊಳ್ಳುವ ಆಕೃತಿಮಾಗಳ ಅಧ್ಯಯನವು, ಆಕೃತಿಮಾಶಾಸ್ತ್ರದಲ್ಲಿ ಒಳಗೊಳ್ಳುತ್ತದೆ. ಯಾವುದೇ ಮಹತ್ವಪೂರ್ಣ ಧ್ವನಿಘಟಕ ಅಥವಾ ಧ್ವನಿಘಟಕಗಳ ಸಮೂಹ, ಅರ್ಥವನ್ನು ನೀಡುತ್ತಿದ್ದರೆ ಅಂತಹ ಅರ್ಥಪೂರ್ಣ ಘಟಕಗಳನ್ನು ಅವುಗಳ ರೂಪ, ಅರ್ಥ, ಕ್ರಮ ಪ್ರಕಾರಗಳು ಇತ್ಯಾದಿಗನುಸಾರವಾಗಿ ಅವುಗಳ ಸುಸಂಬದ್ಧ ಅಭ್ಯಾಸಕ್ಕೆ ಅಳವಡಿಸಿಕೊಳ್ಳುವ ಶಾಸ್ತ್ರವೇ ಆಕೃತಿಮಾ ಶಾಸ್ತ್ರ ಎನಿಸುತ್ತದೆ. ನಾಮಪದಗಳು, ಕ್ರಿಯಾಪದಗಳು. ಲಿಂಗ. ವಚನ, ಪ್ರತ್ಯಯಗಳು. ಸಮಾಸ, ಸಂಧಿ ಇತ್ಯಾದಿ ಶಬ್ದಶಾಸ್ತ್ರದಲ್ಲಿ ಒಳಗೊಳ್ಳುವ ಎಲ್ಲವನ್ನೂ ಆಕೃತಿಮಾಶಾಸ್ತ್ರ ವಿಭಾಗವು ಒಳಗೊಂಡಿರುತ್ತದೆ. ಧ್ವನಿಶಾಸ್ತ್ರದಲ್ಲಿ ಭಾಷೆಯ ಕಚ್ಚಾ ಸಾಮಗ್ರಿಯ ಅಭ್ಯಾಸ ನಡೆದರೆ ಧ್ವನಿಮಾ ಶಾಸ್ತ್ರದಲ್ಲಿ ಅರ್ಥವಿಹೀನ ಮಹತ್ವದ ಮೂಲ ಘಟಕಗಳ ಅಭ್ಯಾಸ ಮುಂದುವರಿಯುತ್ತದೆ. ಅಂತಹ ಮೂಲ ಘಟಕಗಳು ಹೇಗೆ ಅರ್ಥವತ್ತಾದ ಮೂಲ ಘಟಕಗಳಾಗಿ

ಭಾಷೆಯ ರಚನೆಯಲ್ಲಿ ಹೆಣೆದುಗೊಳ್ಳುತ್ತವೆ. ವಾಕ್ಯಮಟ್ಟಕ್ಕೆ ಹೇಗೆ ಸೇತುವೆಯಾಗಿ ನಿಲ್ಲುತ್ತವೆಯೆನ್ನುವುದರ ಸವಿವರ ಅಧ್ಯಯನವನ್ನೇ ಆಕೃತಿಮಾಶಾಸ್ತ್ರವು ಒಳಗೊಂಡಿರುವದರಿಂದ ಭಾಷೆಯ ವ್ಯಾಕರಣದ ದೃಷ್ಟಿಯಿಂದ ಈ ವಿಭಾಗ ಅತ್ಯಂತ ಮಹತ್ವಪೂರ್ಣವಾದುದು. ಅಂತೆಯೇ ಶಬ್ದಶಾಸ್ತ್ರಕ್ಕೆ ಪ್ರಾಚೀನ ವೈಯಾಕರಣರು ಹೆಚ್ಚು ಗಮನವನ್ನಿತ್ತಿರುವುದು. ಪ್ರಾಚೀನ ಯಾವ ವ್ಯಾಕರಣವನ್ನಾಯ್ದುಕೊಂಡರೂ ಧ್ವನಿ-ಧ್ವನಿಮಾ ಅಥವಾ ವಾಕ್ಯಶಾಸ್ತ್ರಕ್ಕಿಂತ ಶಬ್ದಶಾಸ್ತ್ರಕ್ಕೆ ಮಹತ್ವ ನೀಡಿರುವುದನ್ನು ಮನಗಾಣಬಹುದು. ಆಕೃತಿಮಾಗಳು ಭಾಷೆಯಲ್ಲಿ ವ್ಯವಹರಿಸುವದನ್ನು ವ್ಯಾಕರಣದಲ್ಲಿ ಎರಡು ಬಗೆಯಾಗಿ ವಿಭಾಗೀಕರಿಸಿ ವರ್ಣಿಸುತ್ತಾರೆ. ಒಂದು ಆಕೃತಿಮಾಶಾಸ್ತ್ರ, ಇನ್ನೊಂದು ವಾಕ್ಯಶಾಸ್ತ್ರ. ಆಂತರಿಕವಾಗಿ ಬೆಳವಣಿಗೆ ಮಾಡಲು ಸಾಧ್ಯವಾಗದ ಸಾಂದ್ರ ಸಂಯೋಜಿತ ಆಕೃತಿಮಾಗಳನ್ನು ಆಕೃತಿಮಾಶಾಸ್ತ್ರದಲ್ಲೂ ಬೆಳವಣಿಗೆ ಹೊಂದಲು ಅವಕಾಶ ಇರುವ ಅಸಾಂದ್ರ ಸಂಯೋಜಿತ ಅಂದರೆ ವಾಕ್ಯಮಟ್ಟದಲ್ಲಿ ಬಳಕೆಗೊಳ್ಳುವ ಬಗೆಯನ್ನು ವಾಕ್ಯಶಾಸ್ತ್ರದಲ್ಲೂ ವಿವರಿಸಲಾಗುತ್ತದೆ.

### 12.3.1 ಆಕೃತಿಮಾ :

ಒಂದು ಅಥವಾ ಒಂದಕ್ಕಿಂತ ಹೆಚ್ಚು ಧ್ವನಿಮಾಗಳ ಸಮುದಾಯವು ಅರ್ಥವನ್ನೊಳಗೊಂಡಿದ್ದರೆ 'ಆಕೃತಿ' ಎನಿಸುವುದು. ಇಲ್ಲಿ ಸಮುದಾಯ ಅಂದರೆ ಒಂದು ಧ್ವನಿಮಾದ ಅನಂತರ ಮತ್ತೊಂದು ಧ್ವನಿಮಾ ವ್ಯವಸ್ಥಿತ ರೀತಿಯಲ್ಲಿ ಬರುವುದೆಂದರ್ಥ. ಆಡು ಎಂಬ ಆಕೃತಿಮಾದಲ್ಲಿ ಆಡ್‌ಉ ಎಂಬ ಮೂರು ಧ್ವನಿಮಾಗಳು ಇದೇ ಬಗೆಯಲ್ಲಿ ಬರಬೇಕು. ಡ್ ಉ ಆ ಎಂದಾಗಲಿ ಉ ಡ್ ಆ ಎಂದಾಗಲಿ ಡ್ ಆ ಉ ಎಂದಾಗಲಿ ಬರಕೂಡದು. ಅವಿಭಾಜ್ಯವಾದ ಹಾಗೂ ಅರ್ಥವನ್ನು ಒಳಗೊಂಡ ಧ್ವನಿಮಾಗಳ ಸಮುದಾಯವನ್ನು ಆಕೃತಿ ಎನ್ನಬಹುದು. ಅವಿಭಾಜ್ಯ ಎಂದರೆ ಮುಂದೆ ವಿಭಜಿಸಲಾಗದ ಎಂದರ್ಥ. ಉದಾಹರಣೆಗೆ ಮನೆಗಳಲ್ಲಿ ಎಂಬುದನ್ನು ಮನೆ+ಗಳು+ಅಲ್ಲಿ ಎಂಬುದಾಗಿ ಅರ್ಥಕ್ಕೆ ಬಾಧೆ ಬರದಂತೆ ವಿಭಜಿಸಬಹುದು. ಮನೆ ಇದನ್ನು ಮ+ನೆ ಎಂದು ವಿಭಜಿಸಲು ಬರುವದಿಲ್ಲ. ಆದ್ದರಿಂದ ಆಕೃತಿ ಎನ್ನುವುದು ಅತಿ ಕನಿಷ್ಟ ಅರ್ಥವತ್ತಾದ ಧ್ವನಿಸಮುದಾಯ. ಆಕೃತಿಗಳು ನೇರವಾಗಿ ಭಾಷೆಯಲ್ಲಿ ಬಳಕೆಗೊಳ್ಳು

ವಂತಹವು. ಅವುಗಳನ್ನು ಇಂಗ್ಲೀಷಿನಲ್ಲಿ *morphs* ಎಂದು ಕರೆಯುತ್ತಾರೆ. ಆಕೃತಿಗಳ ಮೂಲ ಘಟಕಗಳಿಗೆ ಆಕೃತಿಮಾ ಎನ್ನುತ್ತಾರೆ, ಒಂದು ಆಕೃತಿಮಾಕ್ಕೆ ಒಂದೇ ಆಕೃತಿಯು ಅವತಾರ ಇರಬಹುದು. ಇಲ್ಲವೆ ಬಹು ಆಕೃತಿಗಳ ಅವ ತಾರಗಳು ಇರಬಹುದು. ಆಕೃತಿ ಅಥವಾ ಆಕೃತಿಗಳು ಆಕೃತಿಮಾದ ಅವತಾರ ಗಳಾಗಿರುತ್ತವೆ. ಒಂದೇ ಆಕೃತಿಮಾದ ಅನೇಕ ಆಕೃತಿಗಳನ್ನು ಆಕೃತಿ ಪ್ರಭೇದ ಗಳು (**allomorphs**) ಎಂದು ಕರೆಯಬಹುದು. ಧ್ವನಿ–ಧ್ವನಿಮಾಕ್ಕಿ ದ್ದಂತಹ ಸಂಬಂಧವೇ ಆಕೃತಿ – ಆಕೃತಿಮಾಕ್ಕಿದೆ. ಆಕೃತಿ – ಆಕೃತಿಮಾ, ಆಕೃತಿ ಪ್ರಭೇದಗಳನ್ನು ಸ್ಪಷ್ಟಪಡಿಸಲು ಇಲ್ಲಿ ಒಂದು ಉದಾಹರಣೆಯನ್ನು ನೋಡೋಣ :—

*I* ಕಲ್ಲುಗಳು, ಹುಳಗಳು, ಸಭೆಗಳು, ವ್ಯಾಪಾರಿಗಳು (ಗಳು)

*II A* ತಂದೆಯವರು. ಮಾವನವರು, ಅತ್ತೆಯವರು (ಅವರು)

*II B* ಮಾವಂದಿರು, ತಂಗಿಯಂದಿರು, ತಾಯಂದಿರು (ಅಂದಿರು)

*III* ಸಣ್ಣವರು, ಜಾಣರು, ಹುಡುಗರು, ಕಾರಕೂನರು (ಅರು/ರು)

*IV* ಮಕ್ಕಳು (ಕಳು)

*V* ಆನೆ ಬಂದವು ($\phi$)

ಕನ್ನಡದಲ್ಲಿ ಬಹುವಚನ ಪ್ರತ್ಯಯ ಐದು ಬಗೆಯಾಗಿ ಪ್ರಯೋಗಿಸಲ್ಪ ಡುತ್ತವೆಂಬುದು ಈ ಉದಾಹರಣೆಗಳಿಂದ ತಿಳಿದು ಬರುತ್ತದೆ.

'ಗಳು' – ನಪುಂಸಕಲಿಂಗದ ಹಾಗೂ ಮಂತ್ರಿ, ವ್ಯಾಪಾರಿ, ಗುರು ಇಂಥ ಕೆಲವು ವಿಶಿಷ್ಟ ನಾಮಗಳಿಗೆ ಅನ್ವಯವಾಗುತ್ತದೆ.

'ಅವರು/ಅಂದಿರು' – ಸಂಬಂಧವಾಚಕ ನಾಮಗಳಿಗೆ ಅನ್ವಯವಾಗುತ್ತದೆ.

'ಅರು/ರು'- ವಿಶೇಷಣ ಹಾಗೂ ಇತರ ನಾಮಗಳಿಗೆ ಅನ್ವಯವಾಗುತ್ತದೆ.

'ಕಳು'–ಮಗು ಎಂಬ ನಾಮಕ್ಕೆ ಮಾತ್ರ ಅನ್ವಯವಾಗುತ್ತದೆ.

$\phi$ – ಪ್ರತ್ಯಯವಿಲ್ಲದೆಯೆ ಬಹುವಚನ ಬಳಕೆಗೊಳ್ಳುತ್ತದೆ.

ಗಳು, ಅವರು, ಅಂದಿರು, ಅರು, ರು, ಕಳು $\phi$ ಇವೆಲ್ಲ ಒಂದೇ ಬಹುವಚನ ಆಕೃತಿಮಾದ ಆಕೃತಿ ಪ್ರಭೇದಗಳಾಗಿವೆ. ಇವುಗಳನ್ನು ಹೀಗೆ ವಿವರಿಸಬಹುದು :

| | |
|---|---|
| { ಅರ್ } | ಗಳು<br>ಅವರು<br>ಅಂದಿರು<br>ಅರು / ರು<br>ಕಳು<br>$\phi$ |

ಆಕೃತಿಮಾ ಗುರುತಿಸುವಲ್ಲಿ ಅರ್ಥಕ್ಕೆ ಹಾಗೂ ರೂಪಕ್ಕೆ ಮಹತ್ವ ನೀಡ ಲಾಗುತ್ತದೆ. ಭಾಷೆಯ ರಚನೆಯಲ್ಲಿರುವ ಅರ್ಥವತ್ತಾದ ಅತಿ ಸಣ್ಣ ಉಚ್ಚಾರದ ಘಟಕವೇ 'ಆಕೃತಿಮಾ' ಎಂದು ಅದರ ವ್ಯಾಖ್ಯೆಯನ್ನು ಹೇಳಲಾಗುತ್ತದೆ. ಬ್ಲೂಮ್‌ಫೀಲ್ಡ್ ಎಂಬ ಭಾಷಾವಿಜ್ಞಾನಿ ಹೇಳಿರುವ ವ್ಯಾಖ್ಯೆ ಬಹು ಜನ ವಿದ್ವಾಂಸರಿಗೆ ಒಪ್ಪಿಗೆಯಾಗಿದೆ. "ಯಾವ ಭಾಷಾ ವೈಜ್ಞಾನಿಕ ರೂಪವು ಯಾವುದೇ ಬಗೆಯಲ್ಲಿ ಇನ್ನೊಂದು ರೂಪದೊಡನೆ ಭಾಗಶಃ ಕೂಡ ಧ್ವನ್ಯಾತ್ಮಕ ವಾಗಿಯಾಗಲಿ ಅರ್ಥಾತ್ಮಕವಾಗಿಯಾಗಲಿ ಹೋಲಿಕೆಯನ್ನು ಹೊಂದಿರುವ ದಿಲ್ಲವೋ ಆ ರೂಪವೇ ಆಕೃತಿಮಾ.೧

ಒಂದು ರೂಪ ಎಷ್ಟು ಅರ್ಥಗಳನ್ನು ಹೊಂದಿರುತ್ತದೆಯೋ ಅಷ್ಟು ಪ್ರತ್ಯೇಕ ಆಕೃತಿಮಾ ಎನಿಸುತ್ತವೆ. ಉದಾ : 'ಆಡು' ಎಂಬ ರೂಪವು ಎರಡು ಆಕೃತಿಮಾ ಹೊಂದಿದೆ. 'ಆಡು' ಒಂದು ಪ್ರಾಣಿ. ಆಡು–ಆಡುವ ಕ್ರಿಯೆ, ಹೀಗೆಯೇ 'ಎತ್ತು', 'ಹಂಚು' ಎರಡೆರಡು ಆಕೃತಿಮಾಗಳಾಗುತ್ತವೆ. 'ಹರಿ' ಮೂರು ಆಕೃತಿಮಾ ಆಗುತ್ತದೆ. ಒಂದೇ ಅರ್ಥ ಇದ್ದು ರೂಪದಲ್ಲಿ ಭಿನ್ನ ವಾಗಿದ್ದರೆ ಅದು ಎಷ್ಟು ರೂಪಗಳನ್ನು ಪಡೆದಿರುತ್ತದೆಯೋ ಅಷ್ಟು ಆಕೃತಿಮಾ ಗಳು. (ರೂಪ ಭಿನ್ನತೆಯ ಪ್ರಸಾರಕ್ಕೆ ಕಾರಣ ನೀಡಲು ಸಾಧ್ಯವಾಗದೆ ಹೋದಲ್ಲಿ ಮಾತ್ರ ಇದು ಸಾಧ್ಯ) ಉದಾ : ಪುಸ್ತಕ. ಗ್ರಂಥ ಇವು ಬೇರೆ ಬೇರೆ ಆಕೃತಿಮಾಗಳು, ಗಜ, ಹಸ್ತಿ ಇವು ಕೂಡ ಬೇರೆ ಬೇರೆ ಆಕೃತಿಮಾಗಳು.

---

೧. ("A linguistic form which bears no partial phonetic semantic resemblance to any other form is...a morpheme.")

ಒಂದೇ ಅರ್ಥ ಹೊಂದಿದ್ದು ರೂಪದಲ್ಲಿ ಭಿನ್ನವಾಗಿದ್ದು ಆ ರೂಪ ಭಿನ್ನತೆಯು ಪ್ರಸಾರಕ್ಕೆ ಕಾರಣ ನೀಡಲು ಸಾಧ್ಯವಾದರೆ ಅದು ಒಂದೇ ಆಕೃತಿಮಾ. ಉದಾಹರಣೆಗೆ ಕನ್ನಡದ ಬಹುವಚನ ಪ್ರತ್ಯಯ ರೂಪಗಳು ಬೇರೆ ಬೇರೆಯಾಗಿದ್ದರೂ ಅರ್ಥ ಮಾತ್ರ ಒಂದೇ. ಅವುಗಳ ಪ್ರಸಾರಕ್ಕೆ ಕಾರಣ ನೀಡಬಹುದು. ಆದ್ದರಿಂದ ಅವು ಒಂದೇ ಆಕೃತಿಮಾದಲ್ಲಿ ಒಳಗೊಳ್ಳುತ್ತವೆ.

ಅರ್ಥವು ಸಂಪೂರ್ಣ ಭಿನ್ನವಾಗಿರಬೇಕು. ಸ್ವಲ್ಪಾದರೂ ಅರ್ಥ ಸಂಬಂಧ ಕಾಣಿಸಿದರೆ ಅವು ಬೇರೆ ಆಕೃತಿಮಾ ಆಗಲಾರವು.

ಉದಾ : ಓದು (ನಾಮಪದ) ಓದು (ಕ್ರಿಯಾಪದ)
ಬೆಳೆ (ನಾಮಪದ) ಬೆಳೆ (ಕ್ರಿಯಾಪದ)

ಇವುಗಳಲ್ಲಿ ಅರ್ಥ ಸಾಮೀಪ್ಯವಿರುವುದರಿಂದ ಇವು ಒಂದೊಂದೇ ಆಕೃತಿಮಾಗಳೆನಿಸುತ್ತವೆ. ಒಟ್ಟಿನಲ್ಲಿ ಆಕೃತಿಮಾ ಸಂಖ್ಯೆಯನ್ನು ಹೀಗೆ ಗುರುತಿಸಬಹುದು—

೧. ಒಂದೇ ರೂಪ ಒಂದೇ ಅರ್ಥ>ಒಂದು ಆಕೃತಿಮಾ
೨. ಒಂದೇ ರೂಪ ಹೆಚ್ಚು ಅರ್ಥ>ಹೆಚ್ಚು ಆಕೃತಿಮಾ (ಅರ್ಥಗಳಿದ್ದಷ್ಟು)
೩. ಹೆಚ್ಚು ರೂಪ ಒಂದೇ ಅರ್ಥ>ಹೆಚ್ಚು ಆಕೃತಿಮಾ (ರೂಪಗಳಿದ್ದಷ್ಟು)
೪. ಹೆಚ್ಚು ರೂಪ ಹೆಚ್ಚು ಅರ್ಥ>ಹೆಚ್ಚು ಆಕೃತಿಮಾ

### 12.3.2 ಆಕೃತಿಮಾ, ಪದ, ಶಬ್ದ :

ಆಕೃತಿಮಾ ಅರ್ಥವತ್ತಾದ ಉಚ್ಚಾರದ ಅತಿ ಸಣ್ಣ ಘಟಕ ಎನಿಸುತ್ತದೆ. ಪದ ಎಂಬುದು ಅರ್ಥವತ್ತಾದ ಅತಿ ಸಣ್ಣ ಸ್ವತಂತ್ರ ರೂಪ,' ಪದದಲ್ಲಿ ಒಂದೇ ಆಕೃತಿಮಾ ಇರಬಹುದು ಅಥವಾ ಹಲವು ಆಕೃತಿಮಾಗಳು ಸೇರಿರಬಹುದು. ಆದ್ದರಿಂದ ಆಕೃತಿಮಾಗಳು ಪದಗಳಾಗಬಹುದು. ಆದರೆ ಎಲ್ಲ ಆಕೃತಿಮಾಗಳು ಪದಗಳಾಗಲಾರವು. ಹಾಗೆ ಪದ, ಕೆಲವೆಡೆ ಆಕೃತಿಮಾ ಆದೀತು ಆದರೆ ಎಲ್ಲ ಪದಗಳೂ ಆಕೃತಿಮಾ ಆಗಲಾರವು. ಧಾರವಾಡದ ಮಾವಿನ ಹಣ್ಣು ಎಂಬ ವಾಕ್ಯದಲ್ಲಿ 'ಧಾರವಾಡದ' ಎಂಬ ರೂಪವನ್ನು ಇಡಿಯಾಗಿ ತೆಗೆದುಕೊಂಡಾಗ ಅದಕ್ಕೊಂದು ಅರ್ಥವಿದೆ. ಅದನ್ನು 'ಧಾರವಾಡ' "ದ್' 'ಅ' ಎಂಬುದಾಗಿ ಇನ್ನೂ ವಿಭಜಿಸಿದರೆ ಮೂರು ಆಕೃತಿಮಾಗಳು ಲಭಿಸುತ್ತವೆ. ಒಂದು ಸ್ವತಂತ್ರ

ಹಾಗೂ ಎರಡು ಬದ್ಧ ಆಕೃತಿಮಾಗಳು ಅದರಲ್ಲಿವೆ. ಹಾಗೆಯೆ 'ಮಾವಿನ' ಎರಡು ಆಕೃತಿಮಾಗಳಿಂದ ಕೂಡಿದ ಒಂದು ಪದ. ಹಣ್ಣು ಆಕೃತಿಮಾವೂ ಹೌದು, ಪದವೂ ಹೌದು. 'ಈಗಿಲ್ಲ,' ಎಂಬ ರೂಪದಲ್ಲಿ 'ಈಗ' 'ಇಲ್ಲ' ಎಂಬ ಎರಡು ಸ್ವತಂತ್ರ ರೂಪಗಳಿವೆ. ಆದ್ದರಿಂದ 'ಈಗಿಲ್ಲ' ರೂಪವು ಎರಡು ಪದಗಳನ್ನು ಅಥವಾ ಎರಡು ಆಕೃತಿಮಾಗಳನ್ನು ಹೊಂದಿದೆ. ಪದವು ವೈಶಿಷ್ಟ್ಯಪೂರ್ಣ ಅರ್ಥವನ್ನು ನೀಡುವ ಒಂದು ಒಟ್ಟು ಘಟಕವಾಗಿರುತ್ತದೆ. 'ಧಾರವಾಡ'ದ –ಒಂದೇ ಪದವಾದರೆ 'ಈಗಿಲ್ಲ' ಎರಡು ಪದಗಳಿಂದ ಕೂಡಿದೆ. ಇದಕ್ಕೆ ಕಾರಣವೆಂದರೆ ಮೊದಲನೆಯದನ್ನು ಇನ್ನೂ ಸ್ವತಂತ್ರ ರೂಪ ಬರುವಂತೆ ವಿಭಜಿಸಲು ಬರುವುದಿಲ್ಲ. ಎರಡನೆಯದು 'ಈಗ' 'ಇಲ್ಲ' ಎಂಬ ಸ್ವತಂತ್ರ ರೂಪಗಳನ್ನಾಗಿ ವಿಭಜಿಸಲು ಬರುತ್ತದೆ. ಪದಗಳನ್ನು ಗುರುತಿಸುವಾಗ ನಾವು ಇನ್ನೊಂದು ಅಂಶವನ್ನು ಗಮನದಲ್ಲಿಟ್ಟಿರಬೇಕು. ಅದೆಂದರೆ 'ಅರ್ಥಪೂರ್ಣತೆ', ಯಾವುದೇ ರೂಪವು 'ಪದ'ದ ಲಕ್ಷಣವನ್ನು ಹೊಂದಿದ್ದು ಅರ್ಥವನ್ನು ಪೂರ್ಣಗೊಳಿಸದೆ ಇದ್ದರೆ ಅದು ಪದವಾಗಲಾರದು. ಉದಾಹರಣೆಗೆ 'ಓದಿದ' 'ತಿಂದ' ಎಂಬ ಕೃದಂತ ವಿಶೇಷಣಗಳು ಮುಂದೆ ಇನ್ನೊಂದು ಬಂದರೆ ಮಾತ್ರ ಪೂರ್ಣಾರ್ಥ ನೀಡಬಲ್ಲವು ಆದ್ದರಿಂದ ಇವುಗಳನ್ನು ಸ್ವತಂತ್ರ ಪದಗಳು ಎನ್ನಲು ಬಾರದು. 'ತಿನ್ನುವ ಬೆಕ್ಕು' ಹಾಗೆಯೇ 'ನೋಡಿದ ನೋಟ' ಇವು ಒಂದೇ ಪದವುಳ್ಳ ರಚನೆಗಳಾಗುತ್ತವೆ. ತಿನ್ನುವ, ನೋಡಿದ ಇಂಥವುಗಳನ್ನು ಶಬ್ದ ಎಂದು ಕರೆಯಬಹುದು. ಶಬ್ದ ಎಂದರೆ ಸ್ಥೂಲವಾಗಿ ಒಂದು ಅಥವಾ ಹೆಚ್ಚು ಧ್ವನಿಮಾ ಸಮೂಹ ಎನ್ನಬಹುದು. ಆದರೆ ಶಬ್ದವು ಕೇವಲ ಇಷ್ಟೇ ಅಲ್ಲ. ಅದು ಏನಾದರೂ ಅರ್ಥವನ್ನು ಒಳಗೊಂಡಿರುತ್ತದೆ. ಅರ್ಥವು ಪೂರ್ಣವಾಗೇ ಇರಬೇಕೆಂಬ ನಿಯಮವಿಲ್ಲ. 'ಮೈಸೂರಿನಿಂದ ಬಂದ ಹುಡುಗ, ಆ ಎಂದವನೇ ಎದ್ದು ನಿಂತ' ಈ ವಾಕ್ಯದಲ್ಲಿ ಏಳು ಶಬ್ದಗಳಿವೆ, ಐದು ಪದಗಳಿವೆ, ಮತ್ತು ಹತ್ತು ಆಕೃತಿಮಾಗಳಿವೆ. ಪದ-ಶಬ್ದ ಒಂದೇ ಅಲ್ಲ. ಶಬ್ದವನ್ನು ಸಾಧಾರಣೀಕರಣವಾಗಿ ಸಾಮಾನ್ಯವಾಗಿ ಬಳಸಲಾಗುತ್ತದೆ. ಪದ ಎಂಬುದು ವಿಶಿಷ್ಟಾರ್ಥವನ್ನು ಹೊಂದಿದ ಅವಿಭಾಜ್ಯ ಸ್ವತಂತ್ರ ರೂಪ. ಎಲ್ಲ ಪದಗಳೂ ಶಬ್ದಗಳಾಗಬಹುದು. ಆದರೆ ಎಲ್ಲ ಶಬ್ದಗಳೂ ಪದಗಳಾಗಲಾರವು. ಆಕೃತಿಮಾಗಳು

ಶಬ್ದ ಇಲ್ಲವೆ ಪದ ಆಗಬಹುದು ಆದರೆ ಎಲ್ಲ ಆಕೃತಿಮಾಗಳು ಶಬ್ದ ಇಲ್ಲವೆ ಪದ ಆಗಲಾರವು.

### 12.3.3 ಸ್ವತಂತ್ರ ಹಾಗೂ ಬದ್ಧ ಆಕೃತಿಮಾಗಳು :

ಆಕೃತಿಮಾಗಳು ನಿರ್ವಹಿಸುವ ಕಾರ್ಯ, ಅರ್ಥ ಅವುಗಳ ಸ್ವರೂಪವನ್ನು ಗಮನಿಸಿ ಅವುಗಳನ್ನು ಅನೇಕ ಪ್ರಕಾರಗಳಲ್ಲಿ ವಿಂಗಡಿಸಲಾಗುತ್ತದೆ. ಬದ್ಧ ಆಕೃತಿಮಾಗಳು ಬಿಡಿಯಾಗಿ ಎಂದೂ ಬಳಕೆಗೊಳ್ಳುವುದಿಲ್ಲ. ಅವು ಯಾವುದಾದ ರೊಂದು ಆಕೃತಿಮಾದೊಂದಿಗೆ ಸೇರಿಕೊಂಡೇ ಯಾವಾಗಲೂ ಪ್ರಯೋಗವಾಗು ತ್ತವೆ. ಅವುಗಳಿಗೆ ಸ್ವತಂತ್ರ ಅಸ್ತಿತ್ವವಿಲ್ಲ. ಹೀಗಿದ್ದು ಅವು ಭಾಷೆಯ ರಚನೆ ಯಲ್ಲಿ ವಿಶಿಷ್ಟ ಪಾತ್ರವನ್ನು ವಹಿಸುವದರಿಂದ ನಿರ್ದಿಷ್ಟ ಅರ್ಥ ಒಮ್ಮೊಮ್ಮೆ ಇಲ್ಲದಿದ್ದರೂ ಅವುಗಳನ್ನು ಆಕೃತಿಮಾ ಎಂದು ಪರಿಗಣಿಸುತ್ತಾರೆ. ಯಾವ ರೂಪಗಳ ಸಹಾಯವಿಲ್ಲದೆ ಸ್ವತಂತ್ರವಾಗಿ ಬಳಕೆಯಾಗುವ ಆಕೃತಿಮಾಗಳಿಗೆ ಸ್ವತಂತ್ರ ಆಕೃತಿಮಾ ಎಂದೂ ಆಕೃತಿಮಾಗಳೊಂದಿಗೆ ಯಾವಾಗಲೂ ಸೇರಿ ಕೊಂಡು, ಬರುವಂಥವು ಬದ್ಧ ಆಕೃತಿಮಾಗಳು ಎಂದೂ ವಿವರಿಸಲಾಗುತ್ತದೆ.

ಕನ್ನಡದಲ್ಲಿ {ತಂದೆ}, {ಕಾಗದ}, {ನೀರು}, {ಮರ}, {ಕೈ} ಇಂತಹ ಅಸಂಖ್ಯಾತ ರೂಪಗಳು ಸ್ವತಂತ್ರ ಆಕೃತಿಮಾಗಳು. {ಗಳು} {ಅರು}, {ಅಂದಿರು} ಮುಂತಾದ ಬಹುವಚನ ಆಕೃತಿ ಪ್ರಭೇದಗಳು ಬದ್ಧ ಆಕೃತಿಮಾಗಳು. ಬರುತ್ತಾನೆ, ಹೋಗುತ್ತಾನೆ, ಮುಂತಾದ ರೂಪಗಳಲ್ಲಿ {ಉತ್} ವರ್ತಮಾನಕಾಲ ಸೂಚಕ ಬದ್ಧ ಆಕೃತಿಮಾ.

### 12.3.4 ಶೂನ್ಯ ಆಕೃತಿಮಾ (*Zero Morpheme*) :

ಭಾಷೆಯಲ್ಲಿ ಬಳಕೆಗೊಳ್ಳುವ ಹಲವು ರೂಪಗಳ ರಚನೆಯನ್ನು ಹೋಲಿಸಿ ನೋಡಿದಾಗ ಇರಬೇಕಾದ ಆಕೃತಿಮಾ ಇರದೆ ಇದ್ದರೆ ಅಲ್ಲಿ ಶೂನ್ಯ ಆಕೃತಿಮಾ ವನ್ನು ಕಲ್ಪಿಸಬೇಕಾಗುತ್ತದೆ. ಶೂನ್ಯ ಆಕೃತಿಮಾವನ್ನು ಸ್ಥಾಪಿಸುವಾಗ ರೂಪ ಗಳ ಹೋಲಿಕೆಯನ್ನು ಹಾಗೂ ಅರ್ಥವನ್ನು ಎಚ್ಚರಿಕೆಯಿಂದ ನಿರೀಕ್ಷಿಸಬೇಕಾಗು ತ್ತದೆ. ಭಾಷೆಯಲ್ಲಿ ಎಲ್ಲಿಯೇ ಆಗಲಿ ಇಂತಹ ಶೂನ್ಯ ಸ್ಥಿತಿಯನ್ನು ಸೂಚಿಸಲು $\phi$ ಚಿಹ್ನೆ ಬಳಸುತ್ತಾರೆ. ಉದಾ : 'ಆನೆ' ಎಂಬ ರೂಪಕ್ಕೆ ಬಹುವಚನ $\phi$ ಎಂದು ಒಮ್ಮೆಲೆಹೇಳಲುಬಾರದು. ಆನೆ ಬಂದವು ಎಂಬ ರಚನೆಯಲ್ಲಿ ಇರಬೇಕಾದ

ಬಹುವಚನ ಆಕೃತಿಮಾ ಶೂನ್ಯವಾಗಿರುವುದು ತಿಳಿಯುವುದು. ಅದನ್ನು ಸ್ಥಾಪಿಸಲು ಬೇರೆ ಉದಾಹರಗಳ ಹೋಲಿಕೆ ಅನಿವಾರ್ಯ. ಕುರಿಗಳು, ಬೇನೆಗಳು, ಮನೆಗಳು, ಕಲ್ಲುಗಳು ಇತ್ಯಾದಿ ರೂಪಗಳಲ್ಲಿ 'ಗಳು' ಬಹುವಚನ ಆಕೃತಿಮಾ ಇರುವಂತೆ ಆನೆ ಬಂದವು ಎನ್ನುವಲ್ಲಿಯೂ ಇರಬೇಕಾಗಿತ್ತು. ಅದು ಇಲ್ಲ. ಆದ್ದರಿಂದ ಇಲ್ಲಿ ಶೂನ್ಯ ($\phi$) ಆಕೃತಿಮಾವನ್ನು ಸ್ಥಾಪಿಸಬೇಕು.

### 12.3.5. ರಿಕ್ತ ಆಕೃತಿಮಾ (*Empty Morpheme*) :

ಯಾವ ಅರ್ಥವನ್ನು ಹೊಂದಿರದಿದ್ದರೂ ಮೂಲದಲ್ಲಿ ಯಾವ ಆಕೃತಿ ಇಲ್ಲದಿದ್ದರೂ ಭಾಷಾ ರೂಪಗಳ ರಚನೆಯಲ್ಲಿ ಮಹತ್ವಪೂರ್ಣವಾಗಿ ಕೆಲವು ರೂಪಗಳು ಬಳಕೆಗೊಳ್ಳಬಹುದು. ಅವು ಭಾಷಾ ರಚನೆಯಲ್ಲಿ ವಿಶಿಷ್ಟ ಕಾರ್ಯವನ್ನು ನಿರ್ವಹಿಸುತ್ತವೆ ಅವುಗಳನ್ನು ರಿಕ್ತ ಆಕೃತಿಮಾ ಎನ್ನುತ್ತಾರೆ. ಶೂನ್ಯ ಆಕೃತಿಮಾದಲ್ಲಿ ಭಾಷೆಯ ರಚನೆಯ ದೃಷ್ಟಿಯಿಂದ ಇರಬೇಕಾದ ಆಕೃತಿಮಾ ಶೂನ್ಯವಾಗಿತ್ತು. ಆದರೆ ಇಲ್ಲಿ ಆ ಶೂನ್ಯವನ್ನು ಯಾವುದಾದರೊಂದು ಧ್ವನಿಮಾ ಇಲ್ಲವೆ ಧ್ವನಿಮಾ ಸಮೂಹದ ಮೂಲಕ ಕಾಣಿಸಿಕೊಂಡು ಸ್ಪಷ್ಟಪಡಿಸಿರುತ್ತದೆ.

ಉದಾಹರಣೆಗೆ :– ಕೆರೆಯಲ್ಲಿ ಎಂಬ ಪದದಲ್ಲಿ ಕೆರೆ ಮತ್ತು ಅಲ್ಲಿ ಇವುಗಳನ್ನು ಕೂಡಿಸಿದಾಗ ಬರುವ 'ಯ್' ಕಾರದ ಕೆಲಸವೇನು ? ಇದು ಏಕೆ ಕಾಣಿಸಿಕೊಂಡಿದೆ ? ಕೆಲಸವಿಲ್ಲ ಅರ್ಥವಿಲ್ಲ ಆದರೂ ಇದಿಲ್ಲದಿದ್ದರೆ ರಚನೆ ಸಾಧ್ಯವಿಲ್ಲ. ತಾನು ಕಾಣಿಸಿಕೊಂಡೂ ವಿಶಿಷ್ಟ ಪದದ ರಚನೆಗೆ ಕಾರಣೀಭೂತವಾಗುತ್ತದೆ. ಈ {ಯ್} ರಿಕ್ತ ಆಕೃತಿಮಾ, ಕಲಿಯಲಿ. ಮರದಲ್ಲಿ ಗಿಡವನ್ನು ಇತ್ಯಾದಿ ರೂಪಗಳಲ್ಲಿ ಬರುವ ಯ್ ದ್, ವ್, ಇಂಥವು ರಿಕ್ತ ಆಕೃತಿಮಾ ಆಗುತ್ತವೆ.

12.3.6 ಬದ್ಧ ಆಕೃತಿಮಾಗಳಲ್ಲಿ ಸಮುಚ್ಚಯ(*additive morpheme*) ಆಕೃತಿಮಾ; ವ್ಯವಕಲನ (*Subtractive morpheme*) ಆಕೃತಿಮಾ, ಎಂದೂ ಮತ್ತೆ ಪ್ರತ್ಯೇಕವಾಗಿ ಗುರುತಿಸುತ್ತಾರೆ. ಒಂದೇ ಕಾಲಕ್ಕೆ, ಒಂದೇ ಪರಿಸರದಲ್ಲಿ ಒಂದಕ್ಕಿಂತ ಹೆಚ್ಚು ಅರ್ಥಗಳನ್ನು ಹೊಂದಿ ಬಳಕೆಗೊಳ್ಳುವ ಆಕೃತಿಮಾಗಳನ್ನು ಅನೇಕಾರ್ಥ (*portmenteau morpheme*) ಆಕೃತಿಮಾ

ಎಂದು ಹೆಸರಿಸುತ್ತಾರೆ ಉದಾಹರಣೆಗೆ 'ಬರುತ್ತಾನೆ'. ಎಂಬ ರೂಪದಲ್ಲಿ 'ಆನೆ' ಆಕೃತಿಮಾ ಪುಲ್ಲಿಂಗ ಪುರುಷವಾಚಕ ಹಾಗೂ ಏಕವಚನ ಎಂದೆರಡು ಅರ್ಥಗಳನ್ನು ಏಕಕಾಲಕ್ಕೆ ಹೊಂದಿದೆ. ಇದು ಅನೇಕಾರ್ಥ ಆಕೃತಿಮಾ, ಭಾಷೆಯಲ್ಲಿ ತೀರ ಕ್ವಚಿತ್ತಾಗಿ ಬರುವ ಆಕೃತಿಮಾಗಳನ್ನು ವಿಶಿಷ್ಟ ಆಕೃತಿಮಾ (*unique morpheme*) ಎನ್ನುತ್ತಾರೆ. ಅರ್ಥಸಾಮಿಪ್ಯವಿದ್ದೂ ರೂಪ ಭಿನ್ನವಾಗಿದ್ದು ಭಾಷೆಯ ವ್ಯಾಕರಣ ದೃಷ್ಟಿಯಿಂದ ಮಹತ್ವದವಾಗಿದ್ದರೆ ಅಥವಾ ಭಾಷಾ ರಚನೆಯ ಪೂರಕ ಅಂಶಗಳಾಗಿದ್ದರೆ ಅಂಥ ಆಕೃತಿಮಾಗಳನ್ನು (*supplitive morpheme*) ಪೂರಕ ಆಕೃತಿಮಾ ಎಂದು ಗುರುತಿಸುತ್ತಾರೆ. ಉದಾಹರಣೆಗೆ ಇಂಗ್ಲೀಷ್‌ನಲ್ಲಿ ***go, went, good-better***, ಕನ್ನಡದ ನಾ-ನನ್ನ ಕೊಡು—ಕೊಟ್ಟು ಮುಂತಾದವು. ಇಂಥವೇ ಸಂದರ್ಭಗಳಿದ್ದು ನಿರ್ದಿಷ್ಟ ಧ್ವನಿ ಆಗಮದಿಂದ ಆಕೃತಿಮಾ ರೂಪುಗೊಳ್ಳುತ್ತಿದ್ದರೆ ಅಂಥವುಗಳನ್ನು (*replacive morpheme*) ಪ್ರತ್ಯಾಪನ್ನ ಆಕೃತಿಮಾ ಎಂದೂ ಸೂಚಿಸುತ್ತಾರೆ. ಉದಾಹರಣೆಗೆ ಇಂಗ್ಲೀಷನ *foot-feet, mouse-mice*, ಇತ್ಯಾದಿ.

ಹೀಗೆ ಆಕೃತಿಮಾಗಳನ್ನು ಅನೇಕ ವಿಧಗಳಲ್ಲಿ ವಿಂಗಡಿಸಿ ವಿವರಿಸುತ್ತಾರೆ. ಆಕೃತಿಮಾಗಳು ಪ್ರಕ್ರಿಯೆಗೊಳ್ಳುವುದನ್ನು ಬ್ಲಾಕ್ ಮತ್ತು ಟ್ರೇಗರ್ ಅವರು ಐದು ಬಗೆಯಲ್ಲಿ ವಿಂಗಡಿಸಿದ್ದಾರೆ.

೧. ಪ್ರತ್ಯಯೀಕರಣ (*Affixation*)
೨. ಆಂತರಿಕ ಬದಲಾವಣೆ (*Internal change*)
೩. ದ್ವಿತ್ವೀಕರಣ (*Reduplication*)
೪. ಪೂರಕತೆ (*Suppletion*) ಹಾಗೂ
೫. ಶೂನ್ಯರೂಪವ್ಯತ್ಯಾಸ (*Zero modification*)

ಕನ್ನಡದಲ್ಲಿ ಪ್ರತ್ಯಯೀಕರಣ ಆಕೃತಿಮಾ ಮಧ್ಯ ಹಾಗೂ ಅಂತ್ಯದಲ್ಲಿ ಆಂತರಿಕ ಬದಲಾವಣೆಗಳ ಸಹಿತ ಅಥವಾ ಇಲ್ಲದೆಯೆ ನಡೆಯುತ್ತದೆ. ಆಕೃತಿಮಾ ಪೂರ್ವ ಸ್ಥಾನದಲ್ಲಿ ಪ್ರತ್ಯಯೀಕರಣವು ಪ್ರಕ್ರಿಯೆ (*process*) ಆಗಿ ಬಳಕೆಗೊಳ್ಳುವುದಿಲ್ಲ. ಪ್ರಾತಿಪದಿಕಕ್ಕೆ ಪ್ರತ್ಯಯ ಸೇರಿ ಉಂಟಾದ ರೂಪಗಳ ಶ್ರೇಣಿಗೆ ರೂಪಾವಳಿ (*paradigm*) ಎಂದು ಕರೆಯುತ್ತಾರೆ.

12.3.7 ನೈಡಾ ಎಂಬ ಸುಪ್ರಸಿದ್ಧ ಭಾಷಾ ವಿಜ್ಞಾನಿ ಆಕೃತಿಮಾ ವಿಜ್ಞಾನದಲ್ಲಿ ಭಾಷೆಯ ವರ್ಣನಾತ್ಮಕ ವಿಶ್ಲೇಷಣಾ ತತ್ತ್ವಗಳನ್ನು ಸಾದ್ಯಂತವಾಗಿ ವಿವರಿಸಿದ್ದಾನೆ. ಬ್ಲೂಮ್ ಫೀಲ್ಡನ ಆಕೃತಿಮಾ ವ್ಯಾಖ್ಯೆ ಹೆಚ್ಚು ಸೂಕ್ತವೂ ಬಹುಜನ ವಿದ್ವಾಂಸರಿಂದ ಒಪ್ಪಿಕೊಳ್ಳಲ್ಪಟ್ಟಿದ್ದೂ ಪ್ರಾಯೋಗಿಕವೂ ಆಗಿದೆಯೆಂಬುದನ್ನು ಮನಗಾಣಿಸಿ ಆಕೃತಿಮಾಗಳನ್ನು ಗುರುತಿಸಲು ಅವನು ಆರು ತತ್ತ್ವಗಳನ್ನು ಹೇಳಿದ್ದಾನೆ. ಅಷ್ಟೇ ಅಲ್ಲದೇ ಆಕೃತಿಮಾ ವಿಜ್ಞಾನದ ವಿಭಾಗದಲ್ಲಿ ಭಾಷಾ ವಿಶ್ಲೇಷಣೆಗೆ ತೊಡಗುವವರು ೪ ಅಂಶಗಳನ್ನು ತಪ್ಪದೇ ಗಮನಿಸಲು ಸೂಚಿಸಿದ್ದಾನೆ.

೧. ಜನರು ಏನನ್ನು ಹೇಳುತ್ತಾರೆ ಎಂಬುವರ ಮೇಲೆ ಭಾಷಾ ವಿಶ್ಲೇಷಣೆ ಆಧರಿಸಿರಬೇಕು.

೨. ರೂಪಗಳನ್ನು ಮುಖ್ಯವಾಗಿಟ್ಟುಕೊಂಡು ಅವು ವ್ಯಾಕರಣಾತ್ಮಕವಾಗಿ ಬಳಕೆಗೊಳ್ಳುವುದನ್ನು ವಿವರಿಸಬೇಕು.

೩. ಭಾಷೆಯ ಯಾವುದೇ ಭಾಗವನ್ನು ಸೂಕ್ತರೀತಿಯಲ್ಲಿ ಇನ್ನುಳಿದ ಭಾಗಗಳನ್ನು ಉಪಷ್ಟಂಭಕವಾಗಿ ಪರಿಶೀಲಿಸದೆ ವಿವರಿಸಕೂಡದು.

೪. ಭಾಷೆ ನಿರಂತರ ಬದಲಾವಣೆಯ ಪ್ರಕ್ರಿಯೆಯಲ್ಲಿರುತ್ತದೆಯೆಂಬುದನ್ನು ಮರೆಯಬಾರದು.

12.3.8 **ಶಬ್ದಮಣಿ ದರ್ಪಣ–ಆಕೃತಿಮಾಶಾಸ್ತ್ರ :**

ಕೇಶಿರಾಜ ಹಾಗೂ ಇತರ ಎಲ್ಲ ಕನ್ನಡ ವೈಯಾಕಾರಣರು ತಮ್ಮ ವ್ಯಾಕರಣಗಳಲ್ಲಿ ಶಬ್ದಶಾಸ್ತ್ರಕ್ಕೆ ಹೆಚ್ಚು ಗಮನವಿತ್ತಿದ್ದಾರೆ. ಆಕೃತಿಮಾಕಲ್ಪನೆಯೆಡೆಗೆ ಅವರ ವಿಚಾರ ಹರಿಯಬೇಕಾಗಿರಲಿಲ್ಲ. ಯಾಕೆಂದರೆ ಸಂಸ್ಕೃತದ ಸಿದ್ಧ ಮಾದರಿ ವ್ಯಾಕರಣಗಳು ಅವರ ಕಣ್ಣೆದುರಿಗಿದ್ದವು. ಪರಂಪರಾಗತವಾಗಿ ಹೇಳಿರುವ ನಾಮ, ಧಾತು. ಅವ್ಯಯಗಳನ್ನು ಸ್ವತಂತ್ರ ಆಕೃತಿಮಾಗಳಲ್ಲಿ ಅ ತದ್ಧಿತ ಆಖ್ಯಾತ ಮುಂತಾದ ಪ್ರತ್ಯಯಗಳನ್ನು ಬದ್ಧ ಆಕೃತಿಮಾಗಳಲ್ಲಿ ಸ್ಥೂಲವಾಗಿ ವಿಂಗಡಿಸಬಹುದು. ನಾಮಗಳನ್ನು ಅವರು ರೂಢ, ಅನ್ವರ್ಥ, ಅಂಕಿತ, ವಸ್ತುವಾಚಕ, ಸರ್ವನಾಮ, ಗುಣವಚನ, ಸಂಖ್ಯಾವಾಚಕ, ಭಾವವಾಚಕ, ಎಂಬಿತ್ಯಾದಿಯಾಗಿ ವರ್ಗೀಕರಿಸಿದ್ದಾರೆ. ಧಾತುಗಳಲ್ಲಿ ಕ್ರಿಯಾಧಾತು, ನಾಮಧಾತುಗಳೆಂದು

ವಿಂಗಡಿಸಿದ್ದಾರೆ. ಈ ಬಗೆಯು ಅರ್ಥಾನುಗುಣವಾದುದಾಗಿದೆ. ಕೆಲವೆಡೆ ಕೇಶಿರಾಜನು ರೂಪಾನುಗುಣವಾಗಿಯೂ ವಾಕ್ಯಮಟ್ಟದಲ್ಲೂ ನಾಮಗಳನ್ನು ವಿವರಿಸಲು ಯತ್ನಿಸಿದ್ದಾನೆ. ನಾಮಪದಗಳು ಒಂದಕ್ಷರದಿಂದ ಐದಕ್ಷರಗಳ ವರೆಗೆ ಇವೆಯೆಂದು ಹೇಳಿ ಅವನ್ನು ದಿಟದ ನಾಮಗಳೆಂದು (ಪ್ರಾಯಶಃ ಪದ ಎಂದು) ಹೆಸರಿಸಿರುವನು. ಧಾತುಗಳಿಗೆ ಪರವಾಗುವ ಪ್ರತ್ಯಯಗಳನ್ನೆಲ್ಲ ವರ್ಣಿಸುತ್ತಾನೆ. (ಧಾತು ಪ್ರಕರಣ) ಹ್ರಸ್ವ ಮತ್ತು ದೀರ್ಘ ಸ್ವರಗಳಿಂದ ಕೂಡಿದ ಧಾತುಗಳನ್ನು ನೀಡಿದ್ದಾನೆ. ಪದಗಳಲ್ಲಿ ಅಚ್ಚಗನ್ನಡದವುಗಳನ್ನು ದೇಶ್ಯ ಸಮಸಂಸ್ಕೃತ ಹಾಗೂ ತತ್ಸಮ, ತದ್ಭವಗಳೆಂದು ವರ್ಗೀಕರಿಸಿದ್ದಾನೆ.

## 12.4 ವಾಕ್ಯಶಾಸ್ತ್ರ :

12.4.0 ಆಧುನಿಕ ವಾಕ್ಯ ವಿಜ್ಞಾನದಲ್ಲಿ ರೂಪವರ್ಗ (*(Form Class)* ದಲ್ಲಿ ಒಳಗೊಳ್ಳುವ ಅಂಗಿ *(Constitute)*, ಅಂಗ (*Constituent*) ಮೂಲಾಂಗ *(Ultimate Constituent)*, ತಕ್ಷಣಾಂಗ *(Immediate Constituent)* ಮುಂತಾದವುಗಳನ್ನು ಪರಿಗಣಿಸಿ ವಿಶ್ಲೇಷಿಸುವ ತತ್ತ್ವಗಳಿವೆ. ಆದರೆ ಇತ್ತೀಚೆಗೆ ಭಾಷಾವಿಜ್ಞಾನಿಗಳು ವಾಕ್ಯವಿಶ್ಲೇಷಣೆಗೆ ಸಂಬಂಧಪಟ್ಟಂತೆ ಅದ್ಭುತ ಪ್ರಗತಿಯನ್ನು ಸಾಧಿಸಿದ್ದಾರೆ. ವಾಕ್ಯರಚನೆಯ ವಿನ್ಯಾಸದಲ್ಲಿನ ಸಂಕೀರ್ಣತೆಯನ್ನು ವೈವಿಧ್ಯವನ್ನು ಪದಪುಂಜ ರಚನಾ ನಿಯಮಗಳ ( *Phrase structure Rules* ) ಅಡಿಯಲ್ಲಿ ರೂಪಾಂತರ ವ್ಯಾಕರಣದಲ್ಲಿ ವಿವರಿಸಲಾಗುತ್ತದೆ.

ಕನಿಷ್ಟತಮ ಉಚ್ಚಾರದ ಅರ್ಥವತ್ತಾದ ಸ್ವತಂತ್ರಘಟಕಗಳ ಪರಸ್ಪರ ಸಂಬಂಧದೊಡನಿರುವ ರಚನೆಗಳ ವಿಶ್ಲೇಷಣೆಯೇ ವಾಕ್ಯವಿಜ್ಞಾನ.

ಧ್ವನಿ, ಧ್ವನಿಮಾ, ಆಕೃತಿಮಾ ಅವುಗಳ ಸಂಯೋಜನೆಯ ಹಂತ ಮುಗಿದ ಮೇಲೆ ಅವುಗಳನ್ನು ಭಾಷೆಯ ರಚನೆಗೆ ಅನುಗುಣವಾಗಿ ಹೊಂದಿಸುತ್ತ ಅಸಂಖ್ಯಾತ ವಾಕ್ಯಗಳನ್ನು ನಿರ್ಮಿಸಬಹುದು. ವಾಕ್ಯಗಳು ಭಾಷೆಯ ರಚನೆಯಲ್ಲಿ ಪರಿಪೂರ್ಣ ಘಟಕಗಳು. ವಾಕ್ಯಗಳಿಂದ ಯಾವುದೇ ವಿಷಯವನ್ನು ಸ್ಪಷ್ಟವಾಗಿ ಅಭಿವ್ಯಕ್ತಗೊಳಿಸಬಹುದು. ವಾಕ್ಯವಿಜ್ಞಾನವು ಶಬ್ದಗಳನ್ನು ಹೇಗೆ ವ್ಯವಸ್ಥಿತವಾಗಿ ಹೊಂದಿಸಿ ವಾಕ್ಯ ರಚಿಸಬೇಕೆಂಬುದನ್ನು ಹಾಗೂ ಅವುಗಳ ಪರಸ್ಪರ

ಸಂಬಂಧವನ್ನು ಸೂಕ್ಷ್ಮವಾಗಿ ವಿವರಿಸುತ್ತದೆ. ವಾಕ್ಯವಿಜ್ಞಾನದಲ್ಲಿ ವಾಕ್ಯವನ್ನು ಒಂದು ಇಡೀ ಘಟಕವೆಂದೇ ಪರಿಗಣಿಸಿ ಅದರಲ್ಲಿನ ಸಣ್ಣ ಘಟಕಗಳು ವಾಕ್ಯದಲ್ಲಿಯ ಕೇಂದ್ರ ಘಟಕಕ್ಕೆ ಹೇಗೆ ಸಂಬಂಧಿಸಿರುತ್ತವೆಂಬುದನ್ನು ವಿವರಿಸಲಾಗುತ್ತದೆ. ಸಂಪೂರ್ಣ ಅರ್ಥವನ್ನು ನೀಡುವ ಯಾವುದೇ ಸ್ವತಂತ್ರ ರಚನೆ-ವಾಕ್ಯವೆನಿಸುತ್ತದೆ.

೧. ಬಾ ೨, ಬರಲೆ ? ೩. ಕವಿ ಕೇಶವನು ೧. ಇವಳು ಹುಡುಗಿ ೫. ಇವಳು ಬಲು ಚೆಲುವೆಯಾದ ಹುಡುಗಿ ಇದ್ದಾಳೆ. ಇವೆಲ್ಲವೂ ವಾಕ್ಯಗಳೇ. ಕ್ರಿಯಾಪದವು ವಾಕ್ಯದಲ್ಲಿ ವ್ಯಕ್ತರೂಪದಲ್ಲಿ ಇರಬಹುದು ಇಲ್ಲವೆ ಇರಲಿಕ್ಕಿಲ್ಲ. ವಾಕ್ಯಗಳು ಭಾಷೆಯನ್ನು ಹೇಗೆ ಬೇಕೋ ಹಾಗೆ ರಚನೆಯ ಚೌಕಟ್ಟಿನಲ್ಲಿ ನಾದಬಹುದು.

12.4.1 ವಾಕ್ಯಗಳನ್ನು ಪ್ರಮುಖ ಹಾಗೂ ಗೌಣ ಎಂದು ಎರಡು ಮುಖ್ಯ ಪ್ರಕಾರಗಳಲ್ಲಿ ವಿಂಗಡಿಸಿ, ಪ್ರಮುಖ ವಾಕ್ಯಗಳಲ್ಲಿ ಸಹಜ, ಸಮಸ್ತ, ಸಂಕೀರ್ಣ ಎಂಬ ಮೂರು ಪ್ರಕಾರಗಳನ್ನೂ, ಗೌಣ ವಾಕ್ಯಗಳಲ್ಲಿ— ಖಂಡ. ಅಖಂಡ ವೆಂದು ಮತ್ತೆ ವಿಂಗಡಿಸಬಹುದು. ಕರ್ತೃ, ಕ್ರಿಯಾಪದಗಳೆರಡನ್ನೂ ಒಳಗೊಂಡ ವಾಕ್ಯವೇ—ಪ್ರಮುಖ ವಾಕ್ಯ. ಅಂತೆಯೆ "ವಾಕ್ಯದಲ್ಲಿ ನಾಮಪದ ಹೆಣ್ಣು; ಕ್ರಿಯಾಪದ ಗಂಡು. ಇನ್ನಾರಿರಲಿ, ಇಲ್ಲದಿರಲಿ ಈ ಎರಡರ–ದಾಂಪತ್ಯ ಮದುವೆ ಸಾಧಿಸಬಲ್ಲುದು" ಎಂದು ಒಂದೆಡೆ ವಿ. ಸೀತಾರಾಮಯ್ಯ ಹೇಳಿರುವುದು ಔಚಿತ್ಯಪೂರ್ಣವಾಗಿದೆ. ಒಂದೇ ಒಂದು ಕ್ರಿಯಾಪದವುಳ್ಳದ್ದು ಸಹಜವಾಕ್ಯವೂ, ಒಂದಕ್ಕಿಂತ ಹೆಚ್ಚು ಕ್ರಿಯಾಪದಗಳುಳ್ಳದ್ದು ಸಮಸ್ತವಾಕ್ಯವೂ ಎನಿಸಿದರೆ, ಸಂಕೀರ್ಣ ವಾಕ್ಯದಲ್ಲಿ ಒಂದಕ್ಕಿಂತ ಹೆಚ್ಚು ಕ್ರಿಯಾಪದಗಳಿದ್ದು ಎಲ್ಲ ಕ್ರಿಯಾಪದಗಳ ಊಗೋಚರವಾಗಿದ್ದರೆ ಮಾತ್ರ ಸಂಕೀರ್ಣವಾಕ್ಯ ಅರ್ಥವಾಗುತ್ತದೆ. ಗೌಣ ವಾಕ್ಯದಲ್ಲಿ ಕ್ರಿಯಾಪದ ಇಲ್ಲವೆ ಕರ್ತೃಪದ ಗೋಚರಿಸುವುದಿಲ್ಲ. ತೀವ್ರ ಭಾವನೆಗಳನ್ನು ಸಂಕ್ಷಿಪ್ತವಾಗಿ ಅಭಿವ್ಯಕ್ತಿಸುವಲ್ಲಿ ಖಂಡ ಇಲ್ಲವೆ ಅಖಂಡ, ಗೌಣ ವಾಕ್ಯಗಳು ಬಳಕೆಗೊಳ್ಳಬಹುದು.

ಉದಾ : ೧. ಪ್ರಮುಖ ವಾಕ್ಯ : ಅವಳು ಹೋಗುತ್ತಿದ್ದಾಳೆ.

ಅದು ಬಾಡಿದೆ. ನಾನು ಬರುತ್ತೇನೆ.

೨. ಗೌಣ ವಾಕ್ಯ : ಅರೆ ನೀನೆ?; ಹೊರದಬ್ಬು;
ಒಳನೂಕು, ಓ ದೇವರೆ.

೧. (ಅ) ಸಹಜವಾಕ್ಯ : ಅವರು ನಡೆಯುತ್ತಾರೆ.
ಬ) ಸಮಸ್ತವಾಕ್ಯ ; ವಿಶ್ವನಾಥ ಹೋದನು ನಾವೂ ಕೂಡ.
ಕ) ಸಂಕೀರ್ಣ : ನೀನು ಮನೆಯಲ್ಲಿದ್ದರೆ ತಾನೆ ಅವಳಿಗೆ ಸುಖಸಿಕ್ಕೀತು ಗಂಡನು ಊಟ ಮಾಡದ ಹೊರತು ಹೆಂಡತಿ ನೀರೂ ಕೂಡ ಕುಡಿಯುವುದಿಲ್ಲ. ಅವರು ಬರುತ್ತಾರೋ ಇಲ್ಲವೋ ನಾನರಿಯೆ.

೨. ಅ) ಖಂಡ : ಓ ರಾಜನೇ, ಬೇಗ ಓಡು.
ಬ) ಅಖಂಡ (ಕರ್ತೃರಹಿತ) : ಹೋಗು, ಬಾ, ನಿಲ್ಲು, ತಪ್ಪೆ.
ಕ) ಇತರ : ಅವನಿಗಿಂತ ಹಿರಿಯನು. ದೊಡ್ಡದಕಿಂತ ಒಳ್ಳೆಯದು.

7.2. ಹೀಗೆ ಅನೇಕ ರೀತಿಯ ವಾಕ್ಯರಚನೆಯಿಂದ ಘಟನೆ(ಗಳು) ಇಲ್ಲವೆ ವಿಚಾರ (ಗಳು) ಅಭಿವ್ಯಕ್ತವಾಗಿ ಸಂಕೀರ್ಣ ಭಾಷಾ ವ್ಯಾಪಾರ ನಡೆಯುತ್ತದೆ, ವಾಕ್ಯಗಳಲ್ಲಿ ಅಳವಡುವ ಶಬ್ದಗಳ ಸ್ಥಾನವು ಆ ವಾಕ್ಯದ ಕೇಂದ್ರಾರ್ಥವನ್ನು ಸ್ಪಷ್ಟ ಪಡಿಸುತ್ತದೆ. ಆದುದರಿಂದ ಶಬ್ದಗಳ ಕ್ರಮವೂ ವಾಕ್ಯದಲ್ಲಿ ಬಹು ಮಹತ್ವದ್ದಾಗಿದೆ. ಶಬ್ದಗಳ ಬದಲಾವಣೆಯಿಂದ ಬೇರೆ ಅರ್ಥ ಕೊಡುವ ವಾಕ್ಯಗಳೇ ನಿರ್ಮಾಣವಾಗಬಹುದು,

ಉದಾ : ಓಡುವ ಹುಡುಗ—ಹುಡುಗ ಓಡುವ
ಒಂದುಗಂಡು ಎರಡು ಹೆಣ್ಣು ಬೇಕು—ಎರಡು ಗಂಡು ಒಂದು ಹೆಣ್ಣು ಬೇಕು. ಮೊನ್ನೆ ಬರುತ್ತೇನೆಂದು ಹೇಳಿದ್ದನು—ಬರುತ್ತೇನೆಂದು ಮೊನ್ನೆ ಹೇಳಿದ್ದನು.

ಕೆಲವು ಸಲ ಈ ರೀತಿ ಇಡೀ ವಾಕ್ಯದ ಅರ್ಥ ಬೇರಾಗದೆ ಇದ್ದರೂ ಕೇಂದ್ರಾರ್ಥದಲ್ಲಿ ವ್ಯತ್ಯಾಸವುಂಟಾಗಬಹುದು.

ಉದಾ :—

೧) ಧಾರವಾಡದಲ್ಲಿ ಅವನಿಗೆ ಮಾವನವರು ಸಾವಿರ ರೂಪಾಯಿ ಕೊಟ್ಟರು
೨) ಮಾವನವರು ಅವನಿಗೆ ಧಾರವಾಡದಲ್ಲಿ ಸಾವಿರ ರೂಪಾಯಿ ಕೊಟ್ಟರು
೩) ಅವನಿಗೆ ಧಾರವಾಡದಲ್ಲಿ ಸಾವಿರ ರೂಪಾಯಿ ಕೊಟ್ಟವರು ಮಾವನವರು.

೪) ಮಾವನವರು ಅವನಿಗೆ ಧಾರವಾಡದಲ್ಲಿ ಕೊಟ್ಟಿದ್ದು ಸಾವಿರ ರೂಪಾಯಿ
೫) ಅವನಿಗೆ ಮಾವನವರು ಸಾವಿರ ರೂಪಾಯಿ ಕೊಟ್ಟಿದ್ದು ಧಾರವಾಡದಲ್ಲಿ
೬) ಧಾರವಾಡದಲ್ಲಿ ಮಾವನವರು ಸಾವಿರ ರೂಪಾಯಿ ಕೊಟ್ಟಿದ್ದು ಅವನಿಗೆ

12.4.2 ಒಂದು ಘಟನೆಯನ್ನೇ ಅಲ್ಪಸ್ವಲ್ಪ ವ್ಯತ್ಯಾಸದಿಂದ ಬೇರೆ ಬೇರೆ ಅರ್ಥ ಬರುವಂತೆ ವಾಕ್ಯ ರಚಿಸಬಹುದಾಗಿದೆ—

೧) ನೀನು ನಾಳೆ ನನ್ನೊಡನೆ ಅವಳನ್ನು ಕಳಿಸಲೇಬೇಕು
೨) ನೀನು ನಾಳೆ ನನ್ನೊಡನೆ ಅವಳನ್ನು ಕಳಿಸುವೆಯಾ ?
೩) ನೀನು ನಾಳೆ ನನ್ನೊಡನೆ ಅವಳನ್ನು ಕಳಿಸು
೪) ನೀನು ನಾಳೆ ನನ್ನೊಡನೆ ಅವಳನ್ನು ಕಳಿಸಿದರೆ ಒಳಿತು
೫) ನೀನು ನಾಳೆ ನನ್ನೊಡನೆ ಅವಳನ್ನು ಕಳಿಸಬೇಡ

ಹೀಗೆ ವಾಕ್ಯಗಳಲ್ಲಿಯ ಶಬ್ದಗಳ ಸ್ಥಾನ ಬದಲಿಸುವುದರಿಂದ ಇಲ್ಲವೆ ಕ್ರಿಯಾಪದಗಳನ್ನು ಆಂತರಿಕವಾಗಿ ಬೆಳೆಯಿಸುವುದರಿಂದ, ಬದಲಿಸುವುದರಿಂದ ಹಲವಾರು ವಾಕ್ಯಗಳನ್ನು ರಚಿಸಬಹುದು. ವಾಕ್ಯದ ಕೇಂದ್ರವು ಸಾಮಾನ್ಯವಾಗಿ ಕ್ರಿಯಾಪದದಲ್ಲಿರುತ್ತದೆ. ಇಡೀ ವಾಕ್ಯವನ್ನು ಕ್ರಿಯಾಪದವೇ ನಿಯಂತ್ರಿಸುತ್ತದೆ. ಕ್ರಿಯಾಪದವು ವಾಕ್ಯದ ಅರ್ಥವನ್ನು ಪೂರ್ಣಗೊಳಿಸುತ್ತದೆ. ಕ್ರಿಯಾಪದದ ಅರ್ಥ, ಸ್ವರೂಪದಿಂದ ವಾಕ್ಯದ ಅರ್ಥಸ್ವರೂಪ ನಿರ್ಧರಿತವಾಗುತ್ತದೆ. ವಾಕ್ಯದಲ್ಲಿ ಶಬ್ದಗಳ ಕ್ರಮ ಹೇಗಿರಬೇಕೆಂಬುದನ್ನು ಆಯಾ ಭಾಷೆಯ ರಚನೆಯೇ ನಿರ್ಧರಿಸುತ್ತದೆ. ಕ್ರಮವು ವ್ಯಾಕರಣಕ್ಕಿಂತ ರಚನಾಂಶಕ್ಕೆ ಹೆಚ್ಚು ಅನುಗುಣವೆಂಬುದು ಮುಖ್ಯ—

ಉದಾಹರಣೆಗೆ— ಕನ್ನಡದಲ್ಲಿ ಕರ್ತೃ, ಕರ್ಮ, ಕ್ರಿಯಾಪದ—ಈ ಕ್ರಮದಲ್ಲಿ ಶಬ್ದಗಳು ಬರುವುದು ವಾಡಿಕೆ.

ಸತೀಶನು ಪುಸ್ತಕವನ್ನು ಓದುತ್ತಾನೆ.
(ಕರ್ತೃ) (ಕರ್ಮ) (ಕ್ರಿಯಾಪದ)

ಇದು ವ್ಯಾಕರಣಾತ್ಮಕವಾಗಿಯೂ, ರಚನಾತ್ಮಕವಾಗಿಯೂ ಸರಿಯೆನಿಸುತ್ತದೆ ಆದರೆ—

ನಾಯಿಯು ಪುಸ್ತಕವನ್ನು ಓದುತ್ತದೆ

ಎಂಬ ವಾಕ್ಯವು ವ್ಯಾಕರಣಾತ್ಮಕವಾಗಿ (ಅಂದರೆ ಕರ್ತೃ. ಕರ್ಮ, ಕ್ರಿಯಾ ಪದ ಕ್ರಮದಲ್ಲಿ) ಸರಿಯೆನಿಸುತ್ತದೆಯಾದರೂ ಈ ಬಗೆಯ ವಾಕ್ಯ ಕನ್ನಡದಲ್ಲಿ ಘಟಿಸಲಾರದು. ಇದೇ ರೀತಿ—

ಸುರೇಶನು ಶಾಲೆಗೆ ಹೋಗುತ್ತಾಳೆ
ಶಕುಂತಲೆಯು ರೂಮಿಗೆ ಪ್ರವೇಶಿಸುತ್ತಾನೆ.

ಇಂತಹ ವಾಕ್ಯಗಳು ರಚನಾತ್ಮಕವಾಗಿ ತಪ್ಪಾಗುತ್ತವೆ. ಪುಸ್ತಕವನ್ನು ಯಾರು ಓದುತ್ತಾರೆ, ಶಾಲೆಗೆ ಹೋಗುವವರು ಯಾರು ? ಅವರು ಗಂಡೆ ಹೆಣ್ಣೆ ? ಇತ್ಯಾದಿ ವಿಚಾರಗಳೆಲ್ಲ ಖಚಿತವಾಗಿರುವುದರಿಂದ ಅವನ್ನು ಸ್ಪಷ್ಟಪಡಿಸುವಂತಹ ರಚನೆಗಳೇ ವಾಕ್ಯದಲ್ಲಿ ಸಮಂಜಸ ಅರ್ಥ ನೀಡುತ್ತವೆ. ಆದ್ದರಿಂದ ವಾಕ್ಯರಚನೆ ಕೇವಲ ಯಾಂತ್ರಿಕವಾಗಿ ಶಬ್ದಗಳನ್ನು ಜೋಡಿಸಿ ಇಡುವ ಒಂದು ತಂತ್ರವಲ್ಲ. ಅದರ ಹಿಂದೆ ಭಾವ, ವಿಚಾರ, ಸಂಸ್ಕೃತಿ, ಭಾಷಾರಚನೆ ಎಲ್ಲವೂ ಅಡಗಿರುತ್ತದೆ. ಅಂತೆಯೆ ಭಾಷೆಯ ರಚನೆ, ಮಾನವನ ವೈಚಾರಿಕ, ಸಾಂಸ್ಕೃತಿಕ ಇತ್ಯಾದಿ ಅಂಶಗಳನ್ನು ವಾಕ್ಯಗಳ ಮೂಲಕ ಕಂಡುಕೊಳ್ಳಬಹುದು. ಅವನ್ನು ಗುರುತಿಸುವ ಅತಿ ಸಣ್ಣ ಆದರೆ ಪರಿಪೂರ್ಣ ಘಟಕಗಳೇ ವಾಕ್ಯಗಳಾಗಿವೆ.

12.4.3 ವಾಕ್ಯಗಳಲ್ಲಿ ಅಡಗಿರುವ ಅರ್ಥವನ್ನು ಅವಲಂಬಿಸಿ ಅವುಗಳನ್ನು ಅನೇಕ ಬಗೆಯಲ್ಲಿ ವಿಂಗಡಿಸಿ ವಿವರಿಸುತ್ತಾರೆ. ವಾಸ್ತವಿಕ ಸಂಗತಿ, ವಿಷಯ ಇಲ್ಲವೆ ಘಟನೆಯನ್ನು ಅರ್ಥೈಸುವ ವಾಕ್ಯಗಳನ್ನು ವಿಷಯಸೂಚಕಗಳೆಂದು ಪರಿಗಣಿಸಬಹುದು. ಇನ್ನೂ ಕೆಲವು, ನಡೆದ ಅಥವಾ ನಡೆವ ಕ್ರಿಯೆಗೆ ಹೆಚ್ಚು ಒತ್ತು ಕೊಡುತ್ತಿದ್ದರೆ ಅವುಗಳನ್ನು ಕ್ರಿಯಾಸೂಚಕವಾಕ್ಯವೆನ್ನಬಹುದು.

ಉದಾ : ಬಸ್ಸು ಕೊಳ್ಳದಲ್ಲಿ ಬಿತ್ತು (ಕ್ರಿಯಾಸೂಚಕ)
ನಾಯಿ ಸುಚ್ಚನ್ನು ತಿನ್ನುತ್ತದೆ (ಕ್ರಿಯಾಸೂಚಕ)
ವ್ಯಾಕರಣವನ್ನು ಚೆನ್ನಾಗಿ ಓದಬೇಕು (ಕ್ರಿಯಾಸೂಚಕ)
ಅವನ ತಲೆ ದುಂಡಗಿದೆ (ವಿಷಯಸೂಚಕ)
ಅವಳು ಇದ್ದಲಿಯಷ್ಟು ಕಪ್ಪಗಿದ್ದಾಳೆ (ವಿಷಯಸೂಚಕ)
ನನ್ನ ಕಿಸೆಯಲ್ಲಿ ರೊಕ್ಕವಿತ್ತು (ವಿಷಯಸೂಚಕ)
ನನಗೆ ನನ್ನ ಹೆಂಡತಿಯೆಂದರೆ ಪ್ರೀತಿ (ವಿಷಯಸೂಚಕ)

ಕ್ರಿಯಾಸೂಚಕಗಳನ್ನು ನಿಯೋಗಿ, ಅನುಭೋಗಿ, ಆಕರ, ವಿಷಯ, ಮತ್ತು ಪ್ರೇರಕ ಎಂಬುದಾಗಿ (ಮುಖ್ಯ ಘಟಕಗಳನ್ನನುಸರಿಸಿ) ಶಂಕರಭಟ್ ಅವರು ಈ ಕೆಳಗಿನಂತೆ ವಿಂಗಡಿಸಿದ್ದಾರೆ೧—

12.4.3.1 ನಿಯೋಗಿಯುಕ್ತ–ಅನುಭೋಗಿಯುಕ್ತ
(ಕೊಡು, ಹಂಚು, ಮಾರು, ಗುದ್ದು ಇತ್ಯಾದಿ ಕ್ರಿಯಾಪದಗಳಿಂದ ಕೂಡಿದವು),
ಉದಾ : ರಾಣಿ ತನ್ನ ಸೇವಕರಿಗೆ ಒಂದು ಚಿನ್ನದ ಸರ ಕೊಟ್ಟಳು

12.4.3.2 ನಿಯೋಗಿಯುಕ್ತ-ಆಕರಯುಕ್ತ
(ಹಿಂಡು, ಹೆಕ್ಕು, ಅದ್ದು. ಹಾಕು ಇತ್ಯಾದಿ ಕ್ರಿಯಾಪದಗಳಿಂದೊಡಗೂಡಿದುವು)
ಉದಾ : ಆತನು ಎಳ್ಳಿನಿಂದ ಎಣ್ಣೆ ಹಿಂಡುತ್ತಿದ್ದಾನೆ.

12.4.3.3 ನಿಯೋಗಿಯುಕ್ತ–ಇತರ
(ಕಟ್ಟು. ಸೀಳು, ಹೇಳು, ಒಡೆ ಇತ್ಯಾದಿ ಕ್ರಿಯಾಪದಗಳಿಂದ ಕೂಡಿದುವು)
ಉದಾ : ನೆರೆಮನೆಯ ನಾಯಿ ಮಗುವಿನ ಕಾಲನ್ನು ಕಚ್ಚಿತು

12.4.3.4 ನಿಯೋಗಿವಿರಹಿತ–ಅನುಭೋಗಿಯುಕ್ತ
(ನಾಟು, ಎಟುಕು, ಸಲ್ಲು, ತೋರು ಇತ್ಯಾದಿ ಕ್ರಿಯಾಪದಗಳಿಂದ ಕೂಡಿದುವು)
ಉದಾ : ನರಿಗೆ ದ್ರಾಕ್ಷಿಹಣ್ಣು ಎಟುಕಿತು

12.4.3.5 ನಿಯೋಗಿವಿರಹಿತ–ಇತರ
ಕುದಿ, ಬೇಯು. ನಗು, ಒಣಗು ಇತ್ಯಾದಿ ಕ್ರಿಯಾಪದಗಳಿಂದ ಕೂಡಿದುವು)
ಉದಾ : ಪುಟ್ಟ ಮಗು ನಗುತ್ತಿದೆ.

---

೧ ನೋಡಿ : ಕನ್ನಡ ವಾಕ್ಯಗಳು (೧೯೭೮)

12.4.4 ಇಲ್ಲಿ '**ನಿಯೋಗಿ**' ಯಲ್ಲಿ ಕರ್ತೃ ಮಹತ್ವ ಪಡೆದಿರುತ್ತದೆ. ಕ್ರಿಯೆ ಮುಖ್ಯವಾಗಿ ಯಾವ ಕರ್ತೃವಿನಿಂದ ನಡೆಯುತ್ತದೆ ಅಥವಾ ನಡೆದಿದೆಯೆಂಬುದು ಇಲ್ಲಿ ಗಮನಾರ್ಹ ಅಂಶ.

ಉದಾ : **ಸಿದ್ಧಾರ್ಥನಂ** ಹೆಂಡತಿ ಮಕ್ಕಳನ್ನು ತೊರೆದನು
ಗುರುವಿನ ತಪ್ಪಿನಿಂದಾಗಿ **ಶಿಷ್ಯರು** ಪೇಚಾಡಿದರು
ಸಭೆಯ ವ್ಯವಸ್ಥಾಪಕರು **ಸ್ವಯಂಸೇವಕರ** ಮೂಲಕ ಗಲಭೆಯನ್ನು ತಡೆಯಲು ಶಕ್ತರಾದರು
**ರಂಗಾ**, ಬಿಲ್ಲಾನ ಕೈಯಿಂದ ಹುಡುಗರ ಕೊಲೆ ಮಾಡಿಸಿದನು.

ಈ ವಾಕ್ಯಗಳಲ್ಲಿ ದಪ್ಪಕ್ಷರದ ಶಬ್ದಗಳು ಕ್ರಿಯೆಗೆ ಮುಖ್ಯವಾಗಿ ಕಾರಣೀಭೂತಗಳಾದವುಗಳು.

12.4.5 '**ಅನುಭೋಗಿ**' ಎಂದರೆ ಅನುಭೋಗಿಸುವವ. ಯಾರು ಅನುಭೋಗಿಗಳಾಗಿರುತ್ತಾರೆಂಬುದನ್ನು ಸ್ಪಷ್ಟವಾಗಿ ಸೂಚಿಸುವ ವಾಕ್ಯಗಳನ್ನು ಅನುಭೋಗಿಯಲ್ಲಿ ಸೇರಿಸುತ್ತಾರೆ. ಅನುಭೋಗಿಯನ್ನು ಸೂಚಿಸುವ ಶಬ್ದವು ಸಾಮಾನ್ಯವಾಗಿ ಚತುರ್ಥಿ ವಿಭಕ್ತಿಯಲ್ಲಿರುತ್ತದೆ.

ಉದಾ : **ಪಂಕಜಳಿಗೆ** ಅವಳ ಪ್ರಿಯಕರನು ಹೂಮುಡಿಸುತ್ತಿದ್ದಾನೆ.
ತಾಯಿ **ಮಗುವಿಗೆ** ಹಾಲುಣಿಸುತ್ತಾಳೆ.
ತಂದೆಯ ಆಸ್ತಿ **ಮಗನಿಗೇ** ಬಂತು.

12.4.6 '**ಆಕರ**'ದಲ್ಲಿ ಯಾವುದೇ ಒಂದು ವಸ್ತುವಿನ ಉಪಯೋಗವಾಗುವಿಕೆಯನ್ನು ಪ್ರಸ್ತಾಪಿಸಲಾಗಿರುತ್ತದೆ. ಆ ವಸ್ತುವಿನ ಇರುವಿಕೆಯೇ ವಾಕ್ಯದಲ್ಲಿ ಮುಖ್ಯ ಕ್ರಿಯೆಯಾಗಿರುತ್ತದೆ.

ಉದಾ : ದೀಪಾವಳಿಗೆ ಒಮ್ಮೆ ಅಂಗಡಿಗೆ **ಬಣ್ಣ** ಹಚ್ಚುತ್ತಾರೆ.
ಹಳ್ಳಿಯಲ್ಲಿ **ಹೆಂಡಿ (ಸೆಗಣಿ) ಯನ್ನು** ನೆಲಕ್ಕೆ ಸಾರಿಸುತ್ತಾರೆ.
ಬೆಕ್ಕು ತನ್ನ **ಮೈಯನ್ನು** ನೆಕ್ಕುತ್ತ ಕುಳಿತಿದೆ.
ಪಾಟೀಲರ ಮನೆಯಲ್ಲಿ ದಿನಾಲು **ಟೆಲಿವ್ಹಿಜನ್** ಹಚ್ಚಿರುತ್ತಾರೆ.

12.4.7 **'ವಿಷಯಸೂಚಕ'** ವಾಕ್ಯಗಳಲ್ಲಿ ಯಾವುದೇ ಒಂದು ಸಂಗತಿ ಇಲ್ಲವೆ ಪರಿಸ್ಥಿತಿಯ ಸೂಚನೆ ಇರುತ್ತದೆ. ಕ್ರಿಯೆಗಿಂತ ವಿಷಯ ವಿವರಣೆಗೆ ಇಂತಹ ವಾಕ್ಯಗಳಲ್ಲಿ ಹೆಚ್ಚು ಮಹತ್ವವಿರುತ್ತದೆ. ವಿಷಯ ಸ್ವರೂಪವನ್ನು ಅವಲಂಬಿಸಿ ವಿದ್ವಾಂಸರು 'ವೈಷಯಿಕ' ವಾಕ್ಯಗಳನ್ನು ಆಕರವಾಚಿ, ಲಕ್ಷಣವಾಚಿ, ಸಂಬಂಧ ವಾಚಿ ಎಂದು ಮೂರು ಬಗೆಯಾಗಿ ವಿಂಗಡಿಸುತ್ತಾರೆ. ವ್ಯಕ್ತಿ, ವಸ್ತು, ಪ್ರಾಣಿ, ಇತ್ಯಾದಿಗಳ ಇರುವಿಕೆಯನ್ನು ಸೂಚಿಸುವಂತಹವು –ಆಕರವಾಚಿ, ಅವುಗಳ ಗುಣ ಧರ್ಮಗಳನ್ನು ತಿಳಿಸುವಂತಹವು– ಲಕ್ಷಣವಾಚಿ, ಅವುಗಳ ಸಂಬಂಧವನ್ನು ಸೂಚಿಸುವಂತಹವು– ಸಂಬಂಧವಾಚಿ ಎನಿಸುತ್ತವೆ.

ಉದಾ : ನನ್ನ ಪೆನ್ನು ನಿನ್ನ ಕಿಸೆಯಲ್ಲಿದೆ (ಆಕರವಾಚಿ)
ನನ್ನ ಹೆಂಡತಿ ಬಹಳ ಹಟವಾದಿ ಇದ್ದಾಳೆ (ಲಕ್ಷಣವಾಚಿ)
ಸರೋಜಿನಿ ಅವಳಿಗೆ ನಾದಿನಿಯಾಗುತ್ತಾಳೆ (ಸಂಬಂಧವಾಚಿ)

12.4.8 **'ಪ್ರೇರಕ'** ವಾಕ್ಯಗಳು ಇಸು ಎಂಬ ಪ್ರೇರಣಾರ್ಥಕ ಪ್ರತ್ಯಯ ವನ್ನುಳ್ಳ ಕ್ರಿಯಾಪದಗಳಿಂದ ಒಡಗೂಡಿರುತ್ತವೆ.

ಅವನಿಗೆ ಸರಿಯಾಗಿ ಬುದ್ಧಿ ಕಲಿಸಲು ಹೇಳಿದ್ದೇನೆ.
ವರನಿಗೆ ಸೂಟು ಹೊಲಿಸಲು ಒತ್ತಾಯಿಸುತ್ತಿದ್ದಾರೆ.

ಹೀಗೆ ವಾಕ್ಯಗಳನ್ನು ಅವುಗಳಲ್ಲಿ ಅಡಗಿರುವ ಘಟಕಗಳ ವಿಶೇಷ ಅರ್ಥಕ್ಕನುಗುಣ ವಾಗಿ ವಿಂಗಡಿಸಲಾಗಿದೆಯಾದರೂ ಅನೇಕ ಸಲ ಹಲವು ಘಟಕಗಳು ಒಂದೊಂದೇ ವಾಕ್ಯದಲ್ಲೆ ಅಳವಟ್ಟಿರಬಹುದಾಗಿದೆ.

ಉದಾ : ನಾನು ಕಡಗೋಲಿನಿಂದ ಮಜ್ಜಿಗೆ ಕಡೆಯಿಸಿ ಬೆಣ್ಣೆಯನ್ನು ಪಡೆದೆನು.

ಈ ವಾಕ್ಯದಲ್ಲಿ ನಾನು–ಅನುಭೋಗಿ; ಕಡಗೋಲಿನಿಂದ–ಆಕರ; ಮಜ್ಜಿಗೆ ಕಡೆಯಿಸು–ಪ್ರೇರಕ; ಬೆಣ್ಣೆ ಪಡೆ–ವಿಷಯ.

12.4.9 ಹೀಗೆ ವಾಕ್ಯದಲ್ಲಿಯ ಮುಖ್ಯ ಘಟಕಗಳಲ್ಲದೆ– ಕರಣ, ಹೇತು, ಕಾರಣ, ಉದ್ದೇಶ, ಸ್ಥಾನ, ಕಾಲ ಅನುನಯಿ, ಸದೃಶ ಎಂಬ ಎಂಟು ಅಮುಖ್ಯ ಘಟಕಗಳನ್ನೂ ವಿವರಿಸುತ್ತಾರೆ.

12.4.10 ವಾಕ್ಯದ ಒಟ್ಟಾರ್ಥವನ್ನು ಪರಿಗಣಿಸಿ ಪ್ರಸ್ತಾಪಿತಾರ್ಥ, ಗ್ರಹೀತಾರ್ಥ, ಸೂಚಿತಾರ್ಥ, ಧ್ವನಿತಾರ್ಥ ಎಂಬ ನಾಲ್ಕು ಬಗೆಯ ವಾಕ್ಯಗಳನ್ನು ವಿವರಿಸಲಾಗುತ್ತದೆ.

ಘಟನೆಯ ನೇರ ಪ್ರಸ್ತಾಪವಿದ್ದರೆ– ಪ್ರಸ್ತಾಪಿತಾರ್ಥ.

ಉದಾ : ನಮ್ಮ ಮನೆಯ ಆಳು ಅವನನ್ನು ಥಳಿಸಿದ್ದಾನೆ.
(ಥಳಿಸಿದ್ದು – ಪ್ರಸ್ತಾಪ)

ಗ್ರಹೀತಾರ್ಥಕ್ಕೆ ಉದಾ : ನಾನವಳನ್ನು ಮುಟ್ಟದಿದ್ದದ್ದೆ ಒಳಿತಾಯಿತು.
(ಇಲ್ಲಿ ಗ್ರಹಿತ-- ಮುಟ್ಟದಿದ್ದದ್ದು)

ಸೂಚಿತಾರ್ಥಕ್ಕೆ ಉದಾ : ಅವರ ಮನೆಗೆ ಹೆಣ್ಣು ನೋಡಲು ಹೋದಾಗ ನಮಗೆ ಚಹಾ ಮಾತ್ರ ಕೊಟ್ಟರು.
(ಇಲ್ಲಿ ಸೂಚಿತಾರ್ಥ– ಬೇರೇನನ್ನೂ ಅವರು ಕೊಡಲಿಲ್ಲ).

ಧ್ವನಿತಾರ್ಥಕ್ಕೆ ಉದಾ : ಅವನು ಮಹಾಪಂಡಿತನಿದ್ದಾನೆ.
(ಇಲ್ಲಿ ಧ್ವನಿತಾರ್ಥ– ದಡ್ಡನಿದ್ದಾನೆ.)

12.4.11 ಒಂದಕ್ಕಿಂತ ಹೆಚ್ಚು ಅರ್ಥವುಳ್ಳ ವಾಕ್ಯಗಳನ್ನು ಅನೇಕಾರ್ಥ ವಾಕ್ಯಗಳೆಂದೂ, ಅರ್ಥವು ಸಂದಿಗ್ಧವಾಗಿದ್ದರೆ ಸಂದಿಗ್ಧಾರ್ಥ ವಾಕ್ಯಗಳೆಂದೂ ಗುರುತಿಸುತ್ತಾರೆ—

ಉದಾ : ರಾಜಾರಾಮನು ನಿನ್ನೆ ಹೋಗುತ್ತೇನೆಂದು ಹೇಳಿದ್ದನು.

ಇಲ್ಲಿ ಅರ್ಥ ೧. ನಿನ್ನೆ ಹೋಗುತ್ತೇನೆಂದು ಹೇಳಿದ್ದು
" ೨. ಹೋಗುತ್ತೇನೆಂದು ನಿನ್ನೆ ಹೇಳಿದ್ದು

ಕೆಸರಿನಲ್ಲಿ ಸಿಕ್ಕ ಆನೆಯ ಮರಿ ಒದ್ದಾಡುತ್ತಿದೆ.

ಅರ್ಥ ೧. ತನ್ನ ತಾಯಿ ಸಿಕ್ಕದ್ದನ್ನು ನೆನಸಿ ಮರಿ ಒದ್ದಾಡುತ್ತಿದೆ.
" ೨. ಮರಿ ತಾನೆ ಸಿಕ್ಕು ಒದ್ದಾಡುತ್ತಿದೆ.

ಈ ಬಗೆಯ ವಾಕ್ಯಗಳಲ್ಲಿ ಅರ್ಥ ಸಂದಿಗ್ಧವಾಗಿರುವುದನ್ನು ಅನುಲಕ್ಷಿಸಬೇಕು.

12.4.12 ವಾಕ್ಯದಲ್ಲಿ ಪ್ರಯೋಗವಾದ ಕ್ರಿಯಾಪದದ ಅರ್ಥವನ್ನು ಪರಿಗಣಿಸಿ– ೧. ನಿರ್ವಾಹಕ ೨. ಪ್ರಶ್ನಾರ್ಥಕ ೩. ಸಂಭಾವನಾರ್ಥಕ ೪. ಆಶ್ಚರ್ಯಸೂಚಕ ಹಾಗೂ ೫. ವಿಧ್ಯರ್ಥಕ ಎಂದು ಐದು ಪ್ರಕಾರಗಳನ್ನು ಮಾಡಲಾಗಿದೆ.

12.4.4 ಆಧುನಿಕ ಭಾಷಾವಿಜ್ಞಾನಿಗಳು ವಾಕ್ಯವಿವರಣೆ ಮಾಡುವಲ್ಲಿ ಎರಡು ಪ್ರಮುಖ ಭಾಗಗಳನ್ನಾಗಿ ವಾಕ್ಯವನ್ನು ವಿಂಗಡಿಸುತ್ತಾರೆ. ಒಂದು–ನಾಮಪುಂಜ (*Noun Phrase*) ಎಂದು, ಇನ್ನೊಂದು–ಕ್ರಿಯಾಪುಂಜ (*Verb Phrase*) ಎಂದು.ನಾಪು (*NP*) ದಲ್ಲಿ ನಾಮಪದಗಳಿಗೆ ಸಂಬಂಧಿಸಿದ ರೂಪಗಳು ಒಳಗೊಂಡರೆ ಕ್ರಿಪು (*VP*) ದಲ್ಲಿ ಕ್ರಿಯಾಪದಗಳಿಗೆ ಸಂಬಂಧಿಸಿದ ರೂಪಗಳು ಒಳಗೊಳ್ಳುತ್ತವೆ.

ನಾನು ಒಳ್ಳೆಯ ಹುಡುಗನ ಕೈ ಹಿಡಿಯುತ್ತೇನೆ. ಈ ವಾಕ್ಯದಲ್ಲಿ–ನಾನು ಒಳ್ಳೆಯ, ಹುಡುಗನ, ಇವೆಲ್ಲ ನಾಪುದಲ್ಲಿ ಸೇರಿದರೆ, ಕೈ ಹಿಡಿಯುತ್ತೇನೆ– ಕ್ರಿಪುದಲ್ಲಿ ಸೇರುತ್ತದೆ.

**ಅನುಬಂಧ :**

ಕೇಶಿರಾಜನು ವಾಕ್ಯ ವಿಶ್ಲೇಷಣೆಗೆ ಹೆಚ್ಚಿನ ಗಮನವನ್ನು ನೀಡಿಲ್ಲ. ಅಲ್ಲಲ್ಲಿ ಅದಕ್ಕೆ ಸಂಬಂಧಿಸಿದ ವಿಚಾರಗಳು ಆನುಷಂಗಿಕವಾಗಿ ಬಂದಿವೆ. ಇಡೀ ಗ್ರಂಥದಲ್ಲಿ ೮–೧೦ ನುಡಿಗಳಲ್ಲಿ ಅಂಥವು ಅಲ್ಲಲ್ಲಿ ಸಿಗುತ್ತವೆ. (ನೋಡಿ– ಸೂ. ೧೩೩, ೧೪೮ ರಿಂದ ೧೫೬) ಅವೂ ನೇರವಾಗಿ ವಾಕ್ಯಶಾಸ್ತ್ರ ದೃಷ್ಟಿಯಿಂದ ಹೇಳಿದವುಗಳಲ್ಲ.

೧೩

---

# ಪದ ನಿಷ್ಪತ್ತಿ ಶಾಸ್ತ್ರ

13.1 ಭಾಷೆಯಲ್ಲಿ ಬಳಕೆಗೊಳ್ಳುವ ಅರ್ಥವತ್ತಾದ ಪ್ರತಿಯೊಂದು ಪದಕ್ಕೂ ಬೆಲೆ ಇದೆ. ಧ್ವನಿಸಮ್ಮಿಳನದಿಂದ ಅರ್ಥಸಂಗತಿಯಿಂದ ವ್ಯವಸ್ಥಿತವಾಗಿ ಬಳಕೆಗೊಳ್ಳುವ ಪದಗಳು ಭಾಷೆಯ ಜೀವಂತಿಕೆಯ ಮೂಲ ರಕ್ತಕಣಗಳಾಗಿವೆ. ಒಂದು ಪದಕ್ಕೆ ಎರಡು ಮುಖಗಳು. ಒಂದು ಧ್ವನಿಮುಖ ಇನ್ನೊಂದು ಅರ್ಥಮುಖ. ಧ್ವನಿಯು ಅದರ ಉಚ್ಚಾರದ ಸಂಕೇತ ಸ್ವರೂಪವನ್ನು ತಿಳಿಸುತ್ತದೆ. ಅಂಥ ಧ್ವನಿಗೆ ಅನುಕೂಲಕರವಾದ ಲಿಪಿರೂಪ ನೀಡಿ ಚಾಕ್ಷುಸ ಸಂಕೇತಗಳನ್ನಾಗಿಸಿದಾಗ ಅದು ರೂಪವನ್ನು ಪಡೆಯುತ್ತದೆ. ಇಂತಹ ಪ್ರತಿಯೊಂದು ರೂಪವನ್ನೂ ಅದರ ಇತಿಹಾಸ ಬೆಳವಣಿಗೆ ಹಾಗೂ ಅರ್ಥ ಹೊಂದಾಣಿಕೆ ಇವೆಲ್ಲವುಗಳನ್ನು ಶಾಸ್ತ್ರೀಯವಾಗಿ ವಿವರಿಸುವುದೇ ರೂಪನಿಷ್ಪತ್ತಿ ಅಥವಾ ಪದ ನಿಷ್ಪತ್ತಿಶಾಸ್ತ್ರದ ಉದ್ದೇಶ. ಪದಗಳ ರೂಪ ಮತ್ತು ಅರ್ಥಗಳು ಯಾವಾಗಲೂ ಒಂದಕ್ಕೊಂದು ಹೊಂದಿಕೊಂಡೇ ಇರುತ್ತವೆ. ಅವೆರಡೂ ಹಾಗಿದ್ದಾಗಲೇ ಭಾಷೆಯಲ್ಲಿ ಅವುಗಳಿಗೆ ಮಹತ್ವ ಇದೆ. ಇದನ್ನು ಕಾಳಿದಾಸ ಮಹಾಕವಿ "ವಾಗರ್ಥಾವಿವ ಸಂಪ್ರಕ್ತೌ ವಾಗರ್ಥಃ ಪ್ರತಿಪತ್ತಯೇ ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ" ಎಂಬ ಸುಪ್ರಸಿದ್ಧ ಶ್ಲೋಕದಲ್ಲಿ ಹೇಳಿರುವುದನ್ನು ಗಮನಿಸಬೇಕು. "ಶಕ್ತಃ ಪದಂ । ಅಸ್ಮಾತ್ ಪದಾತ್ ಅಯಂ ಅರ್ಥಃ ಬೋದ್ಧವ್ಯಃ ಇತಿ ಈಶ್ವರ ಸಂಕೇತಃ ಶಕ್ತಿಃ" ಎಂದು ತರ್ಕಸಂಗ್ರಹದಲ್ಲಿ ಹೇಳಿದೆ. ಅರ್ಥವಿಲ್ಲದ ಶಬ್ದರೂಪಗಳಿಗೆ ಏನೊಂದೂ ಮಹತ್ವ ಇಲ್ಲ. ಅರ್ಥವುಳ್ಳ ಶಬ್ದರೂಪಗಳು ಶಕ್ತಿಯುತವಾಗಿರುತ್ತವೆ. ಜ್ಞಾನದ ಸಂಕೇತವಾಗಿರುತ್ತವೆ. ಪಾರ್ವತೀಪರಮೇಶ್ವರರಂತೆ ಪರಿಶುದ್ಧವಾಗಿರುತ್ತವೆ. ಅರ್ಥ-ರೂಪಗಳನ್ನು ಅಗಲಿಸಿಡಲು ಸಾಧ್ಯವಿಲ್ಲ ಎಂಬ ಮುಂತಾದ ಅಂಶಗಳು ಇಲ್ಲಿವೆ. ಆಧುನಿಕ ಭಾಷಾ ವಿಜ್ಞಾನಿಗಳೂ ಪದಗಳ ಅರ್ಥವಿವರಣೆ, ವಿಶ್ಲೇಷಣೆಗೆ ವಿಶೇಷ

ಗಮನ ನೀಡುತ್ತಾರೆ. ಹೊಸ ಹೊಸ ಶಾಖೆಗಳಲ್ಲಿ ವೈಜ್ಞಾನಿಕ ವಿವರಣೆಯನ್ನು ನೀಡಲೆತ್ನಿಸಿದ್ದಾರೆ. ***Semantics, Lexicography, Semiotics Etimology, Topology*** ಮುಂತಾದ ವಿಭಾಗಗಳಲ್ಲಿ ಪದನಿಷ್ಪತ್ತಿಯನ್ನು ವಿವರಿಸಲಾಗತ್ತಿದೆ. ಬಹಳಷ್ಟು ಸಂಖ್ಯೆಯ ಪದಗಳು ಹುಟ್ಟು–ಬೆಳವಣಿಗೆ–ವ್ಯತ್ಯಾಸ–ಸಾವು ಇತ್ಯಾದಿ ಹಂತಗಳನ್ನು ಹೊಂದಿ ತಮ್ಮದೇ ಆದ ಇತಿಹಾಸವನ್ನು ಹೊಂದಿರುತ್ತವೆ.

13.2 ಪದಗಳ ನಿಷ್ಪತ್ತಿಯನ್ನು ಗುರುತಿಸಬೇಕಾದರೆ ಈ ಕೆಳಗಿನ ಅಂಶಗಳನ್ನು ಪರಿಗಣಿಸಬೇಕಾಗುತ್ತದೆ. ಒಂದು ಪದ ನಿಷ್ಪತ್ತಿಗೆ ಇವುಗಳಲ್ಲಿ ಕೆಲವು ಅಥವಾ ಎಲ್ಲವೂ ಸಂಬಂಧಿಸಿರಬಹುದು;

(ಅ) ರೂಪ : ೧. ಪದವಿಭಜನೆ ೨. ಪ್ರತ್ಯಯ ವಿಭಜನೆ ೩. ವ್ಯತ್ಯಾಸಗಳು.

(ಬ) ಅರ್ಥ : ೧. ಮೂಲ ೨. ಬದಲಾವಣೆ

(ಕ) ಕೋಶ : ೧. ಆಂತರಿಕ ಹಾಗೂ ಬಾಹ್ಯ ಬೆಳವಣಿಗೆಗಳು.

ಒಂದು ಪದದ ರೂಪವನ್ನು ಮೊದಲು ಗಮನಿಸಿ ಅದರಲ್ಲಿರುವ ಮೂಲ ಘಟಕಗಳನ್ನು ಗುರುತಿಸುವುದು. ಅಂದರೆ ಅದಕ್ಕಂಟಿದ ಪ್ರತ್ಯಯ ಮುಂತಾದ ಘಟಕಗಳನ್ನು ಪ್ರತ್ಯೇಕಿಸುವುದು. ಆ ಪದದ ರೂಪವಲ್ಲಿ ಉಂಟಾದ ವ್ಯತ್ಯಾಸಗಳನ್ನು ಕಂಡುಕೊಳ್ಳುವುದು. ಆ ಪದದ ಮೂಲಾರ್ಥ ಅನಂತರ ಕಾಲಕಾಲಕ್ಕೆ ಮೂಲಾರ್ಥ ಬದಲಾವಣೆಯಾಗಿದ್ದಲ್ಲಿ ಆ ವಿವಿಧ ಅರ್ಥಗಳನ್ನು ಗುರುತಿಸುವುದು. ಪದವು ಒಂದು ಭಾಷೆಯ ರಚನೆಯ ಚೌಕಟ್ಟಿನಲ್ಲಿಯೇ ಆಂತರಿಕವಾಗಿ ಬೆಳವಣಿಗೆ ಹೊಂದಿದೆಯೆ ಇಲ್ಲವೇ ಬಾಹ್ಯ ಸ್ವೀಕರಣದಿಂದಾಗಿ ಕೋಶದಲ್ಲಿ ಸೇರಿದೆಯೆ ? ಎಂಬುದನ್ನು ಗುರುತಿಸುವುದು ಹೀಗೆ ಒಂದು ಪದದ ರೂಪ–ಅರ್ಥ–ಕೋಶ ಬೆಳವಣಿಗೆಗಳಿಗೆ ಕಾರಣವಾದ ಎಲ್ಲ ಅಂಶಗಳನ್ನು ಸಾಧಾರವಾಗಿ ವಿವರಿಸುವುದೇ ಪದನಿಷ್ಪತ್ತಿ ವಿವರಣೆಯೆನಿಸುತ್ತದೆ. ಪದಗಳ ಮೂಲ ರೂಪವನ್ನು ಗುರುತಿಸಿ ಕಾಲಕಾಲಕ್ಕೆ ಅವು ಅರ್ಥ–ಕೋಶ ವಿಭಾಗಗಳಿಗೆ ಸಂಬಂಧಿಸಿ ಬೆಳವಣಿಗೆ ಹೊಂದಿದ ರೀತಿಯನ್ನು ವಿವರಣೆ ಒಳಗೊಂಡಿರುತ್ತದೆ. ಬೆಳವಣಿಗೆ ಅಥವಾ ಬದಲಾವಣೆಗೆ ಇರುವ ಕಾರಣಗಳನ್ನು ಇಲ್ಲಿ ಸೂಚಿಸಬೇಕಾಗುತ್ತದೆ.

13.3 ಇಲ್ಲಿ ಕೆಲವು ಪದಗಳ ನಿಷ್ಪತ್ತಿ ವಿಚಾರಗಳನ್ನು ಸಂಕ್ಷೇಪದಲ್ಲಿ ಕ್ರೋಢೀಕರಿಸಿದೆ. ಪದಗಳ ಬೆಳವಣಿಗೆಯ ಮುಖ್ಯಾಂಶ ಹಾಗೂ ಕಾರಣಗಳನ್ನು ಆಯಾ ಪದಗಳ ಮುಂದೆ ಅಥವಾ ವರ್ಗೀಕೃತ ಪಟ್ಟಿ ಇದ್ದರೆ ಹಿಂದೆ ಕೊಡಲಾಗಿದೆ. ಮೂಲರೂಪವನ್ನು * ಚಿಹ್ನೆಯಿಂದ ಸೂಚಿಸಿದೆ. ಕಂಸಿನಲ್ಲಿ ಯಾವ ಭಾಷಾ ಮೂಲ ಶಬ್ದ ಎನ್ನುವುದನ್ನು ಕೊಟ್ಟಿದೆ. ಇತರೆಡೆ ಮುಖ್ಯಾಂಶಗಳ ಸಂಕ್ಷಿಪ್ತ ವಿವರಣೆ ಇದೆ,

### 13.3.1 ರೂಪ ವ್ಯತ್ಯಾಸಗಳು :

೧. ಏಣಿ—*ಶ್ರೇಣಿ (ಸಂಸ್ಕೃತ)

ವಿವರಣೆ : ಕನ್ನಡದಲ್ಲಿ ಶಬ್ದಾರಂಭದಲ್ಲಿ ವ್ಯಂಜನದಿತ್ತ್ವ ಬರುವದಿಲ್ಲ. ಆದ್ದರಿಂದ ಮೂಲ ರೂಪದಲ್ಲಿರುವ 'ಶ್‌ರ್' ದ್ವಿತ್ತ್ವವನ್ನು ಲೋಪಗೊಳಿಸಿಕೊಂಡು ಏಣಿ ಎಂದು ಮಾಡಿಕೊಳ್ಳಲಾಗಿದೆ. ಇದೇ ಕಾರಣವುಳ್ಳ (ಶಬ್ದಾದಿಯ ವ್ಯಂಜನದ್ವಿತ್ತ್ವ ಲೋಪ ಮಾಡಿ ಅಥವಾ ದ್ವಿತ್ತ್ವವನ್ನು ಒಡೆದು ಬಳಸಿಕೊಂಡ) ಇತರ ಕೆಲವು ಉದಾಹರಣೆಗಳು.

೨ ಸೆಟ್ಟಿ—*ಶ್ರೇಷ್ಠಿ (ಸಂ) ಲೋಪವಲ್ಲದೆ ಶ್ > ಸ್, ಏ > ಎ ಬದಲಾವಣೆಯೂ ಇಲ್ಲಿದೆ.

೩ ಹರಣ—*ಪ್ರಾಣ (ಸಂ) ಇಲ್ಲಿ ದ್ವಿತ್ವ ಒಡೆದುದಲ್ಲದೆ ಪ್ > ಹ್, ಆ > ಅ ಬದಲಾವಣೆ ಇದೆ.

೪ ದುರುಪದಿ—*ದ್ರೌಪದಿ (ಸಂ)

೫ ಬೊಮ್ಮ—*ಬ್ರಹ್ಮ (ಸಂ) ದ್ವಿತ್ವಲೋಪವಲ್ಲದೆ ಹ್ > ಮ್ ಬದಲಾವಣೆ (ಉಚ್ಚಾರ ಸೌಲಭ್ಯಕ್ಕಾಗಿ ಸಮರೂಪಧಾರಣೆ)

೬ ದನಿ—*ಧ್ವನಿ (ಸಂ) ದ್ವಿತ್ವಲೋಪವಲ್ಲದೆ ಮಹಾಪ್ರಾಣ (ಧ್ > ದ್) ಅಲ್ಪಪ್ರಾಣವಾಗಿದೆ.

೭ ದಿಟ್ಟಿ—*ದೃಷ್ಟಿ (ಸಂ) ದ್ವಿತ್ವಲೋಪವಲ್ಲದೆ ಷ್ > ಟ್ ಬದಲಾವಣೆ (ಉಚ್ಚಾರ ಸೌಲಭ್ಯಕ್ಕಾಗಿ ಸಮರೂಪಧಾರಣೆ)

೮ ಗೌಡ—*ಗ್ರಾಮುಂಡ (ಸಂ)>ಗಾವುಂಡ>ಗೌಂಡ>ಗೌಡ

೯ ತಾಣ—*ಸ್ಥಾನ (ಸಂ) > ದ್ವಿತ್ತ್ವಲೋಪ, ಥ್ > ತ್, ನ್ > ಣ್ ಬದಲಾವಣೆ

೧೦ ಬಸವ—*ವೃಷಭ (ಸಂ) > ದ್ವಿತ್ತ್ವಲೋಪ, ಷ್>ಸ್, ಭ>ವ್ (ಪ್ರಾಕೃತ ಪ್ರಭಾವ)

೧೧ ಗಾವಿಲ—*ಗ್ರಾಮೀಣ (ಸಂ)—ದ್ವಿತ್ತ್ವಲೋಪ, ಮೀ>ವಿ, ಣ್>ಲ್ (ಪ್ರಾಕೃತ ಪ್ರಭಾವ)

೧೨ ದೋಣಿ—*ದ್ರೋಣೀ (ಸಂ) ೧೩ ಕಾರ—*ಕ್ಷಾರ (ಸಂ)

೧೪ ಗಂಟು—*ಗ್ರಂಥಿ (ಸಂ)>ಗಂಠಿ (ಪ್ರಾಕೃತ)>ಗಂಟು (ಕನ್ನಡ)

೧೫ ದಮಡಿ—*ದ್ರಮ್ಮ (ಗ್ರೀಕ)>ದಮ್ಮ (ಹಳೆಗನ್ನಡ)>ದಮಡಿ

೧೬ ಟೇಸನ್ನು—*ಸ್ಟೇಶನ್ (ಇಂಗ್ಲಿಶ್)

೧೭ ಕರಗಸ—*ಕ್ರಕಚ (ಸಂ)

13.3.1.1 ವ್ಯಂಜನದ್ವಿತ್ತ್ವ ಪದದ ಆದಿಯಲ್ಲಿ ಅಷ್ಟೇ ಅಲ್ಲದೆ ಪದ ಮಧ್ಯ ದಲ್ಲಿದ್ದರೂ ಲೋಪವಾಗುತ್ತದೆ ಇಲ್ಲವೆ ವ್ಯಂಜನಗಳ ಮಧ್ಯೆ ಸ್ವರ ಸೇರಿ (ದ್ವಿತ್ತ್ವ ಒಡೆಯುವುದರ ಮೂಲಕ) ದ್ವಿತ್ತ್ವವನ್ನು ತಪ್ಪಿಸಲಾಗುತ್ತದೆ.

೧೮ ಮುಕುತಿ—*ಮುಕ್ತಿ (ಸಂ) ೧೯ ಲಕುಮಿ—*ಲಕ್ಷ್ಮೀ (ಸಂ)
೨೦ ಪದುಮ—*ಪದ್ಮ (ಸಂ) ೨೧ ದರುಶನ—*ದರ್ಶನ (ಸಂ)
೨೨ ರಕುತ—*ರಕ್ತ (ಸಂ) ೨೩ ಅಬಕಾರಿ—*ಅಬ್ಕಾರಿ (ಫಾರಸಿ)
೨೪ ಬುರುಜು-*ಬುರ್ಜ್(ಅರಬ್ಬೀ) ೨೫ ಚಮಟಿಗೆ—*ಚರ್ಮಯಷ್ಟಿ (ಸಂ)
೨೬ ಸಬುದ—*ಶಬ್ದ (ಸಂ)

13.3.1.2 ವಿಜಾತಿ ದ್ವಿತ್ತ್ವಗಳು ಸಜಾತಿ ದ್ವಿತ್ತ್ವಗಳಾಗಿ ಮಾರ್ಪಡುತ್ತವೆ.

೨೭ ಬಿತ್ತರ—*ವಿಸ್ತಾರ (ಸಂ) ೨೮ ನಿದ್ದೆ—*ನಿದ್ರಾ (ಸಂ)
೨೯ ಹಬ್ಬ—*ಪರ್ವ (ಸಂ) ೩೦ ಹೆಗ್ಗಡೆ—*ಪೆರ್ಗಡೆ
೩೧ ನಿಚ್ಚಳ—*ನಿಶ್ಚಲ (ಸಂ) ೩೨ ಅಗ್ಗಿ—*ಅಗ್ನಿ (ಸಂ)

೩೩ **ಉಣ್ಣೆ**—*ಊರ್ಣ (ಸಂ)
೩೪ **ಹೊತ್ತಗೆ**—*ಪುಸ್ತಕ (ಸಂ)
೩೫ **ಕತ್ತೆ**—ಕರ್ತೆ-*ಕಱ್ತೆ
೩೬ ಗದ್ದೆ—ಗರ್ದೆ-*ಗಱ್ದೆ
೩೭ **ಕಪ್ಪು**—*ಕರ್ಪು
೩೮ **ಸೊಕ್ಕು**—*ಸೊರ್ಕು
೩೯ **ಕಿಚ್ಚು**—*ಕಿರ್ಚು
೪೦ **ಕಪ್ಪುರ**—*ಕರ್ಪುರ (ಸಂ)
೪೧ **ಉಜ್ಜುಗ**—*ಉದ್ಯೋಗ (ಸಂ)

13.3.1.3 ಅನ್ಯಭಾಷಾ ಪದಗಳಲ್ಲಿ ಇರುವ ಕೆಲವು ವರ್ಣಗಳು ಕನ್ನಡದಲ್ಲಿರುವ ವರ್ಣಗಳಾಗಿ ಪರಿವರ್ತನೆಗೊಳ್ಳುವುದು ಸಹಜ. ಉದಾಹರಣೆಗೆ ಷ್, ಶ್ ಗಳು ಕನ್ನಡದಲ್ಲಿ ಸ್ ಆಗುತ್ತವೆ. (ಇದೇ ರೀತಿ ಕನ್ನಡ ಭಾಷಾ ರಚನೆಯ ದೃಷ್ಟಿಯಿಂದ ಪದಗಳಲ್ಲಿ ಸೇರಿದ ವರ್ಣಗಳ ಬಗೆಗೆ ನೋಡಿ ಸ್ವೀಕರಣ 6.11)

13.3.1.4 ಕೆಲವು ಪದಗಳು ನೇರವಾಗಿ ಸಂಸ್ಕೃತದಿಂದ ಕನ್ನಡಕ್ಕೆ ಬಾರದೆ ಪ್ರಾಕೃತ ಮೂಲಕ ಬಂದಿವೆ.

೪೨ ಸಡಿಲ—ಸಢಿಲೋ (ಪ್ರಾ)—*ಶಿಥಿಲ (ಸಂ)
೪೩ ಆಣೆ—ಆಣಾ (ಪ್ರಾ)—*ಆಜ್ಞಾ (ಸಂ)
೪೪ ದಾಡೆ—ದಾಢಾ (ಪ್ರಾ)—*ದಂಷ್ಟ್ರಾ (ಸಂ)
೪೫ ಒಕ್ಕಣೆ—ಒಕ್ಖಾಣ (ಪ್ರಾ)—*ವ್ಯಾಖ್ಯಾನ
೪೬ ಅಸಡ್ಡೆ—ಅಸಡ್ಢಾ (ಪ್ರಾ)—*ಅಶ್ರದ್ಧಾ
೪೭ ಅಜ್ಜ—ಅಜ್ಜ (ಪ್ರಾ) *ಆರ್ಯ (ಸಂ)
೪೮ ಕಜ್ಜ—ಕಜ್ಜ (ಪ್ರಾ) *ಕಾರ್ಯ (ಸಂ)
೪೯ ನೆಪ—ನೆಪ (ಪ್ರಾ) *ನಿಭ (ಸಂ)
೫೦ ವಂಕ—ವಂಕ (ಪ್ರಾ) *ವಕ್ರ (ಸಂ)
೫೧ ಕುಪ್ಪಸ—ಕುಪ್ಪಿಸೊ (ಪ್ರಾ) *ಕೂರ್ಪಾಸ (ಸಂ)
೫೨ ತೋಲ/ತೋರ—ಥೋರೊ (ಪ್ರಾ) *ಸ್ಥೂಲ (ಸಂ)

ಸ್ವರಗಳಲ್ಲಿ ಕೆಲವು ಬದಲಾವಣೆಗಳು ಕಂಡು ಬರುತ್ತವೆ :

೫೩ **ಉಂಗುಟ**—*ಅಂಗುಷ್ಟ (ಅ>ಉ)
೫೪ **ಮಾಲೆ**—ಮಾಲಾ (ಆ>ಎ) ಇದರಂತೆ ಕಲಾ–ಕಲೆ, ಬಾಲಾ–ಬಾಲೆ ಶಾಲಾ–ಶಾಲೆ, ಕಮಲಾ–ಕಮಲೆ, ಕನ್ಯಕಾ–ಕನ್ನಿಕೆ.

೫೫ ದೇವಸ—*ದಿವಸ (ಸಂ) (ಇ>ಎ), ೫೬ ನೇಮ—*ನಿಯಮ (ಸಂ)
೫೭ ಕೆಡು—*ಕಿಡು (ಕ) ೫೮ ಎಲೆ—*ಇಲೈ (ತ)
೫೯ ಹೊಗೆ—*ಪುಗೈ (ತ) (ಉ>ಒ) ೬೦ ತೊಗಲು—*ತುವಲ್ (ತ)
೬೧ ಮೊದಲು—*ಮುದಲ್ (ತ) ೬೨ ಮೊಳೆ—*ಮುಳೈ (ತ)

ವ್ಯಂಜನಗಳಲ್ಲಿ ಆಗುವ ಬದಲಾವಣೆಗಳು :
ಕ್, ಚ್, ಟ್, ತ್, ಪ್, ಗಳು ಗ್, ಜ್, ಡ್, ದ್, ಹ್ ಆಗುತ್ತವೆ.

೬೩ ಆಗಸ—*ಆಕಾಶ (ಸಂ) ೬೪ ಸೂಜಿ—*ಸೂಚೀ (ಸಂ)
೬೫ ಕಡಗ—*ಕಟಕ (ಸಂ) ೬೬ ಬಸದಿ—*ವಸತಿ (ಸಂ)
೬೭ ಹರಕೆ—*ಪರಕೆ (ಕ) ೬೮ ಹೆಸರು—*ಪೆಸರು (ಕ)
೬೯ ಬನ—*ವನ (ಸಂ) (ವ್>ಬ) ೭೦ ಬಾವಿ—*ವಾಪಿ (ಸಂ) (ಪ್>ವ್)

13.2 ಧ್ವನಿ ಅಥವಾ ರೂಪ ವ್ಯತ್ಯಾಸಗಳಿಗೆ–ಭಾಷಾ ರಚನೆಯ ಹೊಂದಾಣಿಕೆ ಸೌಲಭ್ಯಾಕಾಂಕ್ಷೆಗಳನ್ನು ಕಾರಣಗಳೆಂದು ಸಾಮಾನ್ಯವಾಗಿ ಹೇಳಬಹುದು. ಕೆಲವು ಸಲ ಯಾವ ನಿರ್ದಿಷ್ಟ ಕಾರಣವನ್ನೂ ಇವುಗಳಿಗೆ ಹೇಳಲು ಬರುವುದಿಲ್ಲ. ಮೂಲ ಅಥವಾ ಅನ್ಯ ಭಾಷೆಗಳಲ್ಲಿ ನಡೆದ ನಿರ್ದಿಷ್ಟ ಭಾಷಾ ಬೆಳವಣಿಗೆಯೂ ಇದಕ್ಕೆ ಕಾರಣವಾಗಬಹುದು. ಉದಾಹರಣೆಗೆ– ದಕ್ಷಿಣ ದ್ರಾವಿಡ ಭಾಷೆಗಳಲ್ಲಿ ಪ್ರಾಚೀನ ಕಾಲದಲ್ಲಿಯೇ ಶಬ್ದಾದಿಯ ಚ್ ಕಾರ ಸ್ ಕಾರವಾಯೂ, ಲೋಪವಾಗಿಯೂ ಬೆಳವಣಿಗೆ ಹೊಂದಿತ್ತು. ಕನ್ನಡವು ಅದನ್ನುಳಿಸಿಕೊಂಡು ಬಂದಿದೆ.

ಉದಾ : ೭೧ ಉಪ್ಪು—*ಚುಪ್ (ಮೂಲ ದಕ್ಷಿಣ ದ್ರಾವಿಡ)
೭೨ ಐದು—*ಚೈಂದು ( ,, ,, ,, )
೭೩ ಅವಲಕ್ಕಿ–*ಚವಲ್ ( ,, ,, ,, )
೭೪ ಸೀರೆ—*ಚೀರ್ ( ,, ,, ,, )

13.3 ವ್ಯಂಜನ ಪಲ್ಲಟ, ಸ್ವರಾನುರೂಪ್ಯತೆ, ಸ್ವಚ್ಛಂದಪರಿವರ್ತನೆ ಮುಂತಾದ ಕಾರಣಗಳಿಂದಲೂ ರೂಪವ್ಯತ್ಯಾಸ ಕಂಡುಬರುತ್ತದೆ. ಉದಾ–

೭೫ ಹೌದು—*ಅಪ್ಪುದು—ಅಹುದು (ವರ್ಣಪಲ್ಲಟ) ಇದರಂತೆ ಹಾಸ, ಹಾಳ, ಹಾರ (ಕಲಬುರ್ಗಿ ಕನ್ನಡದಲ್ಲಿ)

೭೬ ಹೇಗೆ—*ಎಹಗೆ (ವರ್ಣಪಲ್ಲಟ), ಹೀಗೆ—*ಇಹಗೆ, ಹಾಗೆ—*ಅಹಗೆ

೭೭ ಹಸುರು—*ಪಚಿರ್ (ಸ್ವರಾನುರೂಪ್ಯತೆ)
ಇದರಂತೆ ಬಸುರು—*ಬಸಿರ್, ಉಸುರು—*ಉಸಿರ್.

೭೮ ಅಗಸ—ಅಸಗ, ಕಾಗದ—ಕಾದಗ, ಉರಪಾಟಿ—ಉಪರಾಟಿ, ಹೊಟ್ಟೆ ಕಿಚ್ಚು—ಹೊಚ್ಚೆ ಕಿಟ್ಟು, ಚೇಳು—ತೇಳು, ಚೆಂದುಟಿ—ಕೆಂದುಟಿ ಮುಂತಾದವುಗಳಲ್ಲಿ ವರ್ಣಗಳ ಸ್ವಚ್ಛಂದ ಪರಿವರ್ತನೆ ಕಂಡುಬರುತ್ತದೆ.

೭೯ ವಿಜಾತಿ ವ್ಯಂಜನಗಳು ಸಜಾತಿ ವ್ಯಂಜನಗಳಾಗಿ ದ್ವಿತ್ವಗಳಲ್ಲಿ ಸಮರೂಪ ಧಾರಣೆಗೊಳ್ಳುತ್ತವೆ. ಉದಾ- ಕತ್ತೂರಿ—*ಕಸ್ತೂರಿ (ಸಂ) ಗದ್ದೆ—*ಗರ್ದೆ, ಕತ್ತೆ—*ಕರ್ತೆ ಇತ್ಯಾದಿ.

೮೦ ಸೌಲಭ್ಯಾಕಾಂಕ್ಷೆಯಿಂದಾಗಿ ಕೆಲವು ಸಲ ಸಾದೃಶ್ಯಾಕ್ಷರ ಲೋಪವಾಗುತ್ತದೆ ಅಥವಾ ರೂಪ ಸಂಕ್ಷೇಪಗೊಳ್ಳುತ್ತದೆ—
ಪರ್ರಾಬಾದ—*ಫರಹತಾಬಾದ್ (ಉರ್ದು) ವಿರಾಜಪೇಟೆ—*ವೀರರಾಜಪೇಟೆ, (ಅಕ್ಷರಲೋಪ) ದುರ್ಗ—*ಚಿತ್ರದುರ್ಗ (ಸಂಕ್ಷೇಪ) ಹೊಂಗಲ-*ಬೈಲಹೊಂಗಲ (ಸಂಕ್ಷೇಪ)

81 ತಪ್ಪು ಕಲ್ಪನೆ ಅಥವಾ ತಪ್ಪು ಸಾಹಚರ್ಯದಿಂದಾಗಿ ಕೆಲವು ಪದಗಳಲ್ಲಿ ರೂಪ ವ್ಯತ್ಯಾಸವಾಗುತ್ತವೆ. ಉದಾ :

81.1 ಅಸುರ ಎಂದರೆ ಈಗ ರಾಕ್ಷಸ ಎಂಬರ್ಥವಿದೆ. ವಾಸ್ತವಿಕವಾಗಿ ಅದು ಅಸು (ಪ್ರಾಣಕ್ಕೆ)+ರ (ರಕ್ಷಣೆ ನೀಡುವವ) ಎಂಬರ್ಥವುಳ್ಳದ್ದು. ಅದಕ್ಕೆ ತಪ್ಪು ಕಲ್ಪನೆಯಿಂದ ಅ+ಸುರ. ದೇವತೆ ಅಲ್ಲದವ ಎಂಬರ್ಥವನ್ನು ಕಲ್ಪಿಸಲಾಯಿತು. ಅ+ಗುರು (ಹೆಚ್ಚು ಅಲ್ಲದ್ದು)+ಬೆಚ್ಚಗೆ ಎಂಬುದನ್ನು ಉಗುರು ಬೆಚ್ಚಗೆ ಎಂದು ತಪ್ಪು ಕಲ್ಪನೆಯಿಂದ (*Contamination*) ರೂಪ ಬದಲಾವಣೆ ಆಗಿದೆ. ಮಧ್ಯಾಹ್ನ ಇದನ್ನು ಮಧ್ಯಾನ್ಹ ಎಂದೂ ಆಹ್ವಾನ ಇದನ್ನು ಆವ್ಹಾನ ಎಂದೂ ತಪ್ಪಾಗಿ ಬರೆಯುವುದುಂಟು.

81.2 ತಪ್ಪು ಕಲ್ಪನೆಯಿಂದ ಕೆಲವು ಪ್ರತ್ಯಯಗಳನ್ನು ಬಳಸುತ್ತಾರೆ. ಉದಾಹರಣೆಗೆ ಆಕಳು ಎಂದರೆ ಅವು+ಕಳ್-ಹಸುಗಳು ಕಳ್ ಎಂಬ ಬಹುವಚನ ಪ್ರತ್ಯಯ

ಇಲ್ಲಿ ಮೊದಲೇ ಇದ್ದರೂ 'ಆಕಳುಗಳು' ಎಂದು 'ಗಳು' ಬಹುವಚನ ಪ್ರತ್ಯಯ ವನ್ನು ಮತ್ತೆ ಹಚ್ಚುತ್ತಾರೆ. ಇದರಂತೆ ಗುರುಗಳವರು, ಅವರುಗಳು ಇಂಥ ರೂಪಗಳಿವೆ.

81.3 ತಪ್ಪು ಕಲ್ಪನೆಯಿಂದ ಕೇವಲ ರೂಪ ವ್ಯತ್ಯಾಸ-ಅರ್ಥ ವ್ಯತ್ಯಾಸವಷ್ಟೇ ಅಲ್ಲ ವ್ಯಾಕರಣಾತ್ಮಕ ವ್ಯತ್ಯಾಸಗಳೂ ಆಗುವುದುಂಟು. ಉದಾಹರಣೆಗೆ ಕನ್ನಡ ದಲ್ಲಿ 'ಇಸು' ಎಂಬ ಪ್ರೇರಣಾರ್ಥಕ ಪ್ರತ್ಯಯ ಇದೆ. ಸಾಮಾನ್ಯವಾಗಿ 'ಇಸು' ಪ್ರತ್ಯಯ ಧಾತು ರೂಪಗಳಿಗೆ ಅನ್ವಯವಾಗುವುದನ್ನು ವ್ಯಾಕರಣ ಹೇಳುತ್ತದೆ. ಆದರೆ ನಾಮರೂಪಗಳಿಗೆ ಅದರಲ್ಲೂ ಕನ್ನಡದ ಈ ಪ್ರತ್ಯಯವನ್ನು ಅನ್ಯಭಾಷಾ ನಾಮರೂಪಗಳಿಗೆ ಅನ್ವಯಿಸುವುದು ವ್ಯಾಕರಣಾತ್ಮಕ ವ್ಯತ್ಯಾಸವೆನಿಸುತ್ತದೆ. ಉದಾ– ಓಡಿಸು, ನಿಲ್ಲಿಸು, ತಿನ್ನಿಸು ಇತ್ಯಾದಿ ಸಹಜ ಕನ್ನಡ ಪದಗಳು. ವ್ಯಾಕರಣಾತ್ಮಕ ವ್ಯತ್ಯಾಸ ಹೊಂದಿದ ಪದಗಳು :

ಅಂಟು+ಇಸು=ಅಂಟಿಸು, ವಚನ+ಇಸು=ವಚನಿಸು,
ಚಿತ್ರ+ಇಸು=ಚಿತ್ರಿಸು, ಪ್ರಕಾಶ+ಇಸು=ಪ್ರಕಾಶಿಸು,
ಗುಜರ+ಇಸು=ಗುಜರಾಯಿಸು.

82.4 ಅಪ, ಉಪ, ದುರ್, ನಿರ್, ನಿ, ದುಸ್, ನಿಸ್ ಮುಂತಾದ ಉಪಸರ್ಗಗಳು ಸಂಸ್ಕೃತದಲ್ಲಿ ಪದಗಳ ಆದಿಯಲ್ಲಿ ಅನ್ವಯವಾಗುತ್ತವೆ. (ಉಪಕಾರ, ಅಪಕಾರ, ದುರ್ಜನ, ನಿರಾಯಾಸ, ನಿಬಂಧ) ಇವು ಕನ್ನಡದಲ್ಲಿ ಇಲ್ಲ. ಆದರೆ ಸಂಸ್ಕೃತದ ಮಾದರಿಯಲ್ಲಿ ಅವನ್ನು ಕನ್ನಡ ಪದಗಳಿಗೆ ಅನ್ವಯಿ ಸುವುದು ವ್ಯಾಕರಣಾತ್ಮಕ ವ್ಯತ್ಯಾಸ ಎನಿಸುತ್ತದೆ. ಉದಾ : ದುರ್+ನಾತ= ದುರ್ನಾತ, ಉಪ+ಗುಂಪು, ನಿರ್+ಭಿಡೆ=ನಿರ್ಭಿಡೆ, ನಿರ್+ಬಯಲು= ನಿರ್ಬಯಲು, ನಿರ್+ಉಮ್ಮಳ=ನಿರಂಬಳ, ಅಪ+ನಂಬಿಕೆ=ಅಪನಂಬಿಕೆ.

81.5 ಕನ್ನಡದಲ್ಲಿ ಇಲ್ಲದ ಸಂಸ್ಕೃತದ ವಿಸರ್ಗವನ್ನು ಕನ್ನಡದಲ್ಲಿ ತಪ್ಪು ಕಲ್ಪನೆ ಯಿಂದ ಬಳಸುವುದೂ ಉಂಟು.

ಪುನಃ+ರಚನೆ ಇದು ಪುನಾರಚನೆ ಆಗಬೇಕು. ಆದರೆ 'ಪುನರ್ರಚನೆ' ಎಂದು ತಪ್ಪಾಗಿ ಬಳಸಲಾಗುತ್ತದೆ.

ಮನಸ್+ಸ್ಥಿತಿ ಇದು ಮನಃಸ್ಥಿತಿ ಅಥವಾ ಮನಸ್ಥಿತಿ ಆಗಬಹುದು. ಆದರೆ ಅದನ್ನು 'ಮನೋಸ್ಥಿತಿ' ಎಂದು ತಪ್ಪಾಗಿ ಬಳಸಿದೆ. ಅಂತರ್+ರಾಷ್ಟ್ರೀಯ 'ಅಂತಾರಾಷ್ಟ್ರೀಯ' ಎಂದರೆ ಸರಿ. 'ಅಂತರ್ರಾಷ್ಟ್ರೀಯ' ಎಂದು ತಪ್ಪಾಗಿ ಬಳಸುತ್ತಾರೆ. ಹೀಗೆಯೇ 'ಮನರಂಜನೆ' ಇದನ್ನು 'ಮನೋರಂಜನೆ' ಎಂದು ತಪ್ಪಾಗಿ ಬಳಸುತ್ತಾರೆ. ಉಪ+ಆಹಾರ ಇದು ಉಪಾಹಾರ ಎಂದರೆ ಸರಿ. 'ಉಪಹಾರ' ತಪ್ಪು. ಫಲ+ಆಹಾರ=ಫಲಾಹಾರ ಆಗುತ್ತದೆ. ಆದರೆ 'ಫಲಹಾರ' ಎಂಬುದು ತಪ್ಪು. ಫಲಾಹಾರ ಆಡುನುಡಿಯಲ್ಲಿ 'ಫರಾಳ' ಆಗಿದೆ.

81.6 ಇನ್ನೂ ಕೆಲವು ರೂಪಗಳು ಕನ್ನಡದಲ್ಲಿ ತಪ್ಪು ಕಲ್ಪನೆಯಿಂದ ಬಳಕೆಗೊಳ್ಳುತ್ತಿವೆ. ಸುಶಿಕ್ಷಿತರೂ ಇಂತಹ ತಪ್ಪು ರೂಪಗಳನ್ನು ಬಳಸುವುದುಂಟು ಉದಾಹರಣೆಗೆ ಸಂಸ್ಕೃತದಲ್ಲಿನ ಪ್ರಾಮುಖ್ಯ, ವೈಶಿಷ್ಟ್ಯ, ಔನ್ನತ್ಯ, ಔದ್ಧತ್ಯ ಮುಂತಾದ ಪದಗಳು ಕನ್ನಡಕ್ಕೆ ಬಂದಿವೆ. ಇವುಗಳಲ್ಲಿ ತದ್ಧಿತ ಪ್ರತ್ಯಯಗಳನ್ನು ತಪ್ಪಾಗಿ ಅನ್ವಯಿಸಿ— ವೈಶಿಷ್ಟ್ಯತೆ, ಪ್ರಾಮುಖ್ಯತೆ ಎಂಬುದಾಗಿ ತಪ್ಪುರೂಪಗಳನ್ನು ಸೃಷ್ಟಿಸಿದ್ದಾರೆ.

81.7 ತಪ್ಪು ಕಲ್ಪನೆಯಿಂದ ದ್ವಿರುಕ್ತಿರೂಪಗಳಲ್ಲೂ ವಿಸ್ತಾರಗಳಾಗಿವೆ.

ಉದಾಹರಣೆಗೆ– ಗೇಟಬಾಗ್ಲ, ಛಪ್ಪನ್ನೈವತ್ತಾರು, ಹಸೀವದ್ದೆ, ಕತ್ತಲರಾತ್ರಿ, ಎಣ್ಣೆಜಿಡ್ಡು. ಪಚ್ಚೆಹಸಿರು, ತಂಗಳನ್ನ, ಹೆಂಗೂಸು.

81.7.1 ಬಚ್ಚಲು—

'ಪೊಚ್ಚ' ಎಂದರೆ ಪ್ರವಾಹ. ಹಳಗನ್ನಡದಲ್ಲಿ ಬಾಂಬೊಚ್ಚ ಎಂಬ ಪದ ವೊಂದಿದ್ದು ಆಕಾಶಗಂಗೆಯನ್ನು ಸೂಚಿಸುತ್ತದೆ. 'ಇಲ್' ಎಂದರೆ ಮನೆ. ಇಲ್+ಪೊಚ್ಚ ಮನೆಯಿಂದ ಹರಿಯುವ ನೀರಿನ ಪ್ರವಾಹ. ಇದು ಪೊಚ್ಚ+ ಇಲ್>ಪೊಚ್ಚಿಲ್ >ಬೊಚ್ಚಿಲ್>ಬಚ್ಚಲ್ >ಬಚ್ಚಲು ಎಂದು ಬೆಳವಣಿಗೆಗೊಂಡಿತು. ಹಿತ್ತಲು < ಪಿಂತ್ + ಇಲ್; ಹೊಸ್ತಿಲು < ಪೊಸತು+ಇಲ್, ಬಾಗಿಲ್<ವಾ+ಕ್ಇಲ್ ಆಗುವಂತೆ ಪೊಚ್+ಇಲ್>ಬಚ್ಚಲು ಆಗಿದೆ.

81.7.2 ಕೂಡಲ ಸಂಗಮ—

'ಕೂಡಲ' ಎಂದರೆ ಸೇರುವುದು. ಎರಡು ಅಥವಾ ಹಲವು ನದಿಗಳು ಸೇರುವ ಸ್ಥಳವನ್ನು 'ಕೂಡಲ' ಎನ್ನುತ್ತಾರೆ. ಇದೇ ಅರ್ಥವನ್ನು 'ಸಂಗಮ' ಪದವೂ ಹೊಂದಿದೆ. 'ಸಂಗಮ' ಎಂದರೆ ಸಮಾಗಮ, ಸೇರುವಿಕೆ. 'ಕೂಡಲ ಸಂಗಮ' ಎಂಬುದು ದ್ವಿರುಕ್ತಿಪದ. ತಪ್ಪು ಕಲ್ಪನೆಯಿಂದ ಒಂದೇ ಅರ್ಥವುಳ್ಳ ಎರಡು ಬೇರೆ ಬೇರೆ ಪದಗಳನ್ನು ಇಲ್ಲಿ ಜೋಡಿಸಿ ಬಳಸಲಾಗಿದೆ. ಕನ್ನಡದಲ್ಲಿ ಇಂಥ ಅನೇಕ ದ್ವಿರುಕ್ತಿಗಳು ಬಳಕೆಯಾಗುತ್ತವೆ. ಕೆಲವು ಹೀಗಿವೆ—

ಹಣ್ಣುಹಂಪಲ, ಕೆಲಸಕಾರ್ಯ, ಹಳದಿಪಿತಾಂಬರ, ಆಕಳಗೋಮೂತ್ರ, ನಡುಮಧ್ಯ, ಸರಮಾಲೆ, ತರುಮರ. ಛಪ್ಪನ್ನೈವತ್ತಾರು, ಬಂಧುಬಳಗ, ಆಸೇತುಹಿಮಾಚಲ, ಸಕುಟುಂಬಪರಿವಾರ, ನರಮಾನವ, ರೋಗರುಜೆ. ಕಾಳ ಕೂಟವಿಷ, ಹರಿನಾರಾಯಣ, ಶಂಭೋಶಂಕರ, ವಾಸ್ತವಸತ್ಯ, ಕನ್ಯಾಕುಮಾರಿ, ಹೆಣ್ಣುಮಗಳು, ಸತ್ತಹೆಣ, ಎಳ್ಳೆಣ್ಣೆ. ತಿಂಡಿತಿನಿಸು, ರಹದಾರಿ (ರಹ=ರಾಹ) (ಹಿಂದಿ)

82 ಭಾಷಾಸಂಸರ್ಗದಿಂದ ಅನೇಕ ಪದಗಳು ತಮ್ಮ ಮೂಲರೂಪಗಳನ್ನು ಬದಲಿಸಿಕೊಳ್ಳುವವು. ಉದಾಹರಣೆಗೆ ಮರಾಠಿಭಾಷಾ ಪ್ರಭಾವದಿಂದ ಉತ್ತರ ಕರ್ನಾಟಕದ ಕನ್ನಡದಲ್ಲಿ 'ಏನು' ಎಂಬ ರೂಪ 'ಯಾನು', ಚೆಲ್ವು–'ಚೆಲು' ರೂಪ 'ಛಲೋ'; ಚಂದ ರೂಪ 'ಛಂದ'; ಅಹುದು–'ಹೌದು' ಎಂಬ ರೂಪ 'ಹೈಂದ' ಎಂದು ಬದಲಾಗಿವೆ.

.4 **ಅರ್ಥವ್ಯತ್ಯಾಸ ಹಾಗೂ ಬೆಳವಣಿಗೆ :**

4.0 ಪದಗಳ ಅರ್ಥಗಳಿಗೆ ಸಂಬಂಧಿಸಿ ಅನೇಕ ಬದಲಾವಣೆಗಳು ಬೆಳವಣಿಗೆ ಗಳು ಭಾಷೆಯಲ್ಲಿ ಕಂಡುಬರುವುದು ಸಾಮಾನ್ಯ. ಅಂತಹ ಕೆಲವು ಮಹತ್ವದ ಅಂಶಗಳನ್ನಿಲ್ಲಿ ನೀಡಲಾಗಿದೆ.

4.84 **ಅರ್ಥಸಂಕೋಚ :** ಒಂದು ಪದ ಮೂಲದಲ್ಲೊಂದು ಅರ್ಥವನ್ನು ಹೊಂದಿದ್ದು ಕಾಲಾನುಕ್ರಮದಲ್ಲಿ ವಿಶಾಲಾರ್ಥವನ್ನು ಕಳೆದುಕೊಂಡು ಸೀಮಿತ ಅರ್ಥವನ್ನು ಹೊಂದಬಹುದು. ಉದಾಹರಣೆಗೆ– 'ಕಬ್ಬಿಣ', ಕಬ್ಬಿಣ ಎಂದರೆ ಮೂಲತಃ ಕರ್+ಪೊನ್ > ಕಬ್ಬೊನ್ ಎಂದರೆ ಕಪ್ಪು ಬಂಗಾರ. ಸಂಸ್ಕೃತದ

ಸಂಸ್ಥಾ. ಕನ್ನಡದಲ್ಲಿ 'ಸಂತೆ' ಆಗಿದೆ. ಆದರೆ 'ಸಂಸ್ಥೆ' ಎಂಬ ರೂಪವೂ ಉಳಿದು ಕೊಂಡು ಬಂದು 'ಸಂಸ್ಥಾ' ಪದದಿಂದ ಎರಡು ಪದರೂಪಗಳು ಬಳಕೆಗೆ ಬಂದಂತಾದವು. ಇದರಿಂದ ಅರ್ಥವ್ಯತ್ಯಾಸವು ಪದ ನಿಷ್ಪತ್ತಿ–ಬೆಳವಣಿಗೆಗೆ ಕಾರಣವಾಯಿತು. ಇದರಂತೆ 'ಯಾತ್ರಾ' ಪದದಿಂದ ಯಾತ್ರೆ (ತೀರ್ಥಕ್ಷೇತ್ರ ಸಂಚಾರ), ಜಾತ್ರೆ (ದೇವರ ಉತ್ಸವ) ಎಂಬ ಪದಗಳು ಬಳಕೆಗೆ ಬಂದವು.

4.85 **ಹೀನಾರ್ಥಪ್ರಾಪ್ತಿ** : ಎಷ್ಟೋಪದಗಳು ತಮ್ಮ ಮೂಲದ ಅರ್ಥ ವನ್ನು ಕಳೆದುಕೊಂಡು ಹೀನ ಅರ್ಥವನ್ನು ಪಡೆದುಕೊಂಡ ಉದಾಹರಣೆ ದೊರೆ ಯುತ್ತವೆ. 'ಅಗ್ಗ' ಎಂಬ ಪದವು 'ಅರ್ಘ್ಯ' ಎಂಬ ಸಂಸ್ಕೃತ ಪದದಿಂದ ಬಂದುದು. ಸಂಸ್ಕೃತದಲ್ಲಿ ಆದರರ್ಥ ಶ್ರೇಷ್ಠ ಎಂಬುದು. ಕನ್ನಡದಲ್ಲಿ ಅದು 'ಅಗ್ಗ' ವಾಯಿತು. 'ತಂಗುಳ' ಪದ (ತಣ್+ಕೂಳ್) ತಣ್ಣನೆಯ ಕೂಳು (ಆಹಾರ) ಎಂಬ ಸಾಮಾನ್ಯ ಅರ್ಥವನ್ನು ಹೊಂದಿದ್ದು ಈಗ ಅದು ಹೀನ ಅರ್ಥವನ್ನು ಪಡೆದು, ಕೂಳು ಎಂದರೆ ಶ್ರೇಷ್ಠವಲ್ಲದ ಆಹಾರ ಎಂಬುದಾಗಿ ಬಳಕೆಯಾಗು ತ್ತಿದೆ. 'ಟೀಕೆ' ಎಂಬ ಪದ ವಿವರಣೆ ಎಂಬ ಉತ್ತಮ ಅರ್ಥ ಹೊಂದಿತ್ತು. 'ಟೀಕೆ' ಎಂದರೆ ವ್ಯಂಗ್ಯಪೂರಿತ ವಿಮರ್ಶೆ ಎಂಬ ಹೀನಾರ್ಥವನ್ನು ಪಡೆದಿದೆ. 'ಗಾಂಧಿಕಟ್' (ಬೋಳು ತಲೆ), 'ಗಾಂಧಿಕ್ಲಾಸ' (ಮೂರನೇ ವರ್ಗ) 'ಕಾಂಗ್ರೆಸ ಕಸ' (ಪಾರ್ಥೇನಿಯಂ ಹುಲ್ಲು). 'ದೀಡ ಪಂಡಿತ' ಈ ಪದಗಳಲ್ಲಿ ಗಾಂಧಿ, ಕಾಂಗ್ರೆಸ್, ಪಂಡಿತ ಇವು ಹೀನಾರ್ಥ ಪಡೆದಿವೆ 'ಪೆದ್ದ' ಎಂದರೆ ಮೂಲತಃ ಜಾಣ ಎಂದರ್ಥ. ಈಗ ಪೆದ್ದ ಎಂದರೆ ದಡ್ಡ ಎಂಬ ಹೀನಾರ್ಥವುಂಟಾಗಿದೆ.

4,86 ಪದಗಳು ಹೀನಾರ್ಥವನ್ನು ಹೊಂದುವಂತೆ ವಿಶಾಲಾರ್ಥವನ್ನು ಉತ್ತ ಮಾರ್ಥವನ್ನೂ ಪಡೆಯಬಹುದು. ಉದಾಹರಣೆಗೆ 'ಬೆಳೆ' ಎಂಬ ಪದ ನಾಮ ಪದವೂ ಕ್ರಿಯಾಪದವೂ ಅಗಿ ಬಳಕೆಗೊಳ್ಳುತ್ತದೆ ಮೂಲತಃ ಬಳೆ. (ಕ್ರಿ) ಬೆಳೆ (ನಾ) ಎಂಬ ಎರಡು ಪದಗಳು ಇದ್ದವು ಅವೆರಡರ ಅರ್ಥವನ್ನೂ ಈಗ 'ಬೆಳೆ' ಎಂಬ ಒಂದೇ ಪದ ಹೊಂದಿದೆ. 'ಸೀರೆ' ಎಂಬ ಪದ ಮೂಲತಃ ಹೆಣೆಯಲ್ಪಟ್ಟ ವಸ್ತ್ರ ಎಂಬ ಅರ್ಥವನ್ನು ಮಾತ್ರ ಹೊಂದಿತ್ತು. ಮೂಲ ದಕ್ಷಿಣ ದ್ರಾವಿಡ ಭಾಷೆಯಲ್ಲಿ *ಚೀರ್ ಎಂಬ ಪದದಿಂದ ಇದು ನಿಷ್ಪನ್ನವಾಗಿದೆ. ಚ್ > ಸ್ ಬದ

ಲಾವಣೆ ಆಗಿ ಸೀರ್>ಸೀರೆ ಎಂದಾಗಿದೆ. ಸೀರೆ ಈಗ ಹೆಣ್ಣುಮಕ್ಕಳ ಬಟ್ಟೆಯೆಂಬ ಅರ್ಥವನ್ನು ಪಡೆದಿದೆ. ಅರ್ಥವು ಸಂಪೂರ್ಣ ಬದಲಾಗಬಹುದು ಉದಾಹರಣೆಗೆ- ಪೂರ್ವದ ಹಳಗನ್ನಡದಲ್ಲಿ 'ಅಪ್ಪ' ಎಂದರೆ ತಾಯಿ 'ಅಮ್ಮ' ಎಂದರೆ ತಂದೆ. ಅದೇ ಹೊಸಗನ್ನಡದಲ್ಲಿ ಇವುಗಳ ಅರ್ಥ ಸಂಪೂರ್ಣ ಬದಲಾಗಿದೆ. 'ಕೂಸು' ಎಂದರೆ ಕನ್ಯೆ 'ಕುನ್ನಿ' ಎಂದರೆ ಮದುವೆಗೆ ಬಂದ ಗಂಡು ಎಂಬರ್ಥವಿತ್ತು ಆದರೆ ಈಗ ಕೂಸು ಎಂದರೆ ಮಗು. ಕುನ್ನಿ ಎಂದರೆ ನಾಯಿಮರಿ ಎಂಬ ಅರ್ಥವುಂಟಾಗಿದೆ.

ಕೋಶ ಬೆಳವಣಿಗೆಯು ಬಳಕೆಯಲ್ಲಿರುವ ಭಾಷೆಯಲ್ಲಿ ನಿರಂತರವಾಗಿ ನಡದೇ ಇರುತ್ತದೆ ಒಂದು ಭಾಷೆಯ ಸಮಸ್ತ ಪದ ಸಮೂಹವನ್ನು ಕೋಶದಲ್ಲಿ ಅಳವಡಿಸಲಾಗುತ್ತದೆ. ಪದಗಳ ಸಂಕ್ಷೇಪ ವಿವರಣೆ ವರ್ಗೀಕರಣ ಕೋಶಗಳಲ್ಲಿರು ತ್ತದೆ. ಕೇಶಿರಾಜನು ಸಮಸಂಸ್ಕೃತ, ತತ್ಸಮ ತದ್ಭವ, ಹಾಗೂ ದೇಶ್ಯ ಎಂದು ಪದಗಳನ್ನು ವರ್ಗೀಕರಿಸಿ ಅಲ್ಲಲ್ಲಿ ಅವುಗಳ ಪಟ್ಟಿಯನ್ನೂ ನೀಡಿದ್ದಾನೆ. ಅಕ್ಷರ ಪ್ರಮಾಣ, ಆದಿಅಂತ್ಯಾಕ್ಷರ, ಅರ್ಥವೈವಿಧ್ಯ ವ್ಯಾಕರಣಾಂಶಗಳು ಇತ್ಯಾದಿಗಳ ಆಧಾರಗಳ ಮೇಲೆ ಕೋಶದಲ್ಲಿ ಸೇರುವ ಪದಗಳನ್ನು ವರ್ಗೀಕರಿಸಿ ವಿವರಿಸ ಲಾಗಿದೆ. ಅನ್ಯಭಾಷಾ ಪದಗಳ ಸ್ವೀಕರಣದಿಂದಾಗಿ ರೂಪುಗೊಂಡ ಕನ್ನಡ ಪದಗಳನ್ನು ಈ ಮೊದಲು ವಿವರಿಸಲಾಗಿದೆ (ನೋಡಿ : ಸ್ವೀಕರಣ)

ಕೆಲವು ವಿಶಿಷ್ಟ ಪದಗಳ ನಿಷ್ಪತ್ತಿಗಳನ್ನಿಲ್ಲಿ ಕೊಡಲಾಗಿದೆ.

87 ದಾರಿ :

ದ್ರಾವಿಡ ಪದ. ದಕ್ಷಿಣದ್ರಾವಿಡ ಭಾಷೆಯಲ್ಲಿ ಅತರ್–ಅದರ್ ಎಂಬ ರೂಪ. ತಮಿಳಿನ ತಿರುಕ್ಕುರುಳ್‌ದಲ್ಲಿ ಮಾರ್ಗ ಎಂಬರ್ಥದಲ್ಲಿ 'ಅದರ್' ಬಳಕೆ. ವರ್ಣ ಪಲ್ಲಟಗೊಂಡು 'ದಾರಿ' ಎಂಬುದಾಗಿ ಕನ್ನಡದಲ್ಲಿ ಬಳಕೆಗೆ ಬಂದಿರಬೇಕು, ವರ್ಣಪಲ್ಲಟ>ಅದ್‌ಅರ್+ಇ=ದ್ ಅಅರ್‌ಇ=ದ್‌ಆರ್‌ಇ=ದಾರಿ.

88 ಅಕ್ಕಿ :

ದ್ರಾವಿಡಪದ. ತಮಿಳಿನಲ್ಲಿ ಅರಿ ಅಂದರೆ ಬತ್ತ. 'ಅರಿಚಿ' ಎಂದರೆ ಅಕ್ಕಿ. ಕನ್ನಡದಲ್ಲಿ ಚ್>ಕ್ ಬದಲಾವಣೆಯಾಗಿ 'ಅರ್ ಕಿ' ಆಗಿ ಅನಂತರ ಸಮರೂಪ ಧಾರಣೆಗೊಂಡು ಅಕ್‌ಕ್‌ಇ> 'ಅಕ್ಕಿ' ರೂಪಗೊಂಡಿರಬೇಕು.

89 ಬಾಗಿಲು :

ದ್ರಾವಿಡಪದ. ದಕ್ಷಿಣ ದ್ರಾವಿಡದಲ್ಲಿ 'ವಾಯಿಲ್' ಅಂದರೆ ಇಲ್ (ಮನೆ)+ (ಬಾಯ್) 'ವಾಯಿಲ್'ದಿಂದ ಬಾಗಿಲ್>ಬಾಗಿಲು ರೂಪಗೊಂಡಿತು.

90 ಹಿತ್ತಲ :

ದ್ರಾವಿಡಪದ, ದಕ್ಷಿಣ ದ್ರಾವಿಡದಲ್ಲಿ ಇಲ್ (ಮನೆ) ಪಿಂತು (ಹಿಂದೆ)> ಪಿಂತ್+ಇಲ್>ಪಿಂತಿಲ್-ಹಿಂತಿಲ್ ಹಿತ್ತಿಲ್-ಹಿತ್ತಲು ರೂಪಗೊಂಡಿದೆ

9.1 ಹಾನ

ಮೂಲ ಕನ್ನಡ ಪದ. ಹಳಗನ್ನಡದಲ್ಲಿ 'ಅಪ್ಪನ್' ಎಂದರೆ ಇದ್ದಾನೆ. ಪ್>ಹ್ ಬದಲಾವಣೆ ನಡುಗನ್ನಡದಲ್ಲಿ ಆದ ಮೇಲೆ 'ಅಹನ್' ಆಯಿತು. ಆ ಮೇಲೆ ವರ್ಣಪಲ್ಲಟ (ಅಹ್ಅನ್-ಹ್ಅಅನ್-ಹ್ಅನ್) ಆಗಿ 'ಹಾನ್' ಆಯಿತು. ಹಾನ ಕಲಬುರ್ಗಿ ಕನ್ನಡ ಉಪಭಾಷೆಯಲ್ಲಿ ಆಡುನುಡಿಯಲ್ಲಿ ಬಳಕೆಯಲ್ಲಿದೆ.

91.1 ಇದೇ ರೀತಿ ಹಾಳ, ಹಾರ, ಹೌದು ರೂಪಗಳಾಗಿವೆ.

ಅಪ್ಪಳ್>ಅಹಳ್>ಹಾಳ, ಅಪ್ಪರ್>ಅಹರ್>ಹಾರ್,
ಅಪ್ಪುದು>ಅಹುದು>ಹೌದು.

92 ಸಾಬೂನು-ಸಾಬಾಣ

ಈ ಪದ ಫ್ರೆಂಚ್ ಭಾಷೆಯಿಂದ ಕನ್ನಡಕ್ಕೆ ಬಂದಿದೆ. *Savon*-ಸಾವೊನ್>ಸಾಬೊನ್>ಸಾಬೂನು>ಸಾಬಾಣ ಎಂದು ರೂಪ ಬೆಳವಣಿಗೆಯಾಗಿ ಕನ್ನಡದಲ್ಲಿ ಬಳಕೆಗೊಳ್ಳುತ್ತಿದೆ. ಇಲ್ಲಿ ವ್>ಬ್, ಸ್ವರಾನುರೂಪ್ಯತೆ, ಹಾಗೂ ನ್>ಣ್ ಬದಲಾವಣೆ ನಡೆದಿವೆ.

93 ಹೊತ್ತಗೆ

*ಪುಸ್ತಕ (ಸಂ)>ಪುತ್ತಕೈ (ತಮಿಳು)>ಪುತ್ತಗೈ> ಪೊತ್ತಗೆ (ಕನ್ನಡ) > ಹೊತ್ತಗೆ. ಸಂಸ್ಕೃತದಿಂದ ತಮಿಳಿನ ಮೂಲಕ ಕನ್ನಡಕ್ಕೆ ಬಂದ ಪದ.

94 ಹೊಗಳು

ದ್ರಾವಿಡ ಪದ. ವಕ್‌ಕ್ + ಉಲಿ (ವಕ್ಕ್ ಎಂಬ ಧ್ವನಿ) ವಕ್ಕಲಿ > ವಕ್ಕಳಿ > ವಕುಲಿ > ವಗುಲಿ > ವಗುಳಿ > ಬಗುಳಿ > ಬಗುಳು > ಬೊಗಳು.

95 ಅಸಡ್ಡೆ

ಸಂಸ್ಕೃತ 'ಅಶ್ರದ್ಧಾ' ಪದದಿಂದ ತಮಿಳಿನ ಮೂಲಕ ಕನ್ನಡಕ್ಕೆ ಬಂದಿದೆ. ಅಶ್ರದ್ಧಾ (ಸಂ) > ಅಚಟ್ಟೆ (ತ) > ಅಸಡ್ಡೆ (ಕ). ಸಂಸ್ಕೃತದಲ್ಲಿ ಮೂಲಾರ್ಥ ಶ್ರದ್ಧೆ ಇಲ್ಲದ ಆದರೆ ಕನ್ನಡದಲ್ಲಿ ತಿರಸ್ಕಾರ (ಅರ್ಥವ್ಯತ್ಯಾಸ).

96 ತಂಬಿಗೆ

ಇದರಲ್ಲಿ ತಾಮ್ರ+ಕೈ ಎಂಬ ಎರಡು ಪದಗಳು ಸೇರಿವೆ. ಸಂಸ್ಕೃತದ ತಾಮ್ರ ಪ್ರಾಕೃತದಲ್ಲಿ ತಂಬ. ತಮಿಳು-ಕನ್ನಡಗಳಲ್ಲಿ ತಂಬ+ಕೈ > ತಂಬಗೈ > ತಂಬಿಗೆ ಎಂಬ ರೂಪಗಳನ್ನು ಪಡೆದಿರಬೇಕು. ಕೈಯಲ್ಲಿ ಹಿಡಿಯುವ ತಾಮ್ರದ ಪಾತ್ರೆ ಎಂಬರ್ಥ ಇದಕ್ಕೆ ಇದ್ದಿರಬೇಕು.

97 ನವಲ

'ನವಿಲು' ಪದ ಆಡುನುಡಿಯಲ್ಲಿ 'ನವಲ' ಆಗಿದೆ. ಇದು ದ್ರಾವಿಡ ಪದ. ಮೂಲ ದಕ್ಷಿಣ ದ್ರಾವಿಡದಲ್ಲಿ 'ಞಮಲಿ' ರೂಪ ನವಿಲಿಗೆ ದೊರೆಯುತ್ತದೆ. ಮಲೆಯಾಳಂ ಮುಂತಾದ ಭಾಷೆಗಳಲ್ಲಿ ಶಬ್ದದ ಆರಂಭದಲ್ಲಿ 'ಞ' ಉಳಿದು ಕೊಂಡು ಬಂದಿದೆ. ಕನ್ನಡದಲ್ಲಿ ಅದು ಶಬ್ದಾರಂಭದಲ್ಲಿಲ್ಲ. ಕಾರಣ ಞ > ನ ಆಗುತ್ತದೆ. ಞಮಲಿ > ನಮಲಿ > ನವಲಿ > ನವಿಲು > ನವಲ.

98 ಇಡ್ಲಿ

ಇದು ಅಚ್ಚಕನ್ನಡ ಪದ. ಕನ್ನಡದಿಂದ ತಮಿಳು-ಮಲೆಯಾಳಂ-ತೆ. ಮುಂತಾದ ಭಾಷೆಗಳಿಗೆ ಹೋಗಿದೆ. ಕನ್ನಡದಲ್ಲಿ ಇಡ್ಡಲಿಗೆ > ಇಡ್ಡಲಿ > ... ರೂಪ ಬೆಳವಣಿಗೆಯಾಗಿದೆ. ಇಡ್ಲಿ ಇದು ಒಂದು ಬಗೆಯ ತಿಂಡಿಯ ಹೆಸ...

...ನ್ನುವ ಪದಾರ್ಥ ಎಂಬರ್ಥವುಳ್ಳದ್ದು ... ...ರಿಕೆ, ಚಟ ಎಂಬ ಭಿನ್ನ ಅರ್ಥಗಳಲ್ಲಿಯ...